॥ ಶ್ರೀ ॥

ಸಾ ವಿದ್ಯಾ ಯಾ ವಿಮುಕ್ತಯೇ




# ಪ್ರಬಂಧ-ಪ್ರಕಾಶ

[ಹಿರಿಯರ ಆವೃತ್ತಿ]

ಪರಿಶೋಧಿಸಿ ಬೆಳೆಸಿದುದು.

ಶ್ರೀಮಾನ್ ಗೋಕಾಕ ವಿನಾಯಕರಾಯರ ಮುನ್ನುಡಿ



ಬರೆದವರು:

**ದೇಶಪಾಂಡೆ ಮನೋಹರರಾಯರು,**

ಎಮ್. ಎ., ಎಸ್. ಟಿ. ಸಿ.

ಮುಖ್ಯಾಧ್ಯಾಪಕರು, ಹೈಸ್ಕೂಲು,

ಅಥಣಿ.

ಜನೆವರಿ ೧೯೫೨

# ಪರಿವಿಡಿ

# ಮೊದಲನೆಯ ಮುದ್ರಣದ ಅರಿಕೆ

---

ನಮ್ಮ ನಾಡು ಒಂದು ಕಾಲಕ್ಕೆ ರಸಿಕರ ನೆಲೆವೀಡಾಗಿತ್ತು. ಓದದೆಯೂ ನಮ್ಮವರನೇಕರು ಕಾವ್ಯಪ್ರಯೋಗದಲ್ಲಿ ಪರಿಣತಮತಿಗಳಾಗಿದ್ದರು. ಬರಹದ ಬಲ್ಮೆಯು-ಲೇಖನ ಕೌಶಲ್ಯವು-ಅವರಲ್ಲಿ ಪೂರ್ತಿಯಾಗಿ ನೆಲೆಗೊಂಡಿತ್ತು. ಆದರೆ ಇಂದದು ಹಿಂದಿನ ಮಾತಾಗಿದೆ.

ಈ ಸ್ಥಿತಿಯನ್ನು ಹೋಗಲಾಡಿಸಲು ನಾವು ಮೊದಲಿಂದಲೇ ಯತ್ನಿಸಬೇಕಲ್ಲವೇ? ಶಾಲೆ-ಕಾಲೇಜುಗಳಲ್ಲಿಯ ನಮ್ಮ ವಿದ್ಯಾರ್ಥಿಗಳಿಗೆ ಈ ವಿಷಯದ ಪಾಠಗಳು ಸರಿಯಾಗಿ ದೊರೆತರೆ, ಮುಂದೆ ಅವರಲ್ಲಿಯ ಕೆಲವರಾದರೂ ಬಲ್ಲಿದರಾದ ಸಾಹಿತಿಗಳಾಗಲಿಕ್ಕಿಲ್ಲವೇ? ನಮ್ಮ ನಾಡಿಗೆ ಕೀರ್ತಿಯನ್ನು ತರಲಿಕ್ಕಿಲ್ಲವೇ?

ಅಂಥ ಎಳೆಯರ ನೆರವಿಗಾಗಿಯೇ ನನ್ನ ಈ ಪ್ರಯತ್ನ. ಕನ್ನಡದಲ್ಲಿ ಲೇಖನ ಕಲೆಯನ್ನು ಕುರಿತು ಬರೆಯಲಾದ ಗ್ರಂಥಗಳು ತೀರ ವಿರಲ. ಅವಿನ್ನೂ ಸಿದ್ಧವಾಗಬೇಕು. ಪ್ರಬಂಧದ ವಿಷಯದ ಪರಿಚಯವು ಪ್ರೌಢ ಬರಹಗಳ ಪೂರ್ವಸಿದ್ಧತೆಯು. ಪ್ರಬಂಧದ (Composition) ರಹಸ್ಯವನ್ನರಿತ ಬಾಲಕನು ಮುಂದೆ ಬೇರೆ ಬೇರೆ ಬಗೆಯ ಬರಹಗಳನ್ನು ಪಳಗಿದ ಕೈಯಿಂದ ಬರೆಯಬಹುದು.

ಪ್ರತಿಯೊಂದು ಭಾಷೆಯಲ್ಲಿ ಪ್ರಬಂಧ ಶಿಕ್ಷಣಕ್ಕೆ ಅಗ್ರಸ್ಥಾನವು ದೊರೆತಿರುವದು. ಆದರೆ ನಮ್ಮಲ್ಲಿ ಇದಕ್ಕೆ ಸಾಕಷ್ಟು ಗಮನವು ಕೊಡಲಾಗಿಲ್ಲ. ಅದರ ವಿವಿಧಾಂಗಗಳ ಪರಿಚಯವನ್ನು ಬಾಲಕರಿಗೆ ಚೆನ್ನಾಗಿ ಮಾಡಿಕೊಡುವ ಏರ್ಪಾಡಾಗಿಲ್ಲ. ಪ್ರಬಂಧದ ಸಾಂಗೋಪಾಂಗ ವಿವೇಚನೆಯನ್ನು ಮಾಡಿದ ಪುಸ್ತಕಗಳು ನಮ್ಮಲ್ಲಿ ವಿಶೇಷವಾಗಿ ಇಲ್ಲದ ಮೂಲಕ ಬಾಲಕರು ಬಹಳ ತೊಂದರೆಗೆ ಗುರಿಯಾಗಬೇಕಾಗುತ್ತಿದೆ. ಇವನ್ನೆಲ್ಲ ಕಡಿಮೆ ಮಾಡಲು ನಾವಿಲ್ಲಿ ಯತ್ನಿಸಿದ್ದೇವೆ.

ಈ ಗ್ರಂಥದ ಪರಿವಿಡಿಯನ್ನು ಕಂಡೊಡನೆ ರಚನೆಯ ಅಚ್ಚುಕಟ್ಟೂ, ವಿಷಯದ ವೈವಿಧ್ಯವೂ ಓದುಗರನ್ನು ಬರಮಾಡಿಕೊಳ್ಳುವವು. ಕೊಂಚ ಮುಂದಕ್ಕೆ ಸಾಗಿದಲ್ಲಿ ವಿವೇಚನೆಯ ಸುಬೋಧತೆಯೂ, ಶೈಲಿಯ ಸರಳತೆಯೂ, ಉದಾಹರಣೆಗಳ ಉದ್ಬೋಧಕತೆಯೂ, ಅಭ್ಯಾಸಗಳ ಹೇರಳವೂ ಅವರ ದೃಷ್ಟಿಗೆ ಬೀಳುವವು. ಇವು ಓದುಗರಿಗೆ ಬೆಳಕನ್ನು ನೀಡುವವಲ್ಲದೆ, ಅವರಲ್ಲಿ ನವಚೈತನ್ಯವನ್ನು ಬೀರದಿರವು. ಈವರೆಗೆ ಪ್ರಬಂಧ-ಪ್ರಕಾಶವು ಇಂಗ್ಲಿಷ್ ಹಾಗೂ ಕನ್ನಡ ಶಾಲೆಯಲ್ಲಿಯ ೬ನೆಯ-೭ನೆಯ ತರಗತಿಯ ವಿದ್ಯಾರ್ಥಿಗಳಿಗೆ ತೀರ ಉಪಯುಕ್ತವಿರುವದು. ಅವರಿಗಿದು ಪರೀಕ್ಷೆಯಲ್ಲಿ ನೆರವಾಗುವದಲ್ಲದೆ, ವ್ಯವಹಾರದಲ್ಲಿಯೂ ಲೇಖನಕಲೆಯಲ್ಲಿಯೂ ಸಹಾಯವನ್ನು ನೀಡುವದರಲ್ಲಿ ಸಂದೇಹವಿಲ್ಲ.

ಪ್ರಬಂಧ-ಪ್ರಕಾಶದಲ್ಲಿ ನಮ್ಮ ನಾಡಿನ ಹಿರಿ-ಬರಹಗಾರರನೇಕರ ಗ್ರಂಥಗಳಲ್ಲಿಯ ಅತ್ಯುತ್ತಮವಾದ ಅವತರಣಗಳನ್ನೂ, ನಿಬಂಧಗಳನ್ನೂ ಉಪಯೋಗಿಸಿರುವೆನು. ಇದರ ಸೊಬಗೂ ಉಪಯುಕ್ತತೆಯೂ ಅವುಗಳಿಂದಲೇ ಬೆಳೆದಿದೆ ಅನ್ನಬಹುದು. ಈ ಬಗೆಯ ಅನುಕೂಲತೆಯನ್ನು ಒದಗಿಸಿಕೊಟ್ಟಿದ್ದಕ್ಕಾಗಿ ಅವರೆಲ್ಲರಿಗೆ ನನ್ನ ಹಾರ್ದಿಕ ಕೃತಜ್ಞತೆಯನ್ನು ಸಲ್ಲಿಸದಿರಲಾರೆ.

ಕೊನೆಗೆ, ಕೈಬರಹವನ್ನು ಮೊದಲಿನಿಂದ ಕೊನೆಯವರೆಗೆ ಸೂಕ್ಷ್ಮರೀತಿಯಿಂದ ಓದಿ, ಸೂಕ್ತ ಸಲಹೆಗಳನ್ನಿತ್ತ ನನ್ನ ಗೆಳೆಯರಾದ ಪ್ರೊ. ಮುಗಳಿ ರಂಗರಾಯರಿಗೂ ಮುದ್ದಾದ ಮುನ್ನುಡಿಯನ್ನು ಬರೆದು ಪ್ರೋತ್ಸಾಹಿಸಿದ ಪ್ರೊ. ಗೋಕಾಕ ವಿನಾಯಕರಾಯರಿಗೂ ತಮ್ಮ ಗ್ರಂಥದಲ್ಲಿಯ ಮೇಳ-ದೇಸಿ-ಪಡೆನುಡಿಗಳಲ್ಲಿಯ ಕೆಲವನ್ನು ಆಯ್ದುಕೊಳ್ಳಲು ಅನುಮತಿಯನ್ನಿತ್ತ ಶ್ರೀ. ಜೋಶಿ ಶಂಕರರಾಯರಿಗೂ ನನ್ನ ಅನಂತ ವಂದನೆಗಳು.

ಶಾಂತಿಕುಂಜ
ವಿಕ್ರಮಪುರ, ಅಥಣಿ
ತಾರೀಖು ೧-೬-೪೯

ನಿಮ್ಮ
**ಮ. ಶ್ರೀ. ದೇಶಪಾಂಡೆ**

## ಎರಡನೆಯ ಮುದ್ರಣದ ಅರಿಕೆ

ಈ ಗ್ರಂಥಕ್ಕೆ ಇಷ್ಟು ಬೇಗ ಎರಡನೆಯ ಮುದ್ರಣದ ಸೌಭಾಗ್ಯ ದೊರೆತುದು ಕನ್ನಡ ನಾಡಿನ ನನ್ನ ಹಿರಿ-ಕಿರಿಯ ಬಂಧುಗಳ ಪ್ರೋತ್ಸಾಹದ ಫಲವೇ ಸರಿ. ಇದರಲ್ಲಿಯ ಗುಣಗಳನ್ನು ಸರಿಯಾಗಿ ಗೌರವಿಸಿದ್ದಕ್ಕಾಗಿ ನಾನವರೆಲ್ಲರನ್ನೂ ಅಭಿನಂದಿಸದಿರಲಾರೆ. ಈ ಬಗೆಯ ಪ್ರೋತ್ಸಾಹವು ಹೆಚ್ಚಾಗುತ್ತ ಹೋದಹಾಗೆ ಇದರಲ್ಲಿ ಹೊಸ ಹೊಸ ಸುಧಾರಣೆಗಳನ್ನು ಮಾಡಲು ಅನುಕೂಲವಾಗುವುದು. ಓದುಗರ ಬೇಡಿಕೆಯು ತೀರ ಪ್ರಬಲವಾದುದರಿಂದ ಈ ಆವೃತ್ತಿಯನ್ನು ಅವಸರದಿಂದ ಹೊರಡಿಸಬೇಕಾಯಿತು. ಆದುದರಿಂದ ಮೊದಲನೆಯ ಆವೃತ್ತಿಯಲ್ಲಿಯ ಮುದ್ರಣ ದೋಷಗಳನ್ನು ಮತ್ತು ಇನ್ನಿತರ ದೋಷಗಳನ್ನು ಸರಿಪಡಿಸುವದೂ, ಕೆಲ ಬಿಗಿಯೆನಿಸಿದ ಶಬ್ದಸಮೂಹಗಳ ಎದುರು ಸುಲಭ ಪ್ರತಿಶಬ್ದಗಳನ್ನಿಡುವುದೂ, ಇಷ್ಟೇ ಸಾಧ್ಯವಾಯಿತು. ಇನ್ನಾವ ಸುಧಾರಣೆಗಳನ್ನೂ ಮಾಡುವದಾಗಲಿಲ್ಲ. ಇದನ್ನು ಕಲಿಸುವ ಕಾಲಕ್ಕೆ ಇದರಲ್ಲಿ ಕಂಡು ಬಂದ ಲೋಪಗಳನ್ನೂ, ಮತ್ತು ಇದರಲ್ಲಿ ಮಾಡಬೇಕಾದ ಸುಧಾರಣೆಗಳನ್ನೂ, ನುರಿತ ಅಧ್ಯಾಪಕರು ನನಗೆ ತಿಳಿಸಿದಲ್ಲಿ ನಾನವರಿಗೆ ತುಂಬಾ ಉಪಕೃತನಾಗುವೆನು.

ಕೊನೆಗೆ ಈ ಗ್ರಂಥದ ಸಂಬಂಧದಿ ತಮ್ಮ ಬೆಲೆಯುಳ್ಳ ಅಭಿಪ್ರಾಯವನ್ನು ಕಳುಹಿಸಿ ಕೊಟ್ಟ ಸಜ್ಜನರನ್ನೂ, ಇದನ್ನು ಇಷ್ಟು ಬೇಗ ಅಂದವಾಗಿ ಮುದ್ರಿಸಿಕೊಟ್ಟದ್ದಕ್ಕಾಗಿ ಶ್ರೀ ಮಹಾವೀರ ಮುದ್ರಣಾಲಯದ ಒಡೆಯರಾದ ಶ್ರೀ. ಚೌಗುಲೆ ಭೀಮರಾಯರನ್ನೂ ವಂದಿಸಿ ವಿರಮಿಸುವೆ.

ಶಾಂತಕುಂಜ.
ವಿಕ್ರಮಪುರ, ಅಥಣಿ
ತಾರೀಖು [illegible]-೭-೫೦

ನಿಮ್ಮ
ಮ ಶ್ರೀ. ದೇಶಪಾಂಡೆ

## ಮೂರನೆಯ ಮುದ್ರಣದ ಅರಿಕೆ

ಇದು ಮೂರನೆಯ ಮುದ್ರಣ. S. S. C. ಪರೀಕ್ಷೆಯ ಹೊಸ ಅಭ್ಯಾಸಕ್ರಮಕ್ಕನುಗುಣವಾಗಿ ಇದರಲ್ಲಿ ಹಲಕೆಲವು ಮಾರ್ಪಾಡುಗಳನ್ನು ಮಾಡಿದೆ. ವಿಶೇಷವಾಗಿ ಇದರಲ್ಲಿಯ ಭಾಷಾಂತರ ವಿಭಾಗವನ್ನು ಕಡಿಮೆ ಮಾಡಿ, ಅದರ ಸ್ಥಳದಲ್ಲಿ 'ರಹಸ್ಯಗ್ರಹಣ' (Comprehension) ಎಂಬ ಸವಿಭಾಗವು ಸೇರಿಸಲಾಗಿದೆ. ಬೇರೆ ಬೇರೆ ಅಭ್ಯಾಸಗಳಲ್ಲಿ ಹೆಚ್ಚಿನ ವಿಷಯಗಳನ್ನು ಸೇರಿಸಿ ಅವುಗಳ ಉಪಯುಕ್ತತೆಯನ್ನು ಬೆಳೆಯಿಸಲಾಗಿದೆ. ಕೆಲ ಹೊಸ ನಿಬಂಧಗಳನ್ನೂ ನಿಬಂಧಗಳ ಟಿಪ್ಪಣಿಗಳನ್ನೂ ಕೊಡಲಾಗಿದೆ. ಈ ಮೇರೆಗೆ ಸುಮಾರು ೫೦ ಪುಟಗಳ ವಿಷಯವು ಇದರಲ್ಲಿ ಹೆಚ್ಚಿಗೆ ಬಂದಿದೆ.

ವಿಷಯ ವಿಸ್ತಾರದ ಜತೆಯಲ್ಲಿ, ಇದರಲ್ಲಿ ಬೇರೆ ಕೆಲ ಸುಧಾರಣೆಗಳನ್ನು ಮಾಡಲಾಗಿದೆ. ಮೈಸೂರು ಸೀಮೆಯ ನನ್ನ ಕೆಲ ಗೆಳೆಯರ ಸೂಚನೆಯ ಮೇರೆಗೆ, ಇದರ ಭಾಷೆಯಲ್ಲಿಯೂ ಕೆಲ ಮಾರ್ಪಾಟುಗಳನ್ನು ಮಾಡಿದೆ. ಅದರ ಮೂಲಕ, ಈ ಗ್ರಂಥವು ಕನ್ನಡ ನಾಡಿನ ಎಲ್ಲ ಪ್ರದೇಶಗಳಲ್ಲಿಯೂ ಉಪಯೋಗಿಸಲು ಬರುವಂತೆ ಅರ್ಹತೆಯನ್ನು ಪಡೆದಿದೆ ಎನ್ನಲು ಅಡ್ಡಿಯಿಲ್ಲ.

ಕನ್ನಡ ನಾಡಿನ ಹಿರಿಯ ಶಿಕ್ಷಕರು ಇದನ್ನು ಹೆಚ್ಚಾಗಿ ಬಳಸಿ ಕನ್ನಡ-ನಾಡು-ನುಡಿಯ ಬಗೆಗೆ ಪ್ರೀತಿ ಗೌರವಗಳನ್ನು ಬಾಲಕ-ಬಾಲಿಕೆಯರ ಎಳೆ-ಎದೆಯಲ್ಲಿ ಮೊಳೆಯಿಸುವರೆಂದೂ, ಬೆಳೆಯಿಸುವರೆಂದೂ ಆಶಿಸುವೆ.

ಶಾಂತಿಕುಂಜ,
ವಿಕ್ರಮಪುರ, ಅಥಣಿ.
ತಾರೀಖು ೫-೧-೫೩

ತಮ್ಮ
ಮ. ಶ್ರೀ. ದೇಶಪಾಂಡೆ

# ಮುನ್ನುಡಿ

‘ಪ್ರಬಂಧ–ಪ್ರಕಾಶ’ ವೆಂಬ ಈ ಗ್ರಂಥವನ್ನು ಬರೆದು ಕನ್ನಡ ನಾಡಿನಲ್ಲಿಯ ವಿದ್ಯಾರ್ಥಿ ವರ್ಗಕ್ಕೆ ಬಹಳ ದೊಡ್ಡ ಸಹಾಯ ಮಾಡಿದ ಶ್ರೀ. ದೇಶಪಾಂಡೆ ಮನೋಹರರಾಯರನ್ನು ನಾನು ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ. ಇಷ್ಟೆಲ್ಲ ಬೇರೆ ಬೇರೆ ವಿಷಯಗಳ ಮೇಲಿನ ಮಾಹಿತಿಯನ್ನು ಒತ್ತಟ್ಟಿಗೆ ಕಲೆಹಾಕಿ ಸುಲಭಗ್ರಾಹ್ಯವಾದ ರೀತಿಯಲ್ಲಿ ಅದನ್ನು ನಿರೂಪಿಸುವ ಗ್ರಂಥವೆಂದರೆ ಕನ್ನಡದಲ್ಲಿ ಇದೇ ಮೊದಲನೆಯದೆಂದು ಹೇಳಬಹುದು. ಅನೇಕ ವರ್ಷಗಳಿಂದ ಇಂಥದೊಂದು ಗ್ರಂಥವು ಬೇಕಾಗಿತ್ತು. ಶ್ರೀ. ಮನೋಹರರಾಯರು ಈಗ ಕೊರತೆಯನ್ನು ಹೋಗಲಾಡಿಸಿದ್ದಾರೆ.

ವಾಕ್ಯರಚನೆ, ಸಾರಸಂಗ್ರಹ, ಗುಣಗ್ರಹಣ, ನಿಬಂಧ ಲೇಖನ ಮೊದಲಾದ ಬೇರೆ ಬೇರೆ ವಿಷಯಗಳನ್ನು ನಿರೂಪಿಸುವದರಲ್ಲಿ ಲೇಖಕರು ಪ್ರಶಂಸನಾರ್ಹವಾದ ಕೌಶಲ್ಯವನ್ನು ತೋರಿಸಿದ್ದಾರೆ. ಉದಾಹರಣೆಗಳೆಂದು ಅವರು ಎತ್ತಿಟ್ಟ ಅನೇಕ ಗದ್ಯ ಪದ್ಯ ವಿಭಾಗಗಳು ಬಹಳ ಗಂಭೀರವಾಗಿವೆ. ಅವುಗಳಿಂದ ವಿಷಯಜ್ಞಾನವಷ್ಟೇ ಆಗುವದಿಲ್ಲ: ವೀರವೃತ್ತಿಯನ್ನೂ, ಉದಾತ್ತ ರೀತಿಯನ್ನೂ ಕಲಿಸುವ ಒಂದು ಸಾಹಿತ್ಯ ಮಾಲೆಯನ್ನು ಓದಿದ ಅನುಭವವನ್ನು ‘ಪ್ರಬಂಧ–ಪ್ರಕಾಶ’ದಲ್ಲಿಯ ಅವತರಣಿಕೆಗಳು ತಂದುಕೊಡುತ್ತವೆ. ಆದಕಾರಣ ಈ ಪುಸ್ತಕದ ಪ್ರಯೋಜನವು ಇಮ್ಮಡಿಯಾಗಿ ಹೆಚ್ಚಿದೆ.

ವಿದ್ಯಾಧಿಕಾರಿಗಳಿಗೆ ಕೊಡಲು ಶಕ್ಯವಿದ್ದ ಎಲ್ಲ ಉತ್ತೇಜನವನ್ನು ಪಡೆಯಲು ‘ಪ್ರಬಂಧ–ಪ್ರಕಾಶ’ವು ಅರ್ಹವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಶ್ರೀ. ಮನೋಹರರಾಯರು ಆಧುನಿಕ ಕನ್ನಡ ಸಾಹಿತ್ಯದ ಪುರಸ್ಕರ್ತರಲ್ಲಿ ಒಬ್ಬರಾಗಿದ್ದಾರೆ. ಸರ್ವಜ್ಞನ ಕಾವ್ಯವನ್ನು ಬಹು ಸೂಕ್ಷ್ಮವಾಗಿ ವಿಮರ್ಶಿಸಿ ಇಂದಿನ ನೀತಿವಿದ ವಿಮರ್ಶಕರಲ್ಲಿ ಮೇಲ್ತರಗತಿಯವರೆಂದು ಕರ್ನಾಟಕದಲ್ಲಿ ಹೆಸರಾಗಿದ್ದಾರೆ. ಒಂದು ವಿಶಿಷ್ಟ ರೀತಿಯ ಶೈಕ್ಷಣಿಕ, ನೈತಿಕ, ಹಾಗೂ ಆತ್ಮಿಕ ಸಾಹಿತ್ಯವು ಇವರಿಂದ ಒದಗುವೆಂದು ನಾವು ದಾರಿ ಕಾಯುತ್ತಲಿದ್ದೇವೆ.

ಇಂಥ ಬಲ್ಲಿದರು ಬರೆದ 'ಪ್ರಬಂಧ-ಪ್ರಕಾಶ' ದ ಬೆಳಕಿನಲ್ಲಿ ಕಿರಿಯರು ದಾರಿಯನ್ನು ಸಮನಾಗಿ ತುಳಿಯುವರೆಂದೂ, ಹಿರಿಯರು ಸಂತೋಷ ಗೊಳ್ಳುವರೆಂದೂ ನಾನು ನಂಬಿದ್ದೇನೆ. ಈ ಗ್ರಂಥದ ಕೊರತೆಗಳೇನಾದರೂ ಇದ್ದರೆ, ಉಪಯೋಗಾಂತ್ಯದಲ್ಲಿ ಅವು ಗೊತ್ತಾಗಬೇಕಾಗಿದೆ. ಇಂಥವೇನಾದರೂ ಕಣ್ಣಿಗೆ ಬಿದ್ದರೆ ವಾಚಕ ವೃಂದವು ಲೇಖಕರಿಗೆ ಅಗತ್ಯವಾಗಿ ತಿಳಿಸಬೇಕು. ಅವನ್ನು ತುಂಬಿಕೊಳ್ಳುವದರಿಂದ ಪುಸ್ತಕದ ಉಪಯುಕ್ತತೆಯು ನಿಶ್ಚಯವಾಗಿಯೂ ಹೆಚ್ಚುವುದು.

ಸಾಂಗಲಿ,
ತಾ. ೧-೪-೩೯

ವಿ. ಕೃ. ಗೋಕಾಕ
*M. A.* (BOM.), *B. A.* (OXON)
Principal, Willingdon College, Sangli

# ಪ್ರಬಂಧ-ಪ್ರಕಾಶ



## ಮೊದಲನೆಯ ಭಾಗ – ವಾಕ್ಯಗಳು.

### ೧. ಪೀಠಿಕೆ

**೧. ವಾಕ್ಯವೆಂದರೇನು ?**

ಇದೊಂದು ಪೂರ್ಣವಾದ ಅರ್ಥವನ್ನು ಹೇಳುವ ಶಬ್ದಗಳ ಗುಂಪು. ಇದರಲ್ಲಿ ಒಂದೇ ಶಬ್ದವಿರಬಹುದು; ಅನೇಕ ಶಬ್ದಗಳೂ ಇರಬಹುದು.

ಉ:— i) ಬಾ, ಹೋಗು, ನೋಡು.

ii) ನಾನು ಇಲ್ಲಿ ಬಂದೆನು. ನಾನು ಅಲ್ಲಿ ಹೋದೆನು. ನಾನು ಅದನ್ನು ನೋಡಿದೆನು.

**ಸೂಚನೆ :**— (ಅ) **೧ನೆಯವು** ಒಂದೇ ಶಬ್ದದ ವಾಕ್ಯಗಳು. ಅವುಗಳಲ್ಲಿ ' ನೀನು ' ಎಂಬ ಕರ್ತೃಪದವು ಗುಪ್ತವಾಗಿರುವುದು. ಇಂಥ ವಾಕ್ಯಗಳು ಮಾತಿನ ಭಾಷೆಯಲ್ಲಿ ಹೆಚ್ಚು.

(ಆ) **೨ನೆಯವು** ಅನೇಕ ಶಬ್ದಗಳಿಂದ ಕೂಡಿದವುಗಳು.

ಈ ಎರಡೂ ವಿಧದ ವಾಕ್ಯಗಳಲ್ಲಿ ಕ್ರಿಯೆಯನ್ನು ಸೂಚಿಸುವ ಶಬ್ದವು ಇದ್ದೇತೀರುವುದು. ಅದಿಲ್ಲದೆ ವಾಕ್ಯವೇ ಸಂಭವಿಸುವುದಿಲ್ಲ. ಕರ್ತೃಸೂಚಕ ಶಬ್ದವೂ ಪ್ರತಿವಾಕ್ಯಕ್ಕೆ ಅವಶ್ಯವಾದುದು. ಒಮ್ಮೊಮ್ಮೆ ಅದನ್ನು 'ಅಧ್ಯಾಹಾರ(ಗುಪ್ತ) ವಾಗಿ ಇಡಬಹುದು.

**೨. ವಾಕ್ಯದ ಮಹತ್ವ :—**

ವಾಕ್ಯರಚನೆಯ ಜ್ಞಾನವು ಪ್ರಬಂಧರಚನೆಗೆ ತಳಹದಿಯು. ಅದರ ಮೇಲೆಯೆ ಪ್ರಬಂಧದ ಕಟ್ಟಡವು ನಿಲ್ಲುವುದು. ಅದೊಂದು ಪ್ರಬಂಧವೃಕ್ಷದ ಬೀಜವೆಂದರೂ ಸಲ್ಲುವುದು. ಏಕೆಂದರೆ ಅದರೊಳಗಿಂದಲೇ ವಿವಿಧ ಪ್ರಬಂಧಗಳು ಹುಟ್ಟುವವು. ಇನ್ನೊಂದು ದೃಷ್ಟಿಯಿಂದ ವಾಕ್ಯಗಳನ್ನು ಪ್ರಬಂಧ ಮಾಲೆಯಲ್ಲಿಯ ಹೂಗಳೊಡನೆಯೂ ಸರಿಹೋಲಿಸಬಹುದು. ಇಷ್ಟು ನಿಕಟಸಬಂಧವಿದೆ, ವಾಕ್ಯ-ಪ್ರಬಂಧಗಳಲ್ಲಿ. ಆದುದರಿಂದ ಪ್ರಬಂಧವನ್ನು

ಬರೆಯಲು ಪ್ರವೀಣರಾಗಬಯಸುವವರು ಮೊದಲು ವಾಕ್ಯವನ್ನು ರಚಿಸುವಲ್ಲಿ ಪ್ರಾವೀಣ್ಯವನ್ನು ಪಡೆಯಲೇಬೇಕು.

**೩. ವಿವೇಚನೆಯ ಕ್ರಮ :—**

ಈ ವಿಭಾಗದಲ್ಲಿ ವಾಕ್ಯಗಳ ರಚನೆಗೆ ಅವಶ್ಯವಾದ ಕೆಲವು ವಿಷಯಗಳನ್ನು ಕುರಿತು ಬರೆಯಲಾಗುವುದು. (೧) ಮೊದಲು ವಾಕ್ಯಾಂಗವಾದ ಶಬ್ದಗಳ ಆಯ್ಕೆ (ಆರಿಸುವಿಕೆ), ವಾಕ್ಯದಲ್ಲಿಯ ಅವುಗಳ ಸಂಖ್ಯೆ-ಕ್ರಮ, ಈ ವಿಷಯವನ್ನು ವಿವರಿಸಲಾಗುವುದು. (೨) ತರುವಾಯ ವಾಕ್ಯದ ರಚನೆಯ ವಿಚಾರ. ಅದು ಶುದ್ಧವೂ, ಸುಲಭವೂ, ಸುಂದರವೂ ಹಾಗು ಪರಿಣಾಮಕರವೂ ಆಗಲು ಏನು ಮಾಡಬೇಕೆಂಬುದನ್ನು ಸೂಚಿಸಲಾಗುವುದು. (೩) ಇಷ್ಟಾದ ಮೇಲೆ ವಾಕ್ಯರೂಪದಲ್ಲಿಯ ಪರಿವರ್ತನೆಯನ್ನೂ (೪) ವಾಕ್ಯಸಂಯೋಜನ ರೀತಿಯನ್ನೂ ವಿವರಿಸುವೆವು. ಇವೆಲ್ಲವುಗಳ ಸೂಕ್ಷ್ಮವಾದ ಅಭ್ಯಾಸದಿಂದ **ವಿದ್ಯಾರ್ಥಿಗಳು** ವಾಕ್ಯವನ್ನು ಚೆನ್ನಾಗಿ ಬರೆಯಲು ಸಮರ್ಥರಾಗುವರು.

---

## ೨. ವಾಕ್ಯಾಂಗಗಳು

**೧ ವಾಕ್ಯಾಂಗಗಳು ಯಾವವು ?**

**ಶಬ್ದಗಳು** ಮತ್ತು **ಶಬ್ದಸಮುಚ್ಚಯಗಳು** (Phrases) ವಾಕ್ಯದ ಅಂಗಗಳು. ಇವುಗಳ ಹೆಣಿಕೆಯಿಂದಲೇ (ಜೋಡಣೆಯಿಂದಲೆ) ವಾಕ್ಯಗಳು ಸಿದ್ಧವಾಗುವವು. ಆದುದರಿಂದ ಇವನ್ನು ಅಭ್ಯಸಿಸುವುದು ಅತ್ಯಾವಶ್ಯಕವಾದುದು.

**೨ ಶಬ್ದಗಳ ಆಯ್ಕೆ :—**

ವಾಕ್ಯಗಳು **ಸುಂದರ** ಹಾಗೂ **ಪರಿಣಾಮಕರ**ವಾದವುಗಳು ಆಗಬೇಕಾದರೆ ಅವುಗಳಲ್ಲಿ ಉಪಯೋಗಿಸುವ ಶಬ್ದಗಳ ಆಯ್ಕೆಯ ವಿಷಯವಾಗಿ ನಾವು ಬಹಳ ಜಾಗರೂಕರಾಗಿರಬೇಕು. ಶಬ್ದಗಳನ್ನು ಚೆನ್ನಾಗಿ ಆರಿಸಬೇಕು. ಅಲ್ಲದ ಶಬ್ದವನ್ನು ಸಲ್ಲದ ಸ್ಥಳದಲ್ಲಿ ಉಪಯೋಗಿಸಬಾರದು. ಶಬ್ದಗಳ ಆಯ್ಕೆಯಲ್ಲಿ ಕೆಳಗಿನ ಮಾತುಗಳನ್ನು ಲಕ್ಷಿಸಬೇಕು.

**೧) ಶುದ್ಧತೆ :—** ಸಾಧ್ಯವಿದ್ದಮಟ್ಟಿಗೆ ಅಚ್ಚಗನ್ನಡ ಶಬ್ದಗಳನ್ನೇ ಉಪಯೋಗಿಸಬೇಕು. ಮೊದಲು ಹೊಸಗನ್ನಡ ಶಬ್ದಗಳು, ತರುವಾಯ

ರೂಢಿಯಲ್ಲಿದ್ದ ಸಂಸ್ಕೃತ ಶಬ್ದಗಳು ಮತ್ತು ತದ್ಭವ ಶಬ್ದಗಳು, ಅವು ದೊರೆಯದಿದ್ದರೆ ಹಳಗನ್ನಡ ಶಬ್ದಗಳು, ಅವಿಲ್ಲದಿದ್ದರೆ ರೂಢವಿಲ್ಲದ ಸಂಸ್ಕೃತ ಶಬ್ದಗಳು, ಕೊನೆಗೆ ಪರಭಾಷೆಯ ಶಬ್ದಗಳು—ಈ ಕ್ರಮದಿಂದ ಆಯ್ಕೆಯಾಗಬೇಕು.

ಉ :— ಸಂಸ್ಕೃತ :—೧. ಕರ್ನಾಟಕಸ್ಥರಲ್ಲಿ ಸ್ವತ್ವದ ಜ್ಞಾನವು ಉತ್ಪನ್ನವಾಗದಿದ್ದರೆ ಕನ್ನಡವು ಅದ್ಯಾಪಿ ಜೀವಿಸುವ ಸಂಭವವಿಲ್ಲ.

ಕನ್ನಡ :—೨. ಕನ್ನಡಿಗರಲ್ಲಿ ತಮ್ಮತನದ ಅರಿವು ಉಂಟಾಗದಿದ್ದರೆ, ಕನ್ನಡವು ಈಗಲೂ ಬಾಳುವ ಆಶೆಯಿಲ್ಲ.

ಸೂಚನೆ :— ಈ ಎರಡು ವಾಕ್ಯಗಳನ್ನು ನಿರೀಕ್ಷಿಸಿದರೆ, ಅವುಗಳಲ್ಲಿಯ ಭೇದವು ಕಾಣುವುದು. ಒಂದರಲ್ಲಿ ಸಂಸ್ಕೃತ ಶಬ್ದಗಳು ಹೇರಳವಾಗಿದ್ದರೆ ಇನ್ನೊಂದರಲ್ಲಿ ಅಚ್ಚಗನ್ನಡ ಶಬ್ದಗಳೇ ವಿಪುಲವಾಗಿವೆ. ೨ ರಲ್ಲಿ 'ಆಶೆ' ಎಂಬುದು ಮೂಲತಃ ಸಂಸ್ಕೃತವಾದರೂ ತದ್ಭವವಾಗಿ ಕನ್ನಡದಲ್ಲಿ ರೂಢವಾಗಿದೆ. ನಾವು ಎರಡನೆಯ ರೀತಿಯನ್ನೇ ಅನುಸರಿಸುವುದು ಉಚಿತ. ಎಂದಮೇಲೆ ಸಾಧ್ಯವಿದ್ದಲ್ಲಿ ಕನ್ನಡ, ಹಾಗೂ ಕನ್ನಡದಲ್ಲಿ ಬೆರೆತುಹೋದ ಸಂಸ್ಕೃತ ಮತ್ತು ತದ್ಭವ ಶಬ್ದಗಳು, ಅವಶ್ಯವಿದ್ದಲ್ಲಿ ಬೇರೆ ಭಾಷೆಯ ಶಬ್ದಗಳು, ಇದು ನಮ್ಮ ತತ್ವವಿರಬೇಕು. ಪರಭಾಷೆಯ ಶಬ್ದಗಳನ್ನು ಸ್ವೀಕರಿಸುವಾಗ ಕನ್ನಡ ಸೊಲ್ಲಿಗೆ-ಉಚ್ಚರಿಸುವ ರೀತಿಗೆ ಸರಿಹೋಗುವಂತೆ ಅವನ್ನು ಮಾರ್ಪಡಿಸಬೇಕು.

ಉ :—ಆಂಗ್ಲರೀತಿ : ಬ್ಯಾಂಗಲೋರಿನಲ್ಲಿ ಇಂಗ್ಲಿಷ್ ಸ್ಕೂಲುಗಳೂ ಹಾಸ್ಪಿಟಲ್‌ಗಳೂ ಉಂಟು.

ಕನ್ನಡರೀತಿ :-ಬೆಂಗಳೂರಿನಲ್ಲಿ ಆಂಗ್ಲ ಶಾಲೆಗಳೂ ಆಸ್ಪತ್ರೆಗಳೂ ಉಂಟು.

ಸೂಚನೆ :—ಆಸ್ಪತ್ರೆಯ ಸ್ಥಲದಲ್ಲಿ ಚಿಕಿತ್ಸಾಲಯ ಇಲ್ಲವೆ ರುಗ್ಣಾಲಯವೆಂಬ ಸಂಸ್ಕೃತ ಶಬ್ದವನ್ನುಪಯೋಗಿಸುವುದು ಉತ್ತಮ. ಬೆಂಗಳೂರು ಎಂಬ ಮೂಲ ಕನ್ನಡ ಶಬ್ದದಿಂದ ಬ್ಯಾಂಗಲೋರ್ ಎಂಬ ಇಂಗ್ಲೀಷ್ ಶಬ್ದವಾಗಿದೆ ಎಂಬುದನ್ನು ನೆನೆಯಬೇಕು.

ಶುದ್ಧತೆಯಲ್ಲಿ ಅಡಕವಾದ ಇನ್ನೊಂದು ಮಾತೆಂದರೆ ಸರಿಯಾದ **ಅಕ್ಷರಸಂಯೋಜನೆ** (Spelling). ನಾವು ಒಂದೇ ಶಬ್ದವನ್ನು ಅನೇಕ ಬಗೆಯಾಗಿ ಬರೆಯುವೆವು.

ಉ :— ಬೆಳೆಸು—ಬೆಳೆಯಿಸು— ಬೆಳಸು—ಬೆಳಿಸು.

ಕಳಿಹಿಸು—ಕಳುಹಿಸು—ಕಳಿಸು—ಕಳಹು—ಕಳಸು.

ತಿಳಿಹಿಸು—ತಿಳಸು—ತಿಳಿಸು—ತಿಳುಹು.

ವೊಂದು—ವಂದು—ಒಂದು. ವೊರು—ಊರು.

ಯೆಲ್ಲಿ—ಎಲ್ಲಿ—ಎಲ್ಲಾ. ಎಜಮಾನ—ಯಜಮಾನ.

**ಸೂಚನೆ:**—೧. ಇವುಗಳಲ್ಲಿ ಸರಿಯಾದ **ಅಕ್ಷರಸಂಯೋಜನೆಯನ್ನು** ಸ್ವೀಕರಿಸಿ ಬರೆಯಬೇಕು. ಶಬ್ದಗಳ ಮೂಲರೂಪವನ್ನು ಕಂಡುಹಿಡಿದು ಅದಕ್ಕೆ ಹೊಂದಿಕೆಯಾಗುವ ಒಂದು ಅಥವಾ ಹೆಚ್ಚು ರೂಪಗಳನ್ನು ಉಪಯೋಗಿಸಬಹುದು.

ಉ:—ಬೆಳೆ + ಇಸು = ಬೆಳೆಯಿಸು, ಬೆಳೆಸು.

ಕಳೆ + ಇಸು = ಕಳುಹಿಸು. ಕಳು + ಹು = ಕಳುಹು.

ತಿಳಿ + ಇಸು = ತಿಳಿಸು. ತಿಳಿ + ಪು = ತಿಳಿಪು.

ಒಂದು; ಊರು; ಎಲ್ಲಿ.

೨. ಮಾತಿನ ಭಾಷೆಯಲ್ಲಿಯ ಅಶುದ್ಧ ರೂಪಗಳನ್ನು ಶುದ್ಧಗೊಳಿಸಿ ಬರಹದಲ್ಲಿ ಬಳಸುವ ಹೊಸ ರೂಢಿಯನ್ನು ಹಾಕಿಕೊಳ್ಳಬೇಕು.

ನಡಿ = ನಡೆ, ಬರಿ = ಬರೆ, ಮನಿ = ಮನೆ, ಊರಾಗ = ಊರೊಳಗೆ.

**೨) ಸುಲಭತೆ:** — ಸುಲಭತೆಯು ನಾವು ಉಪಯೋಗಿಸುವ ಶಬ್ದಗಳಲ್ಲಿ ಇರಬೇಕಾದ ಇನ್ನೊಂದು ಗುಣ. ಇದು ಓದುವವರ ಬುದ್ಧಿ ಸಂಸ್ಕಾರವನ್ನು ಅವಲಂಬಿಸಿದೆ; ಸಹಜ. ಒಬ್ಬನಿಗೆ ಸುಲಭವಾದುದು ಇನ್ನೊಬ್ಬನಿಗೆ ಬಿಗಿಯಾಗಬಹುದು. ಆದರೂ ಈ ಕೆಳಗಿನ ಕೆಲವು ಸಂಗತಿಗಳನ್ನು ಲಕ್ಷಿಸುವುದು ಒಳ್ಳೆಯದು.

(ಅ) ಆದಷ್ಟು **ಪ್ರಚಾರದಲ್ಲಿರುವ ಶಬ್ದಗಳನ್ನೇ** ಉಪಯೋಗಿಸಬೇಕು. ಕ್ಲಿಷ್ಟ ಮತ್ತು ಅಪರಿಚಿತ ಶಬ್ದಗಳನ್ನು ಬಿಡಬೇಕು.

ಉ:—೧ **ಸುಲಭ:** ಅಂಜಿಕೆಯಿಂದ ನಾನು ತುಂಬಾ ನಡುಗಿದೆ.

**ಕ್ಲಿಷ್ಟ:** ಭಯಾಕ್ರಾಂತನಾಗಿ ನಾನು ನಿರತಿಶಯವಾಗಿ ಕಂಪಾಯಮಾನನಾದೆ.

೨ (ಸು) ನಾನು ಬಂದೆ. (ಕ್ಲಿ) ಅಸ್ಮಾದಿಕರ ಆಗಮನವಾಯಿತು.

(ಆ) **ವಸ್ತುವಾಚಕ** ಶಬ್ದಗಳು **ಭಾವವಾಚಕಗಳಿಗಿಂತ** ಸುಲಭವಾದವುಗಳು. ಆದುದರಿಂದ ಸಾಧ್ಯವಿದ್ದಲ್ಲಿ ವಸ್ತುವಾಚಕಗಳನ್ನು ಉಪಯೋಗಿಸಬೇಕು.

ಉ:— ೧. ಬಲವು ಜ್ಞಾನವನ್ನು ಆಳನ್ನಾಗಿ ಮಾಡಬೇಕೆನ್ನುತ್ತದೆ. (ಭಾವವಾಚಕಗಳು).

ಬಲವಂತರು ಬುದ್ಧಿವಂತರನ್ನು ತಮ್ಮ ಆಳುಗಳನ್ನಾಗಿ ಮಾಡಬೇಕೆನ್ನುತ್ತಾರೆ. (ವಸ್ತುವಾಚಕಗಳು).

೨. ವ್ಯಕ್ತಿಯು ಸಮಾಜವಂಚನೆಯೂ, ಸಮಾಜದ ವ್ಯಕ್ತಿದೌರ್ಲಕ್ಷ್ಯವೂ ಪರಸ್ಪರರನ್ನು ಹಾಳುಮಾಡಿವೆ.
ಸಮಾಜವನ್ನು ವಂಚಿಸುವುದರಿಂದ ವ್ಯಕ್ತಿಯೂ ವ್ಯಕ್ತಿಯನ್ನು ದುರ್ಲಕ್ಷಿಸುವುದರಿಂದ ಸಮಾಜವೂ ಹಾಳಾಗಿದೆ.

**ಸೂಚನೆ:**— ಆದರೆ ಈ ಉತ್ಸಾಹವನ್ನು ಮೇರೆ ಮೀರಗೊಡಬಾರದು, ಅವಶ್ಯವಿದ್ದಲ್ಲಿ ಭಾವಬೋಧಕಗಳನ್ನು ಉಪಯೋಗಿಸಲೇಬೇಕು.

(ಇ) **ಪರಿಚಿತ** ಶಬ್ದಗಳನ್ನು **ಅಪರಿಚಿತ** ಅರ್ಥದಲ್ಲಿ ಪ್ರಯೋಗಿಸಬಾರದು.

ಉ:— ಪ್ರತಿಯೊಬ್ಬ ಅಜ್ಜನು ಒಳ್ಳೆಯ ಸುಸಂಸ್ಕೃತನು.
ಪ್ರತಿಯೊಬ್ಬ ಆರ್ಯನು ಒಳ್ಳೆಯ ಸುಸಂಸ್ಕೃತನು.

**೩) ಸೌಂದರ್ಯ:**— (ಅ) ಶಬ್ದಗಳ ಸೌಂದರ್ಯವು ಹೆಚ್ಚಾಗಿ, ಅವುಗಳ ಧ್ವನಿಯ ಮಾಧುರ್ಯವನ್ನೂ, ಗಾಂಭೀರ್ಯವನ್ನೂ ಅವಲಂಬಿಸಿದೆ. ಅದಕ್ಕಾಗಿ ಶಬ್ದಗಳು ಇಂಪುಳ್ಳವಿರಲಿ, ಮಧುರವಾದವುಗಳಾಗಿರಲಿ, ಪೆಂಪುಳ್ಳವಿರಲಿ, ಗಂಭೀರವಾದವುಗಳಾಗಿರಲಿ!

ಉ:— ೧. ಲಲಿತವಹ ಕನ್ನಡದ ನುಡಿಯಲಿ ತಿಳಿದು ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೆ.
೨. ಚಂದಿರನ ಮೂಡಿಸಲು ಮನದಲ್ಲಿ ನೆನೆಯುತಿರೆ, ಮೊಳೆತ ಚಂದದ ನನೆಯ ಮುಂಗುರುಹ ಪಡೆವ. (ಬ್ರಹ್ಮ)
೩. ಚಂಡ ಪ್ರಚಂಡ ತಾಂಡವವು ನಡೆದಿಹುದು.
ಅಂಡಜನ ಸೃಷ್ಟಿಯೆ ತಡವರಿಸುತಿಹುದು.
೪. ಜಗವನೆಲ್ಲಾ ತುತ್ತುಮೆನೆಂದು ಗದರುತ್ತಿಹುದು ಗರ್ಜಿಸುತಿಹುದು,
ಬಸವರ ಬಗ್ಗರ ತುತ್ತಿನ ಚೀಲದ ಒಳಗಿನ ಒಳದನಿಯೊಂದು.

**ಸೂಚನೆ:**— ಮೊದಲಿನ ಎರಡು ಉದಾಹರಣೆಗಳಲ್ಲಿ **ಲಾಲಿತ್ಯವೂ** ಕೊನೆಯ ಎರಡರಲ್ಲಿ **ಗಾಂಭೀರ್ಯವೂ** ಒಡಮೂಡಿರುವವು.

(ಆ) ಪ್ರಬಂಧದಲ್ಲಿ **ಗ್ರಾಮ್ಯ** ಶಬ್ದಗಳನ್ನು ಉಪಯೋಗಿಸದಿರಬೇಕು; ಅದರಲ್ಲಿ ಸುಸಂಸ್ಕೃತರು ಆಡುವ ಭಾಷೆಯಿರತಕ್ಕದ್ದು.

ಉ:— ಯಾನ್ರೆಪ್ಪಾ! ಉಣ್ಣಾಕ ಬರಾಣಿಲ್ಲ್ಯಾನ?
ಏನಯ್ಯಾ, ಉಣ್ಣಲು ಬರುವುದಿಲ್ಲವೇನು?

**ಸೂಚನೆ:**— **ಪ್ರತ್ಯಕ್ಷ ಕಥನದಲ್ಲಿ**— ಪ್ರತ್ಯಕ್ಷ ಆಡಿದ ಮಾತನ್ನು ಬರೆಯುವಾಗ, (Direct Speech) ಗ್ರಾಮ್ಯ ಮಾತುಗಳನ್ನು ಬರೆಯಬಹುದು. ಅದರಿಂದ ಸಂಭಾಷಣೆಗೆ **ವಾಸ್ತವತೆ** (Realism) ಬರುವುದು. ಅದು ನಿಜವಾದ

ಸಂಭಾಷಣೆಯಂತೆ ತೋರುವುದು ಸರಿ. ಆದರೆ ಬೇರೆಡೆಗೆ ಅಂಥ ಶಬ್ದಗಳನ್ನು ಸೇರಿಸಕೂಡದು.

**೪) ಸಾಮರ್ಥ್ಯ:—**

(ಅ) ಓದುಗರ ಮನಸ್ಸಿನ ಮೇಲೆ ಸರಿಯಾದ **ಪರಿಣಾಮವಾಗ** ಬೇಕಾದರೆ ಶಬ್ದಗಳು ಅರ್ಥಪೂರ್ಣವಾಗಿರಬೇಕು. ಅರ್ಥವಿಹೀನವಾದ ಶಬ್ದಗಳ ಜಾಲವು ಪರಿಣಾಮಕಾರಿಯಾಗಲಾರದು. ಶಬ್ದಗಳ ಕಸುವನ್ನು ಅರಿತು ಅವನ್ನು ಉಪಯೋಗಿಸಬೇಕು. ಅದು ಅವುಗಳ ಅರ್ಥದಲ್ಲಿ ಇರುವುದು.

(೧) ಅದಕ್ಕಾಗಿ ಅಸ್ಪಷ್ಟ ಅರ್ಥವುಳ್ಳ ಸಾಮಾನ್ಯಾರ್ಥಕ ಶಬ್ದಗಳನ್ನು (General words) ತೊರೆದು, ವಿಶೇಷಾರ್ಥಕ ಶಬ್ದಗಳನ್ನು (Specific words) ಉಪಯೋಗಿಸಬೇಕು.

**ಉ:—** ಅವನು ಒಳ್ಳೆಯ ಮನುಷ್ಯ; ಅವನ ನಡೆ ಒಳ್ಳೆಯದು, ನುಡಿ ಒಳ್ಳೆಯದು. ಅವನು **ಪ್ರಾಮಾಣಿಕ** ಮನುಷ್ಯ; ಅವನ ನಡೆ **ಸರಳವಾದುದು**, ನುಡಿ **ದಿಟವಾದುದು**.

**ಸೂಚನೆ:—** ಇಲ್ಲಿ 'ಒಳ್ಳೆಯ' ಎಂಬುದು ಸಾಮಾನ್ಯ ಅರ್ಥಸೂಚಕ, ಅದರಿಂದ ಸ್ಪಷ್ಟವಾದ ಬೋಧೆಯುಂಟಾಗುವುದಿಲ್ಲ. ಆದುದರಿಂದ 'ಪ್ರಾಮಾಣಿಕ' 'ಸರಲ' 'ದಿಟ' ಇತ್ಯಾದಿ ವಿಶೇಷಾರ್ಥ ಸೂಚಕಗಳ ಉಪಯೋಗ ಮಾಡಬೇಕಾಗುವುದು.

(೨) ಎರಡು ಸಮಾನ ಅರ್ಥವುಳ್ಳ ಶಬ್ದಗಳಲ್ಲಿ ಸ್ವಲ್ಪ ಅರ್ಥಭೇದವಿರುವುದು ಸಹಜ. ಅದಕ್ಕೆ **ಅರ್ಥಚ್ಛಾಯೆ** (Shade of meaning) ಎನ್ನುವರು. ಅದನ್ನು ಸರಿಯಾಗಿ ಕಂಡುಹಿಡಿದು ಶಬ್ದಗಳನ್ನು ಉಪಯೋಗಿಸಿದರೆ ವಾಕ್ಯವು ಕಸುವುಳ್ಳದ್ದಾಗುವುದು. ಕನ್ನಡದಲ್ಲಿ ಈ ವಿಷಯದ ಸೂಕ್ಷ್ಮ ಅಭ್ಯಾಸವು ಆಗುವುದು ಅವಶ್ಯ.

**ಉ:—** ಆ '**ಕಳ್ಳನು**' ನನ್ನ ಜೇಬಿನೊಳಗಿಂದ ನಾಲ್ಕಾಣೆಯನ್ನು ಕದ್ದನು.
ಆ '**ತುಡುಗನು**' ನನ್ನ ಮನೆಯನ್ನೊಡೆದು ಎಲ್ಲವನ್ನೂ ಅಪಹರಿಸಿದನು.

**ಸೂಚನೆ:—** ತಿಳಿಸದೆ ಕಳವು ಮಾಡುವವನು **ಕಳ್ಳ**. ತುಡುಕಿ, ದರೋಡೆ ಮಾಡಿ ಎಲ್ಲವನ್ನು ಅಪಹರಿಸುವವನು **ತುಡುಗ**. ಈ ಮೇರೆಗೆ ಅರ್ಥವ್ಯತ್ಯಾಸವನ್ನು ಗಮನಿಸಿ ಶಬ್ದಗಳನ್ನು ಉಪಯೋಗಿಸಬೇಕು.

**೩. ಶಬ್ದಗಳ ಸಂಖ್ಯೆ:—**

ವಾಕ್ಯಗಳಲ್ಲಿ ಎಷ್ಟು ಶಬ್ದಗಳಿರಬೇಕೆಂಬುದನ್ನು ನಿಶ್ಚಯಿಸಲು ಬರುವಂತಿಲ್ಲ. ಆದರೂ – **ಕಿರಿದರಲ್ಲಿ ಹಿರಿದಾದ ಅರ್ಥವನ್ನು**– ಸ್ವಲ್ಪ ಶಬ್ದಗಳಲ್ಲಿ

ವಿಪುಲವಾದ ಅರ್ಥವನ್ನು ಹೇಳುವುದು ಒಳ್ಳೆಯದು. ಅತಿದೀರ್ಘ ವಾಕ್ಯಗಳು ಓದುಗರಿಗೆ ತಿಳಿದುಕೊಳ್ಳಲು ಬಿಗಿಯಾಗಿರುವವು. ಅವುಗಳಿಂದ ಬೇಸರ ಹುಟ್ಟುವುದು. ಆದುದರಿಂದ ಅವುಗಳನ್ನು ತೊರೆಯುವುದು ಒಳ್ಳೆಯದು. ವೈವಿಧ್ಯಕ್ಕಾಗಿ ಒಂದೆರಡು ದೀರ್ಘ ವಾಕ್ಯಗಳನ್ನು ಅಲ್ಲಲ್ಲಿ ಉಪಯೋಗಿಸಬಹುದು. ಆದರೂ ಚಿಕ್ಕ ಚಿಕ್ಕ ವಾಕ್ಯಗಳನ್ನು ಬರೆಯುವುದು ಮೇಲು.

ಉ:— ಕಾಮವು ರಾಮನನ್ನು ಮರೆಸಿ, ಪ್ರೇಮವನ್ನು ಅಳಿಸಿ, ವಿಲಾಸದ ಸಂಗ್ರಾಮವನ್ನೇ ಬೆಳಸಿ, ನರನನ್ನು ಆಗಲೆ ನರಕಕ್ಕೆ ಸೆಳೆದೊಯ್ಯುವ ದೊಡ್ಡ ಸುಳಿಯೆಂದೂ ಇಂಥ ಭಯಾನಕ ಬವಣೆಯಿಂದ ಪಾರಾಗಿರೆಂದೂ ಸಾಧುಸಂತರು ಕೈಯೆತ್ತಿ ಪದೇ ಪದೇ ಹೇಳಿರುವರು.

**ಸೂಚನೆ:**— ಇಂಥಲ್ಲಿ ಕೃದಂತ ಅವ್ಯಯಗಳನ್ನು ತೆಗೆದೊಗೆದು, ಅವುಗಳ ಸ್ಥಳದಲ್ಲಿ ಪೂರ್ಣ ಕ್ರಿಯಾಪದಗಳನ್ನು ಇಡಬೇಕು. ಅಂದರೆ ವಾಕ್ಯಗಳು ಚಿಕ್ಕವಾಗಿ ತಿಳಿಯಾದವುಗಳಾಗುವವು. ಅತಿ ದೀರ್ಘ ವಾಕ್ಯರಚನೆಯು ಕೃತ್ರಿಮ ಶೈಲಿಯ ಕುರುಹು.

### ಕಿರಿಮೆಯ ಸಾಧನಗಳು:—

(೧) ಪುನರುಕ್ತಿಯನ್ನು ತೊರೆಯಬೇಕು. ಒಂದೇ ಅರ್ಥವನ್ನು ಹೇಳಲು ಸಮಾನ ಅರ್ಥವುಳ್ಳ ಅನೇಕ ಶಬ್ದಗಳನ್ನು ಉಪಯೋಗಿಸಬಾರದು.

ಉ:— ೧. ನಾಲ್ಕು ಜನರಲ್ಲಿ ಒದರಿ ಗದ್ದರಿಸುವುದು, ಸರಿಯಾದುದೂ ಅಲ್ಲ, ಯೋಗ್ಯವಾದುದೂ ಅಲ್ಲ.

ನಾಲ್ಕು ಜನರಲ್ಲಿ ಗದ್ದರಿಸುವುದು ಸರಿಯಲ್ಲ.

೨. ಮುಂಜಾವಿನ ಬೆಳಗನ್ನು ಬೀರುತ್ತ, ಪ್ರಭಾತದ ಪ್ರಭೆಯನ್ನು ಪಸರಿಸುತ್ತ ದಿನಮಣಿಯು ಮೂಡಲಲ್ಲಿ ಮೊಗದೋರಿದನು.

ತನ್ನ ಪ್ರಭೆಯನ್ನು ಪಸರಿಸುತ್ತ ದಿನಮಣಿಯು ಮೂಡಲಲ್ಲಿ ಮೊಗದೋರಿದನು.

೩. ಅವರು ಆಕಳ ಗೋಮೂತ್ರವನ್ನು ಸೇವಿಸಿ, ಹಸಿಯೊದ್ದೆಯನ್ನುಟ್ಟು, ನದಿಯ ಕೂಡಲ ಸಂಗಮದಲ್ಲಿ ಮಿಂದು ಸ್ನಾನ ಮಾಡಿದರು.

ಗೋಮೂತ್ರವನ್ನು ಸೇವಿಸಿ, ಒದ್ದೆಯನ್ನುಟ್ಟು, ನದಿಯ ಸಂಗಮದಲ್ಲಿ ಅವರು ಮಿಂದರು.

### ಆದರೆ:—

ಕೆಳಗಣ ಸಂದರ್ಭಗಳಲ್ಲಿ ಸಮಾನ ಅರ್ಥದ ಶಬ್ದಗಳನ್ನು (ಮೇಳನುಡಿಗಳನ್ನು) ಉಪಯೋಗಿಸಬಹುದು.

(ಅ) ವಿಷಯವನ್ನು ಒತ್ತಿ ಹೇಳಬೇಕಾದಾಗ:—

ಉ:— ಅವನು ಬರುವನು- ಆದೇಕೆ? ಬಂದೇಬರುವನು.

(ಆ) ಪ್ರಬಲ ಭಾವನೆಯು ಅಧೀನವಾದಾಗ:—

ಉ:— ೧. ಇಂಥ ವಿಚಿತ್ರ ತತ್ವಗಳನ್ನು ಕಂಡು ನಾನು ಬೆರಗಾದೆ! ಚಕಿತನಾದೆ! ಅಚ್ಚರಿಯು ಕೊನೆಯಿಲ್ಲದ ಕಡಲಲ್ಲಿ ಮುಳುಗಿದೆ!

೨. ನಾವು ಶರೀರ ಕೀಟರು, ಕ್ಷುದ್ರರು, ನೀಚರೆಂದು ಪ್ರಪಂಚದಲ್ಲಿ ಸಾರುವ ನಮ್ಮ ಹಿತಶತ್ರುಗಳನ್ನು ಅದಾರು ಕ್ಷಮಿಸಬಲ್ಲರು?

(೨) ಸಂಮಿಶ್ರ-ಸಂಯುಕ್ತ ವಾಕ್ಯಗಳ ಬದಲಾಗಿ ಸಾಮಾನ್ಯ ವಾಕ್ಯಗಳನ್ನು ಬರೆಯುವುದು.

ಉ:— (ಅ) ಯಾವನ ಮೈಯಲ್ಲಿ ಬಲವಿರುವುದೋ ಅವನೇ ಇಲ್ಲಿ ಬಾಳುವನು— ಬಲವಂತನೇ ಇಲ್ಲಿ ಬಾಳುವನು.

(ಆ) ವಿದ್ಯೆಯು ನಮ್ಮ ತಂದೆ ಮತ್ತು ವಿದ್ಯೆಯು ನಮ್ಮ ತಾಯಿ— ವಿದ್ಯೆಯು ನಮ್ಮ ತಾಯ್ತಂದೆ.

**ಸೂಚನೆ:**— ಹೆಚ್ಚಿನ ವಿವರಕ್ಕಾಗಿ '**ವಾಕ್ಯಪಲ್ಲಟ**' ವಿಭಾಗವನ್ನು ಓದಿಕೊಳ್ಳಬೇಕು.

(೩) ಸಾಮಾನ್ಯವಾಕ್ಯದ ಬದಲಾಗಿ ಒಂದು ಶಬ್ದಸಮೂಹವನ್ನಾಗಲಿ, ಸಮಸ್ತ ಶಬ್ದವನ್ನಾಗಲಿ ಇಡುವುದು.

ಉ:— (ಅ) ಇದು ಸಾರ, ಇದು ಅಸಾರ ಎಂಬುದನ್ನು ಅರಿಯದವನು ಮನುಜನೇ? ಸಾರಾಸಾರ ವಿಚಾರವಿಲ್ಲದವನು ಮನುಜನೆ?

(ಆ) ತಮ್ಮ ಹಣೆಯಲ್ಲಿ ಏನು ಬರೆದಿದೆ ಎಂಬುದನ್ನು ಬಲ್ಲವರಾರು? ತಮ್ಮ ಹಣೆಬರಹವನ್ನು ಬಲ್ಲವರಾರು?

(೪) ಶಬ್ದಸಮೂಹಗಳ ಸ್ಥಳದಲ್ಲಿ ಒಂದೇ ಶಬ್ದವನ್ನಿಡುವುದು.

ಉ:— (ಅ) ಮಾಡಿದ ಉಪಕಾರವನ್ನು ಸ್ಮರಿಸದ ನೀಚರ ಸಂತೆ ನೆರೆಯಬೇಕೆ ಇಲ್ಲಿ?

ಕೃತಘ್ನರಾದ ನೀಚರ ಸಂತೆ ನೆರೆಯಬೇಕೇ ಇಲ್ಲಿ?

(ಆ) ತಮ್ಮ ಪರಿವಾರದಿಂದ ಕೂಡಿದಂಥವರಾಗಿ ಅವರು ನಮ್ಮ ಆತಿಥ್ಯವನ್ನು ಸ್ವೀಕರಿಸಿದರು.

ಸಪರಿವಾರರಾಗಿ ಬಂದು ಅವರು ನಮ್ಮ ಆತಿಥ್ಯವನ್ನು ಸ್ವೀಕರಿಸಿದರು.

(೫) ಸಂದರ್ಭಕ್ಕೆ ಸರಿಯಾಗಿ ಅಲಂಕಾರಗಳನ್ನು ಉಪಯೋಗಿಸಬೇಕು, ವಿಶೇಷವಾಗಿ **ಉಪಮೆ ರೂಪಕಗಳನ್ನು** ಉಪಯೋಗಿಸಬೇಕು.

ಉ:— ಚಂದಿರನು ಹೇಗೆ ಚೆಲುವನೋ ಹಾಗೆಯೆ ಅವನು ಚೆಲುವನು.

ಅವನು ಚಂದಿರನಂತೆ ಚೆಲುವನು.
ಅವನು ಚೆಲುವ ಚಂದಿರನು.

**ಸೂಚನೆ:**—ಆದರೆ ಕಿರಿಮೆಯನ್ನು ಸಾಧಿಸುವಾಗ ಸುಲಭತೆಯನ್ನೂ ಅರ್ಥವ್ಯಕ್ತಿಯನ್ನೂ ಉಪೇಕ್ಷಿಸಕೂಡದು. ಹಲವು ಸಲ ಹಿರಿಮೆಯು ಕೂಡ ಇಷ್ಟ ಪರಿಣಾಮವನ್ನು ಉಂಟುಮಾಡುವುದು.

## ೪. ಶಬ್ದಗಳ ಕ್ರಮ :

(೧) ಸಾಮಾನ್ಯಕ್ರಮ:— ಪ್ರತಿವಾಕ್ಯದಲ್ಲಿ ಮೊದಲು ಕರ್ತೃ, ಆಮೇಲೆ ಕರ್ಮ, ಅನಂತರದಲ್ಲಿ ಕ್ರಿಯಾಪದ; ಇದು ಸಾಮಾನ್ಯ ಕ್ರಮ. ವಿಶೇಷಣಗಳು ವಿಶೇಷ್ಯಗಳ ಪೂರ್ವದಲ್ಲಿಯೂ, ಅವ್ಯಯಗಳು ಕ್ರಿಯಾ ಪದಗಳ ಪೂರ್ವದಲ್ಲಿಯೂ ಬರುವುದುಂಟು.

ಉ:—(೧) ಕರುಣಾಸಾಗರನಾದ ಪರಮಾತ್ಮನು ನಿಮ್ಮ ವ್ಯಸನವನ್ನು ಚೆನ್ನಾಗಿ ಅರಿತಿರುವನು.

(೨) ಆ ಹೊಳಪುಳ್ಳ ಚಿಕ್ಕೆಯು ಒಮ್ಮೆಲೆ ಕೆಳಗೆ ಬಿತ್ತು.

(೨) ಅಸಾಮಾನ್ಯ ಕ್ರಮ:—ಆದರೆ ಪರಿಣಾಮಕ್ಕಾಗಿ ಮುಖ್ಯವಾದ ಶಬ್ದಗಳನ್ನು ವಾಕ್ಯದ ಆದಿಯಲ್ಲಿ ಇಡುವುದುಂಟು. ಅದಕ್ಕಾಗಿ ಅವಶ್ಯವಾದ ಶಬ್ದಗಳನ್ನು ಪ್ರಾರಂಭಕ್ಕೆ ಇಡಬಹುದು.

ಉ:—(ಅ) ಕ್ರಿಯಾಪದವು ಮೊದಲು ಬಂದದ್ದು—
ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು.
ಶರಣು, ಶರಣು, ಸಿರಿ ಕನ್ನಡ ಜನನಿ! (ಶರಣು ಎಂಬ ಪದದಲ್ಲಿ 'ಶರಣಾಗುವೆನು' ಎಂಬ ಕ್ರಿಯಾಪದವು ಅಡಗಿದೆ.)
(ಆ) ಕರ್ಮವು ಮೊದಲಿಗೆ ಬಂದದ್ದು—
ಅನ್ನವನು ಈಯುವುದು, ನನ್ನಿಯನು ನುಡಿಯುವುದು.
(ಇ) ಅವ್ಯಯಗಳು ಮೊದಲಿಗೆ ಬಂದದ್ದು—
**ಕಾಲ:** ಸದಾ ಎನ್ನನ್ನು ನೋಡಿ ಮುದದಿ ಸಲಹುವುದು!
**ಸ್ಥಲ:** ಸುತ್ತುಮುತ್ತಲು ಗೊಂದಲವೇ ಗೊಂದಲ!
(ಈ) ಕ್ರಿಯಾಪದವು ಗುಪ್ತ ಇದ್ದದ್ದು—
ಧನವಂತನೇ ಗುಣವಂತನು.
ನಿನ್ನ ಅಭಿಪ್ರಾಯವೇನು?

**ಸೂಚನೆ:**—ಆದರೆ ಒಂದೇ ವಾಕ್ಯದಲ್ಲಿ, ಆರಂಭಿಸಿದ ಕ್ರಮವನ್ನು ಮಧ್ಯದಲ್ಲಿ ಬದಲಿಸಬಾರದು. ಅದರಿಂದ ಕ್ರಮಭಂಗದ ದೋಷವುಂಟಾಗುವುದು.

ಉ:—(೧) ಅವನಲ್ಲಿ ಮಾತಿನ ಮೇಲ್ಮೆ, ಕೃತಿಯು ಕೀಳು ಕಾಣುವುದು.

(೨) ಅವನಲ್ಲಿ ಮಾತಿನ ಮೇಲ್ಮೆಯೂ, ಕೃತಿಯ ಕೀಳ್ಮೆಯೂ ಕಾಣುವವು.

## ೩. ವಾಕ್ಯರಚನೆ

ಶಬ್ದಗಳಂತೆ ವಾಕ್ಯಗಳು ಕೂಡ (೧) **ಶುದ್ಧ,** (೨) **ಸುಲಭ,** (೩) **ಸುಂದರ,** (೪) **ಪರಿಣಾಮಕರ**ವಾದವುಗಳಾಗಿರಬೇಕು. ಈ ನಾಲ್ಕು ಗುಣಗಳು ಪ್ರತಿವಾಕ್ಯದಲ್ಲಿ ಇರುವುದುತ್ತಮ. ಕನಿಷ್ಟಪಕ್ಷಕ್ಕೆ ಮೊದಲಿನ ಎರಡು ಗುಣಗಳಂತೂ ಇರಲೇ ಬೇಕು. **ಶುದ್ಧತೆ-ಸೌಲಭ್ಯಗಳು ಎಲ್ಲ ವಾಕ್ಯಗಳಿಗೆ ಅತ್ಯಾವಶ್ಯಕ. ಸೌಂದರ್ಯ - ಸಾಮರ್ಥ್ಯಗಳು ಐಚ್ಛಿಕ.** ಶೈಲಿಯ ರಹಸ್ಯವನ್ನರಿತವರು ಅದನ್ನು ತಮ್ಮ ವಾಕ್ಯಗಳಲ್ಲಿ ತರ ಬಹುದು. ಈ ಎಲ್ಲ ಗುಣಗಳನ್ನು ತರಬಯಸುವವರು ಕೆಳಗಿನ ಮಾತು ಗಳನ್ನು ಚೆನ್ನಾಗಿ ಪರಿಶೀಲಿಸಬೇಕು.

### ೧. ಶುದ್ಧತೆ :—

ವಾಕ್ಯಗಳು ಶುದ್ಧವಾದವುಗಳಾಗಿರಬೇಕಾದರೆ ಅವುಗಳಲ್ಲಿ ವ್ಯಾಕರಣ ದೋಷಗಳಿರಕೂಡದು. ಸಾಮಾನ್ಯವಾಗಿ ಈ ದೋಷಗಳು,

(ಅ) ವಿಭಕ್ತಿಗಳ ಉಪಯೋಗದಲ್ಲಿ,

(ಆ) ವಿಶೇಷಣ ವಿಶೇಷ್ಯಗಳ ಸಂಬಂಧದಲ್ಲಿ, ಮತ್ತು

(ಇ) ಕರ್ತೃ-ಕ್ರಿಯಾಪದಗಳ ಸಂಬಂಧದಲ್ಲಿ

ಸೇರುವುದುಂಟು. ಅದರ ಸಲುವಾಗಿ ವ್ಯಾಕರಣ ಗ್ರಂಥದಲ್ಲಿ ಆಯಾ ವಿಷಯಗಳನ್ನು ಚೆನ್ನಾಗಿ ಓದಿಕೊಳ್ಳಬೇಕು. ಜೊತೆಯಲ್ಲಿ ಮುಂದೆ ಕಾಣಿ ಸಿದ ಮಾತುಗಳನ್ನು ಗಮನಿಸಬೇಕು.

### (ಅ) ವಿಭಕ್ತಿಗಳು :—

(ಅ) ಸಾಮಾನ್ಯವಾಗಿ ೧. ಪ್ರಥಮೆಯು ಕರ್ತೃವನ್ನೂ ೨. ದ್ವಿತೀ ಯೆಯು ಕರ್ಮವನ್ನೂ ೩. ತೃತೀಯೆಯು ಕರಣವನ್ನೂ ೪. ಚತು ರ್ಥಿಯು ಸಂಪ್ರದಾನವನ್ನೂ ೫. ಪಂಚಮಿಯು ಅಪಾದಾನವನ್ನೂ ೬. ಷಷ್ಠಿಯು ಸಂಬಂಧವನ್ನೂ ೭. ಸಪ್ತಮಿಯು ಅಧಿಕರಣವನ್ನೂ ಸೂಚಿಸುವುದುಂಟು. ಈ ಕರ್ತೃ ಆದಿ ಕಾರಕಗಳ ಅರ್ಥಗಳನ್ನು ವ್ಯಾಕರಣ ಗ್ರಂಥದಿಂದ ಅರಿತುಕೊಳ್ಳಬೇಕು.

(ಆ) ಆದರೆ ಕೆಲವು ವಿಭಕ್ತಿಗಳು ಬೇರೆ ವಿಭಕ್ತಿಗಳ ಕೆಲಸವನ್ನು

ಮಾಡುತ್ತವೆ. ಇದಕ್ಕೆ ' **ವಿಭಕ್ತಿ-ಪಲ್ಲಟ** ' ಎಂದೆನ್ನುವರು. ಇದರ ಪರಿಚಯವನ್ನು ಕೆಳಗೆ ಕೊಡಲಾಗಿದೆ.

(೧) **ಪ್ರಥಮೆಯು,** ದ್ವಿತೀಯೆ ಮತ್ತು ಸಪ್ತಮಿಯ ಅರ್ಥದಲ್ಲಿ ಬರುವುದು.

ಉ :—ಒಂದು ವರ್ಷವಂ ಇರ್ದಂ—ಒಂದು ವರ್ಷ ಇದ್ದನು. ಒಂದು ದಿವಸದಲ್ಲಿ ಬಂದನು—ಒಂದು ದಿವಸ ಬಂದನು.

(೨) **ದ್ವಿತೀಯೆಯು,** ಪ್ರಥಮೆ, ತೃತೀಯೆ, ಚತುರ್ಥೀ, ಪಂಚಮ್ಯರ್ಥದಲ್ಲಿ.

ಉ :—ನುಣುಪು ಉಳ್ಳದ್ದು—ನುಣುಪನ್ನು ಉಳ್ಳದ್ದು. ಹೂವಿನಿಂದ ಅರ್ಚಿಸಿದನು—ಹೂವನ್ನು ಅರ್ಚಿಸಿದನು. ಕಾಡಿಗೆ ಮುಟ್ಟಿದನು—ಕಾಡನ್ನು ಮುಟ್ಟಿದನು. ಅವನಿಂದ ಬೇಡಿಕೊಂಡನು—ಅವನನ್ನು ಬೇಡಿಕೊಂಡನು.

(೩) **ತೃತೀಯೆಯು,** ಪಂಚಮಿಯ ಅರ್ಥದಲ್ಲಿ.

ಉ :—ಕೆರೆಯಿಂದ ಬಂದನು—ಕೆರೆಯುತ್ತಣಿಂದ ಬಂದನು.

(೪) **ಚತುರ್ಥಿಯು,** ದ್ವಿತೀಯೆ, ಷಷ್ಠೀ, ಸಪ್ತಮ್ಯರ್ಥದಲ್ಲಿ.

ಉ :—ಆಕೆಯನ್ನು ತಿಳಿಸಿದನು—ಆಕೆಗೆ ತಿಳಿಸಿದನು. ನಾಡ ಒಡೆಯನು—ನಾಡಿಗೆ ಒಡೆಯನು. ತಾವರೆಯಲ್ಲಿ ಹುಟ್ಟಿದನು—ತಾವರೆಗೆ ಹುಟ್ಟಿದನು.

(೫) **ಷಷ್ಠಿಯು,** ಪ್ರಥಮೆ, ದ್ವಿತೀಯೆ, ಸಪ್ತಮ್ಯರ್ಥದಲ್ಲಿ.

ಉ :—ನೃಪನು ಹೇಳಲು—ನೃಪನ ಹೇಳಲು. ನನ್ನನ್ನು ಕೊಂದೆ—ನನ್ನ ಕೊಂದೆ. ಈವರಲ್ಲಿ ದೇವನು—ಈವರ ದೇವನು.

(೬) **ಸಪ್ತಮಿಯು,** ತೃತೀಯೆಯ ಅರ್ಥದಲ್ಲಿ.

ಉ :—ಕೊಡಲಿಯಿಂದ ಕಡಿದನು—ಕೊಡಲಿಯೊಳು ಕಡಿದನು. ಕಣ್ಣಿನಿಂದ ಕಂಡನು—ಕಣ್ಣಿನಲ್ಲಿ ಕಂಡನು.

**ಸೂಚನೆ :**—೧) ಇದರಲ್ಲಿಯ ಕೆಲವು ಪಲ್ಲಟಗಳು ಪ್ರಚಾರದಲ್ಲಿಲ್ಲ. ಆದರೂ ಅವನ್ನರಿತು ಅವುಗಳನ್ನು ಪ್ರಸಂಗಬಿದ್ದಲ್ಲಿ ಚೆನ್ನಾಗಿ ಉಪಯೋಗಿಸಲು ಕಲಿಯಬೇಕು.

೨) ಮೇಲಿನ ಪಲ್ಲಟಗಳನ್ನುಳಿದ ಅನ್ಯಪಲ್ಲಟಗಳಿಂದ ವಾಕ್ಯದ ಶುದ್ಧತೆಯು ಕೆಡುವುದು. ಆದುದರಿಂದ ಅವನ್ನು ತೊರೆಯಬೇಕು.

೩) ಈ ಪಲ್ಲಟಗಳನ್ನು ನೆನಪಿನಲ್ಲಿಡಲು ಕೆಳಗಿನ ಕಾರಿಕೆಯು ನೆರವಾಗುವುದು. ಅದನ್ನು ಬೇಕಾದರೆ ಉಪಯೋಗಿಸಿಕೊಳ್ಳಬಹುದು.

## ವಿಭಕ್ತಿ ಪಲ್ಲಟದ ಕಾರಿಕೆ.

ಪ್ರಥಮಾ ದ್ವಿ–ಸ–ಯೋರ್ಥೇ ಚ ।
ದ್ವಿತೀಯಾ ಪ್ರ–ತೃ–ಚ(೦)-ಷ–ಕೆ ॥
ತೃತೀಯಾ ಪಂಚಮ್ಯಾಮೇವ ।
ಚತುರ್ಥೀ ದ್ವಿ–ಷ–ಸಪ್ತಸು ॥ ೧ ॥
ಷಷ್ಠೀ ಚ ಪ್ರ–ದ್ವಿ–ಸಪ್ತಮ್ಯಾಂ ।
ಸಪ್ತಮೀ ತೃತೀಯಾಸು ಚ ॥
ಏಷ ಪಲ್ಲಟ ಇತ್ಯುಕ್ತಃ
ಕರ್ಣಾಟ–ಸುವಿಭಕ್ತಿಷು ॥ ೨ ॥

### (ಅ) ವಿಶೇಷಣ ವಿಶೇಷ್ಯ ಸಂಬಂಧವು :—

ಸಾಮಾನ್ಯವಾಗಿ ವಿಶೇಷಣವು ವಿಶೇಷ್ಯದ ಲಿಂಗ ವಚನ ವಿಭಕ್ತಿಯನ್ನು ಪಡೆಯುವುದು.

ಉ :—ಸುಂದರನಾದ ಮಗ–ಸುಂದರಿಯಾದ ಮಗಳು–ಸುಂದರವಾದ ಮಗು.
ಆದರೆ,

(೧) ಉತ್ತರ ವಿಶೇಷಣವು ಇದಕ್ಕೆ ಅಪವಾದವು.

ಉ :—ಅವು ಕುಲಕ್ಕೆ ಭೂಷಣ. (ವಚನಭಿನ್ನತೆ)
ಅವನು ಬಡವರ ಆಧಾರ. (ಲಿಂಗಭಿನ್ನತೆ)

(೨) ವಿಶೇಷ್ಯವು ಯಾವ ವಿಭಕ್ತಿಯಲ್ಲಿದ್ದರೂ, ವಿಶೇಷಣವು ಪ್ರಥಮೆಯಲ್ಲಿರುವುದು.

ಉ :—ಸಮನಾದ ಮನುಷ್ಯನಲ್ಲಿ (ಸಮ ನು + ಆದ)
ಬಡಕಾದ ವೈಯಿಂದ (ಬಡಕು + ಆದ)

(೩) ಬಹುವಚನ ಸಂಖ್ಯಾವಾಚಕ ವಿಶೇಷಣದ ವಿಶೇಷ್ಯವು ಏಕವಚನದಲ್ಲಿಯೂ ಬರಬಹುದು.

ಉ :—ಸಾವಿರ ಬಗೆಯ ಮತಗಳು ನಮ್ಮ ಮತಿಯನ್ನು ಕೆಡಿಸುತ್ತಲಿವೆ. (ಬಗೆಗಳ)

### (ಇ) ಕರ್ತೃ–ಕ್ರಿಯಾಪದಗಳ ಸಂಬಂಧವು :—

ಸಾಮಾನ್ಯವಾಗಿ ಕ್ರಿಯಾಪದವು ಕರ್ತೃವಿನ ಪುರುಷ-ಲಿಂಗ-ವಚನಗಳನ್ನು ಪಡೆಯುವುದು.

ಉ :—ರಾಮನು ಗ್ರಂಥವನ್ನು ಓದಿದನು.

ಹಕ್ಕಿಗಳು ಮರಗಳಲ್ಲಿ ಕುಳಿತವು.
ಅವಳು ನದಿಯಲ್ಲಿ ಮುಳುಗಿದಳು.

ಆದರೆ,

**ಪುರುಷ:—ಉತ್ತಮ ಪುರುಷದ** ಕರ್ತೃವಿನೊಡನೆ, ಬೇರೆ ಪುರುಷಗಳ ಕರ್ತೃಗಳು ಒಂದೇ ವಾಕ್ಯದಲ್ಲಿದ್ದರೆ, ಕ್ರಿಯಾಪದವು **ಉತ್ತಮಪುರುಷ**ದ್ದಿರಬೇಕು. **ಮಧ್ಯಮ-ಪ್ರಥಮ** ಪುರುಷಗಳ ಕರ್ತೃಪದಗಳು ಒಂದೇ ವಾಕ್ಯದಲ್ಲಿದ್ದರೆ ಕ್ರಿಯಾಪದವು **ಮಧ್ಯಮ** ಪುರುಷದ್ದಿರಬೇಕು.

**ಉ:**—ನಾನೂ-ನೀನೂ-ಅವಳೂ ತೋಟಕ್ಕೆ ಹೋದೆವು. ನಾನೂ-ನೀನೂ ಹೋದೆವು. ನಾನೂ ಅವಳೂ ಹೋದೆವು. ನೀನೂ-ಅವಳೂ ಹೋದಿರಿ.

**ಲಿಂಗ:**—ಒಂದೇ ವಾಕ್ಯದಲ್ಲಿ ಬೇರೆ ಬೇರೆ ಲಿಂಗಗಳ ಕರ್ತೃಪದಗಳಿದ್ದರೆ ಕ್ರಿಯಾಪದವು ಕೊನೆಯ ಕರ್ತೃಪದದ ಲಿಂಗವನ್ನು ಪಡೆಯುವುದು.

**ಉ:**—ಅವನೂ-ಅವಳೂ-ಅದೂ ಬಂದವು.
ಅವನೂ ಅದೂ ಅವಳೂ ಬಂದರು.
ಅವಳೂ ಅದೂ ಅವನೂ ಬಂದರು.

**ವಚನ:**—

(೧) ಒಂದು ಕ್ರಿಯಾಪದಕ್ಕೆ ಹಲವು ಕರ್ತೃಗಳಿದ್ದರೆ ಕ್ರಿಯಾಪದಕ್ಕೆ ಬಹುವಚನವು ಬರುವುದು.

**ಉ:**—ಮೃಗವೂ ಸಿಂಹವೂ ಹುಲಿಯೂ ಕಾಡಿನಲ್ಲಿರುವವು.

(೨) ಒಂದು ಕ್ರಿಯಾಪದಕ್ಕೆ ಸಂಬಂಧಿಸಿದ ಹಲವು ಕರ್ತೃಗಳು ಬೇರೆ ಬೇರೆ ಕಾರಕ-ವಿಶೇಷಣ-ಕೃದಂತಾವ್ಯಯಗಳಿಗೆ ಸಂಬಂಧಿಸಿರಲು, ಕ್ರಿಯಾಪದಕ್ಕೆ ವಿಕಲ್ಪವಾಗಿ ಏಕವಚನವು ಬರುವುದು.

**ಉ:**—ರಾಮನಿಂದ ರಾವಣನೂ—ಕೃಷ್ಣನಿಂದ ಕಂಸನೂ ಕೊಲ್ಲಲ್ಪಟ್ಟನು—ಕೊಲ್ಲಲ್ಪಟ್ಟರು.
ಹರ್ಷನನ್ನು ಸೋಲಿಸಿದ ಪುಲಿಕೇಶಿಯೂ—ಹೊಸ ಶಕವನ್ನು ಪ್ರಾರಂಭಿಸಿದ ವಿಕ್ರಮನೂ—ಕನ್ನಡಿಗನು—ಕನ್ನಡಿಗರು.

(೩) ಹೊಗಳಿಕೆ ತೆಗಳಿಕೆಗಳನ್ನು ಸೂಚಿಸುವಾಗ ಏಕವಚನದ ಸ್ಥಳದಲ್ಲಿ ಬಹುವಚನವು ಬರುವುದು.

**ಉ:**—ಆ ಮಹನೀಯರು ನಮ್ಮ ನಾಡಿಗೆ ಭೂಷಣರು! ಯಾಕೆ, ರಾಯರು ಬಲುಬೇಗ ಬರೋಣವಾಯಿತು.

(೪) ಕರ್ತೃಪದವು ಜಾತಿವಾಚಕ ಏಕವಚನವಿದ್ದಾಗ ಕ್ರಿಯಾಪದವನ್ನು ಬಹುವಚನದಲ್ಲಿಯೇ ಇಡುವುದುಂಟು.

ಉ :—ಕುದುರೆ ಜಿಗಿದವು, ನೆಗೆದವು; ಮುಳ್ಳು ಮುರಿದವು—ಹಳ್ಳ ಹರಿದವು.

**ಸೂಚನೆ :**—ಈ ಬಗೆಯ ಹೊಂದಿಕೆ ಇಲ್ಲದಿದ್ದರೆ ವಾಕ್ಯವು ಅಶುದ್ಧವಾಗುವುದುಂಟು.

**೨. ಸುಲಭತೆ :—**

**ಸುಲಭತೆಯು** ಪ್ರತಿವಾಕ್ಯದಲ್ಲಿರಬೇಕಾದ ಪ್ರಧಾನ ಗುಣ. ವಾಕ್ಯದ ಅರ್ಥವು ಸಹಜವಾಗಿ ತಿಳಿಯುವಂತಿರುವುದು ಅವಶ್ಯ. **ತಿಳಿವು ಬರಹದ ಮೂಲ ಉದ್ದೇಶ**ವಾಗಿದ್ದರಿಂದ ನಾವು ಈ ವಿಷಯವನ್ನು ಚೆನ್ನಾಗಿ ಗಮನಿಸಬೇಕು. ವಾಕ್ಯವು ತಿಳಿಯಾದುದಾಗಲು, ಅದರಲ್ಲಿಯ ಶಬ್ದಗಳ ಸುಲಭತೆಯ ಜೊತೆಯಲ್ಲಿ, ಕೆಳಗಿನ ಸಂಗತಿಗಳೂ ಅವಶ್ಯವಾದವುಗಳು.

**(೧) ಐಕ್ಯ**—(೧) ಪ್ರತಿಯೊಂದು ವಾಕ್ಯದಲ್ಲಿ ಅನೇಕ ವಿಷಯಗಳ ಮಿಶ್ರಣವಿರಕೂಡದು. ಅದರಲ್ಲಿ ಒಂದೇ ಪ್ರಧಾನ ಅರ್ಥವು ಇರಬೇಕು. ಉಳಿದವುಗಳು ಬರಲೇಬೇಕಾಗಿದ್ದರೆ ಅವು ಅದಕ್ಕೆ ಅಧೀನವಾದವುಗಳಾಗಿರಬೇಕು.

ಉ :—(ಐಕ್ಯಕ್ಕೆ) ಸುಸಾಧನಗಳ ಸೌಲಭ್ಯವಿದ್ದರೂ ನಗರವಾಸಿಗಳು ನೆಳಲಿನಲ್ಲಿ ಕುಳಿತುಕೊಂಡು ಬಿಸಿಲಿನ ತಾಪಕ್ಕೆ ಹಾಹಾಕಾರಮಾಡುತ್ತಿರಲು, ಪಥಿಕರು ಉರಿಯುವ ಬಿಸಿಲಿನಲ್ಲಿ ಹಾದಿ ನಡೆದು ಕಂಗೆಟ್ಟು, ಬಳಲುತ್ತಿರುವ ಸ್ಥಿತಿಯು ಕಲ್ಪನೆಯಿಂದ ಕೂಡ ನಮಗೆ ಸಹಿಸುವುದೇ ? (ಐಕ್ಯಭಂಗಕ್ಕೆ) ಸುಸಾಧನಗಳ ಸೌಲಭ್ಯವುಳ್ಳ ನಗರವಾಸಿಗಳು ನೆಳಲಿನಲ್ಲಿ ಕುಳಿತುಕೊಂಡು ಬಿಸಿಲಿನ ತಾಪಕ್ಕೆ ಹಾಹಾಕಾರಮಾಡುತ್ತಿದ್ದರೆ ಪಥಿಕರು ಉರಿಯುವ ಬಿಸಿಲಿನಲ್ಲಿ ಹಾದಿಯು ನಡೆದು ಕಂಗೆಟ್ಟು ಬಳಲುತ್ತಿದ್ದರು; ಮತ್ತು ಇದರ ಕಲ್ಪನೆಯು ನಮಗೆ ಸಹಿಸುವುದೇ !

(೨) ಒಂದೇ ವಾಕ್ಯದಲ್ಲಿ ಕರ್ತೃಪದವನ್ನು ಬದಲಿಸದಿರಬೇಕು.

ಉ :—(ಅ) ಧರ್ಮವು ಅಂತರಂಗವನ್ನು ವಿಮಲಗೊಳಿಸುವುದು ಮತ್ತು ಅದರಿಂದ ಮುಕ್ತಿಸುಖವು ಲಭಿಸುವುದು.

(ಆ) ಧರ್ಮವು ಅಂತರಂಗವನ್ನು ವಿಮಲಗೊಳಿಸಿ ಮುಕ್ತಿಸುಖವನ್ನು ದಯಪಾಲಿಸುವುದು.

(೩) ಹಾಳು ಕೀಳು ವಿವರಗಳನ್ನು ತೊರೆಯಬೇಕು.

ಉ :—೧. ನನ್ನ ಲೆಕ್ಕಣಿಕೆಯನ್ನು ಕೈಯಲ್ಲಿ ತೆಗೆದುಕೊಂಡು ನಾನೊಂದು ಸುಂದರವಾದ ಓಲೆಯನ್ನು ಬಳೆದೆ.

೨. ಮುಂದಿನ ಕರ್ನಾಟಕದ ರಾಜಧಾನಿಯಾಗಲು ಧಾರವಾಡವೇ ಯೋಗ್ಯ ಮತ್ತು ಅದು ಒಂದು ಸ್ಟೇಶನ್ನೂ ಅದೆ.

**ಸೂಚನೆ:**—೧ನೆಯ ವಾಕ್ಯದ ಪೂರ್ವಾರ್ಧವೂ ೨ನೆಯ ವಾಕ್ಯದ ಉತ್ತರಾರ್ಧವೂ ಅನವಶ್ಯಕ.

**(೨) ಅನ್ವಯ:**—ವಾಕ್ಯವು ತಿಳಿಯಾದದ್ದಾಗಬೇಕಾದರೆ ಅದರಲ್ಲಿಯ ಶಬ್ದಗಳಲ್ಲಿ ಸರಿಯಾದ ಅನ್ವಯ—ನಿಕಟ ಸಂಬಂಧ—ವಿರಲು ಬೇಕು, ದೂರಾನ್ವಯವು ವಾಕ್ಯದ ಸಂದಿಗ್ಧತೆಯನ್ನು ಹೆಚ್ಚಿಸುವುದುಂಟು. ಎಷ್ಟೋ ಸಲ ಅದರಿಂದ ವಿಪರೀತ ಅರ್ಥವೂ ಸೂಚಿತವಾಗುವುದುಂಟು.

**ಉ:**—ಯಜಮಾನನು ತನ್ನ ಸೇವಕನನ್ನು ಉದ್ಧಟತನದಿಂದ ಹೋಗಲು ಹೇಳಿದನು. ಆತನು ಬರೀ ಶಾಲೆಗೆ ಆಡಲು ಹೋದನು.

**ಸೂಚನೆ:**—ಮೇಲಿನ ಎರಡು ವಾಕ್ಯಗಳಲ್ಲಿ ದೂರಾನ್ವಯದ ದೋಷಗಳು ಒಡೆದು ಕಾಣುವವು. ಒಂದರಲ್ಲಿ 'ಉದ್ಧಟತನದಿಂದ' ಇದು 'ಹೇಳುವುದಕ್ಕೆ' ಸಂಬಂಧಿಸಿರಬೇಕಾದದ್ದು— 'ಹೋಗುವುದಕ್ಕೆ' ಸಂಬಂಧಿಸಿದೆ. ಆದುದರಿಂದ ಹೋಗುವುದು 'ಉದ್ಧಟತನದಿಂದ' ಆದದ್ದೋ ಹೇಳುವುದು 'ಉದ್ಧಟತನದಿಂದ' ಆದದ್ದೋ ತಿಳಿಯಲು ಬಿಗಿಯಾಗಿದೆ. ಇದೇ ತಪ್ಪು ಎರಡನೆಯ ವಾಕ್ಯದಲ್ಲಿ ಕಂಡು ಬರುವುದು. ಅಲ್ಲಿ 'ಬರೀ' ಎಂಬುದು 'ಆಡಲು' ಎಂಬುದಕ್ಕೆ ಸಂಬಂಧಿಸಿರಬೇಕು.

**(೩) ಅಲಂಕಾರಗಳ ಅಮಿಶ್ರಣ:**—ಭಿನ್ನ ಅಲಂಕಾರಗಳ ಬೆರಕೆಯಿಂದಲೂ ಸಂದಿಗ್ಧತೆಯುಂಟಾಗುವುದು. ಆದುದರಿಂದ ಅವುಗಳ ಮಿಶ್ರಣವಾಗದಂತೆ ಅವನ್ನು ಎಚ್ಚರದಿಂದ ಉಪಯೋಗಿಸಿರಿ. ಅವು ಸರಿಯಾದ ಚಿತ್ರವನ್ನು ಸಲ್ಲಿಸಬೇಕು.

**ಉ:**—೧. ಜೀವನದ ಮುಂಜಾವು ಹಿಗ್ಗಿನ ಸುಗ್ಗಿಯು. (ಮಿಶ್ರ)

೨. ಜೀವನದ ವಸಂತವು ಹಿಗ್ಗಿನ ಸುಗ್ಗಿಯು. (ಸರಿಯಾದದ್ದು)

**ಸೂಚನೆ:**—ಇಲ್ಲಿ ಯೌವನವನ್ನು ಒಂದೇ ಕಾಲಕ್ಕೆ ಮುಂಜಾವಿಗೂ ಸುಗ್ಗಿಗೂ ಹೋಲಿಸಲಾಗಿದೆ. ನಿಜವಾಗಿ ಸುಗ್ಗಿಯಿರುವುದು ಒಂದು ಋತುವಿನಲ್ಲಿ, ವರ್ಷದ ಒಂದು ವಿಭಾಗದಲ್ಲಿ, ದಿನದ ವಿಭಾಗದಲ್ಲಲ್ಲ. ಆದುದರಿಂದ ಈ ಎರಡು ಹೋಲಿಕೆಗಳಲ್ಲಿ ಹೊಂದಿಕೆಯಿಲ್ಲ. ಆದರೆ 'ಮುಂಜಾವಿನ' ಸ್ಥಳದಲ್ಲಿ 'ವಸಂತ' ವನ್ನಿಟ್ಟರೆ ಅದೊಂದು ಸುಗ್ಗಿಯ ಕಾಲವಾಗಬಹುದು. ಮತ್ತು ಅಲಂಕಾರಗಳ ಮಿಶ್ರಣದಿಂದುಂಟಾದ ಗೊಂದಲವು ಇಲ್ಲದಂತಾಗುವುದು.

## ೩. ಸೌಂದರ್ಯ:—

ಸೌಂದರ್ಯವು ವಾಕ್ಯದ ಇನ್ನೊಂದು ಗುಣ. **ತಿಳಿವಿನಂತೆ** – ತಿಳಿ

ವಳಿಕೆಯಂತೆ, **ನಲಿವೂ**-ಆನಂದವೂ ವಾಕ್ಯವನ್ನು ಬರೆಯುವಾಗ ನಮ್ಮೆದುರಿರಬೇಕಾದ ಇನ್ನೊಂದು ಗುರಿ. **ಅಂದವಾದ ವಾಕ್ಯದಲ್ಲಿಯ ತಿಳಿಯಾದ ಅರ್ಥವನ್ನು** ಓದುಗರು ಆನಂದದಿಂದ ಗ್ರಹಿಸುವರು. ವಾಕ್ಯದ ಸೌಂದರ್ಯವು ವಿಶೇಷವಾಗಿ ಕೆಳಗಿನ ಮಾತುಗಳನ್ನವಲಂಬಿಸಿರುವುದು.

(i) **ಭಾವಕ್ಕೆ ತಕ್ಕ ದೇಹ**:—ವಾಕ್ಯದಲ್ಲಿದ್ದ ಶಬ್ದಗಳು ಭಾವವನ್ನು ಚೆನ್ನಾಗಿ ಮೂಡಿಸುವಂತಹವಿರಬೇಕು. ೧. ಲಲಿತ ಭಾವಕ್ಕೆ ಲಲಿತ ಶಬ್ದಗಳು. ೨. ಗಂಭೀರ ಭಾವಕ್ಕೆ ಗಂಭೀರ ಶಬ್ದಗಳು. ಇವುಗಳ ಕೆಲವು ಉದಾಹರಣೆಗಳನ್ನು ಶಬ್ದವಿಚಾರದಲ್ಲಿ ಕೊಡಲಾಗಿದೆ. ಅದನ್ನೂ ನೋಡಿ ಕೊಳ್ಳಬಹುದು.

ಉ:—೧. ಮೂಡುವನು, ರವಿ ಮೂಡುವನು !
ಕತ್ತಲೊಡನೆ ಜಗಳಾಡುವನು.
೨. ಹಾಯ್ ! ಕರ್ನಾಟಕದಿತಿಹಾಸ ನಿನ್ನಭಿಮಾನ
ಹೆಚ್ಚಿಸುವುದಕ್ಕೆ ಬೇಕೆ ?
ತಾಯಿ, ತಾಯೆಂದು ಸಲೆ ಸಿದ್ಧಮಾಡಲು ಬಣಗು ಒಣತರ್ಕ
ಶಾಸ್ತ್ರವೇಕೆ ?

(ii) **ಪದಲಾಲಿತ್ಯ**:—ಇದು *ಅನುಪ್ರಾಸಾದಿ ಕೆಲವು ಶಬ್ದಾಲಂಕಾರಗಳಿಂದ ಬರತಕ್ಕಂತಹದು. ಆದರೆ ಅವುಗಳ ಅತಿರೇಕವು ಸೌಂದರ್ಯವನ್ನು ಹಿಗ್ಗಿಸದೆ-ಹೆಚ್ಚಿಸದೆ-ಕುಗ್ಗಿಸುವುದುಂಟು, ಕಡಿಮೆ ಮಾಡುವುದುಂಟು. ಆದುದರಿಂದ ಅವನ್ನು ಎಚ್ಚರದಿಂದ ಉಪಯೋಗಿಸಬೇಕು.

ಉ:—೧. ಕೂಲಿ ಕೆಲಸದಲ್ಲಿಯೂ ಕುಲೀನತೆಯಿಲ್ಲವೇ ?
೨. ಎಳೆತನದಲ್ಲಿಯೆ ಹಳೆತನದ ಕುರುಹುಗಳು ಕಾಣಬೇಕೇ ?
ಬೆಳೆಯ ಸಿರಿ ಎಳೆಯಲ್ಲಿ !
೩. ಮೈ ಚೆಲುವಿನ ಮದವಿದ್ದರೆ, ಮುದಿತನವು ಅದೆಲ್ಲವನ್ನು ಮುಮುರಿ ಮೂಲೆಗೊತ್ತುತ್ತದೆ.
೪. ರೂಢಿಯ ಬೀಡಿನಲಿ ಬಾಡಿಬಿದ್ದ ಹೇಡಿಗೆ ಗೂಢವು ಗಾಢಾಂಧವಾದ ಗೂಡೇ ಸರಿ.

**ಸೂಚನೆ**:—ಮೊದಲಿನ ಎರಡು ಉದಾಹರಣೆಗಳಲ್ಲಿಯ ಮಧುರವಾದ ಮಿತಿಯು ಮುಂದೆ ಅತಿಯಾಗಿ, ಕೃತ್ರಿಮತೆಯನ್ನು ತಾಳಿರುವುದು.

(iii) **ಅಲಂಕಾರಗಳು***:— ಮಿತವಾಗಿ ಉಪಯೋಗಿಸಿದ ಅಲಂ

* ಅನುಬಂಧವನ್ನು ನೋಡು.

ಕಾರಗಳು ವಾಕ್ಯದ ಚೆಲುವನ್ನು ಹೆಚ್ಚಿಸುವವು. ಕನ್ನಡದಲ್ಲಿ ಅಲಂಕಾರ ಗಳು ನೂರಕ್ಕೆ ಮಿಕ್ಕಿರುವವು. ಅವನ್ನೆಲ್ಲ ಜಿಜ್ಞಾಸುಗಳು ಅಲಂಕಾರ ಗ್ರಂಥಗಳಿಂದ ಅರಿತುಕೊಳ್ಳಬಹುದು. ಕೆಳಗೆ ಕಾಣಿಸಿದ ನಾಲ್ಕು ಅಲಂಕಾರ ಗಳನ್ನು ಪ್ರಸಂಗವರಿತು ಉಪಯೋಗಿಸಿದರೆ ಶೈಲಿಯ ಸೌಂದರ್ಯವು ಬೆಳೆಯು ದಿರದು.

(ಅ) **ಉಪಮೆ :**—ಎರಡು ವಸ್ತುಗಳಲ್ಲಿಯ **ಅಂದವಾದ ಹೋಲಿಕೆಯೆ** ಉಪಮೆ. ಸಾಮಾನ್ಯ ಹೋಲಿಕೆಯು ಉಪಮೆಯಾಗಲರಿಯದು. ‘ **ಅವನು ನನ್ನಂತಿರುವ** ’ ಇದು ಉಪಮೆಯಲ್ಲ.

ಉ :—ಅವನ ಕೀರ್ತಿಯು **ಪರಿಮಳದಂತೆ** ಪಸರಿಸಿತು. ಅವರ ಮುಖವು **ತಾವರೆಯಂತೆ** ಪ್ರಸನ್ನವಾದುದು. ಇಲಿಯು **ಹುಲಿಯಂತೆ** ಹೋರಬಹುದೆ ? ಹರಿಹರನು ಕಾಳಗದಲ್ಲಿ **ಸಿಂಹನಂತೆ** ಪರಾಕ್ರಮಿಯು.

**ಸೂಚನೆ :**—ಇಲ್ಲಿ ‘ ಕೀರ್ತಿಯು ’ ‘ **ಉಪಮೇಯ** ’ ; ‘ ಪರಿಮಳವು ’ ‘ **ಉಪಮಾನ** ’ ; ಇವು ಪಾರಿಭಾಷಿಕ ಶಬ್ದಗಳು. ಒಂದರ ಅರ್ಥವು ‘ **ಹೋಲಿಸಲ್ಪಟ್ಟ ಶಬ್ದ** ’ ; ಇನ್ನೊಂದರ ಅರ್ಥವು ‘ **ಹೋಲಿಸುವ ಶಬ್ದ** ’.

(ಆ) **ರೂಪಕ :— ಉಪಮಾನ ಉಪಮೇಯ** ವಸ್ತುಗಳನ್ನು ‘ **ಒಂದರಂತೆ ಮತ್ತೊಂದು ಇದೆ** ’ ಎಂದುಸುರದೆ, ‘ **ಒಂದು ಮತ್ತೊಂದೆಯೆ ಇದೆ** ’ ಎಂದು ಒಣ್ಣಿಸಿದರೆ **ರೂಪಕ** ಅಲಂಕಾರವಾಗುವುದು.

ಉ :—ಅವಳ ಮುಖ-ಕಮಲವು ಅರಳಿತು.
ಆ ನರಸಿಂಹನು ಅಂದು ಗರ್ಜಿಸಿದನು.
ನರಕವೇ ಪಾಪದ ಪಾರಿತೋಷಕ.
ಮೂಡಲಲ್ಲಿ ಬೆಳಕಿನ ಕಾರಂಜಿಯು ಪುಟಿಯಿತು.

**ಸೂಚನೆ :—** ‘ **ಮುಖವು ಕಮಲದಂತೆ** ’ ಇದೆ ಎಂದರೆ ಅದು ‘ **ಉಪಮೆ** ’ ; ‘ **ಮುಖವೇ ಕಮಲ** ’ ಎಂದರೆ ಅದು **ರೂಪಕ. ರೂಪಕವು ಉಪಮೆಗಿಂತ ಪ್ರಬಲವಾದ ಅಲಂಕಾರವು.**

(ಇ) **ಉತ್ಪ್ರೇಕ್ಷೆ :**—ಒಂದು ವಸ್ತುವನ್ನು ಮತ್ತೊಂದು ವಸ್ತುವನ್ನಾಗಿ ಭಾವಿಸುವುದು **ಉತ್ಪ್ರೇಕ್ಷೆ.** ಈ ಭಾವನೆಯು ಸಂದೇಹಕ್ಕಿಂತ ಮೇಲಾದುದೂ, ನಿಶ್ಚಯಕ್ಕಿಂತ ಕಡಿಮೆಯದೂ ಇರುವುದು.

**ಉಪಮೆಯಲ್ಲಿಯ ಉಪಮಾನವು** ಹೆಚ್ಚಾಗಿ **ಲೋಕಪ್ರಸಿದ್ಧವಾದದ್ದಿ**ರುವುದು. **ಉತ್ಪ್ರೇಕ್ಷೆ**ಯಲ್ಲಿ ಎಷ್ಟೋ ಸಲ **ಕವಿಕಲ್ಪಿತವಾದ**ದ್ದಾಗಿರುವುದು.

ಉ :—೧. ಆಕಾಶವು ಕಾಡಿಗೆಯನ್ನು ಸುರಿಸುವುದೇನೋ ಎನ್ನುವಂತೆ ಕಗ್ಗತ್ತಲು ಕವಿಯಿತು.

೨. ಸೇನಾರಜದಿಂದ ಮಾಸಿದ ಮೈಯನ್ನು ತೊಳೆಯುವುದಕ್ಕಾಗಿಯೋ ಏನೋ ಸೂರ್ಯನು ಪಶ್ಚಿಮ ಸಮುದ್ರವನ್ನು ಸೇರಿದನು.

**(ಈ) ಅತ್ಯುಕ್ತಿ:**— ಅದ್ಭುತವಾಗಿಯೂ ಅಸಂಭಾವಿತವಾಗಿಯೂ ಇರುವಂತೆ ಹೇಳಿದ **ಶೌರ್ಯ–ಔದಾರ್ಯ–ಸೌಂದರ್ಯ** ಇತ್ಯಾದಿಗಳ ವರ್ಣನೆಗೆ ಈ ಹೆಸರು.

ಉ :—ಅವನ ಕೀರ್ತಿಕಾಂತೆಯು ಸುರನದಿಯಲ್ಲಿ ಮಿಂದು ವಿಧುದರ್ಪಣವನ್ನು ನೋಡುತ್ತಿದ್ದಳು.

**೪. ಸಾಮರ್ಥ್ಯ:—**

ಚೆನ್ನಾಗಿ **ತಿಳಿಸಲು** '**ಸುಲಭತೆಯೂ**' **ನಲಿಸಲು** '**ಸೌಂದರ್ಯವೂ**' ಅವಶ್ಯವಿದ್ದಂತೆ, ಓದುಗರ ಮನಸ್ಸನ್ನು **ಒಲಿಸಲು** ನಮ್ಮ ವಾಕ್ಯದಲ್ಲಿ ಸರಿಯಾದ '**ಕಸುವು**' (ಬಿಗಿ) ಬೇಕು. ಇದರಿಂದಲೇ ಇಷ್ಟವಾದ ಪರಿಣಾಮವನ್ನುಂಟುಮಾಡಲು ಸಾಧ್ಯವಾಗುವುದು. ಈ ಸಾಮರ್ಥ್ಯವನ್ನು ಕೆಲಮಟ್ಟಿಗೆ ಕೆಳಗಿನ ಸಾಧನಗಳಿಂದ ಉಂಟುಮಾಡಲು ಬಹುದು.

**(೧) ಸೂಚಕ ವಿಶೇಷಣಗಳಿಂದ:**—ವಾಕ್ಯದ 'ಕಸುವು' ಅನೇಕ ಸಲ ಅರ್ಥಪೂರ್ಣವಾದ ಸೂಚಕ ವಿಶೇಷಣಗಳನ್ನು ಅವಲಂಬಿಸಿರುವುದು.

ಉ :—ಯೌವನದ **ಕಮನೀಯ** ಕನಸುಗಳು ಅದಾರನ್ನು ಮೋಹಿಸುವುದಿಲ್ಲ ? ಮುಂಜಾವಿನ **ಸೊಂಪಿನ** ಸಿರಿಯು ನಮ್ಮನ್ನು ಸಂತಸದ ಸಾಗರದಲ್ಲಿ ತೇಲಿಸಿತು.

**ನಿಷ್ಠುರ**ವಾದ ಚಳಿಯು ಚರಾಚರವನ್ನು ಅತಿಯಾಗಿ ನಡುಗಿಸಿತು.

**ಸೂಚನೆ:—'ಕಮನೀಯ ಕನಸುಗಳು' 'ಸೊಂಪಿನ ಸಿರಿಯು' 'ನಿಷ್ಠುರ ಚಳಿ'** ಇವುಗಳಲ್ಲಿ ಒಂದು ಬಗೆಯ ಅರ್ಥಪೂರ್ಣತೆಯು ಕಂಡುಬರುವುದು.

**(೨) ಸರಿಯಾದ ಶಬ್ದಜೋಡಣೆಯಿಂದ:**— ವಾಕ್ಯದಲ್ಲಿ ಶಬ್ದಗಳನ್ನು ಸರಿಯಾದ ಸ್ಥಲದಲ್ಲಿಡುವುದರಿಂದ ಯೋಗ್ಯಪರಿಣಾಮವಾಗುವುದುಂಟು. ಪ್ರಧಾನ ಶಬ್ದಗಳನ್ನು ಪ್ರಮುಖ ಸ್ಥಲಗಳಲ್ಲಿಡುವುದು. ವಾಕ್ಯದಲ್ಲಿಯ **ಆದಿ–ಅಂತ್ಯ** ಸ್ಥಲಗಳು **ಪ್ರಮುಖ ಸ್ಥಲಗಳು.** ಜೊತೆಯಲ್ಲಿ ಅವುಗಳ ಸರಿಯಾದ ಹೊಂದಿಕೆಯೂ ಅತ್ಯವಶ್ಯ.

ಉ :—೧. ಮಡಿದನಾ ಮಾರಾಯ.

೨. ಎನಿತು ಮೋಹಕವಯ್ಯ ಅಧಿಕಾರದಾ ಮದವು !

೩. ಎಂಥ ನಾಡಿದು, ಎಂಥ ಕಾಡಾಯಿತು !
೪. ಶರಣರಾ ಜೀವನನ ಪಾವನ ಮಾಡುವರು.

**(೩) ಶಬ್ದಗಳ ಪುನರುಕ್ತಿಯಿಂದ :—** ಪರಿಣಾಮಕಕ್ಕಾಗಿ ಎಷ್ಟೋ ಸಲ **ಪುನರುಕ್ತಿ**ಯನ್ನು ಕವಿಗಳು ಉಪಯೋಗಿಸುವುದುಂಟು.

**ಉ :—**೧. ಏಳಿರೇಳಿರಿ ! ಬಂಟರೆಲ್ಲರು.
೨. ಮಣಿಮಣಿದು, ಕುಣಿಕುಣಿದು, ಕೆಲೆಕೆಲೆದು ನಲಿದಾಡಿದನು.

**(೪) ಕ್ರಮೋನ್ನತಿಯಿಂದ** (Climax) :— ಒಂದು ಭಾವವನ್ನು ಚೆನ್ನಾಗಿ ಮನಸ್ಸಿನಲ್ಲಿ ಮೂಡಿಸಲು ಹೆಚ್ಚು ಹೆಚ್ಚು ಪ್ರಬಲವಾದ ಶಬ್ದ ಸಮೂಹಗಳನ್ನು ಕ್ರಮದಿಂದ ಒಂದರ ಮುಂದೊಂದು ಇಡುವ ಪರಿಪಾಠ ವುಂಟು; ಇದೇ **ಕ್ರಮೋನ್ನತಿಯು.**

**ಉ :—**ಬಸವಳಿದು, ಬಿಸುಸುಯ್ದು, ಬಾಡಿ ಬಡವಾದೆನಯ್ಯಾ !
ಬೇಡಯ್ಯ ! ಬೇಡೆನ್ನರಸ ! ಬೇಡೆನ್ನ ಭಕ್ತ ನಿಧಿಯೆ ! ಕುಲವೆ,-ಬಲವೆ;
ಗತಿಯೆ ಮತಿಯೆ ! ಪುಣ್ಯವೆ-ಪ್ರಾಣವೇ-ಕಾವುದು-ಕಾವುದು.

**(೫) ಸಮತೂಕ ವಾಕ್ಯಗಳಿಂದ :—** ಸರಿತೂಕವುಳ್ಳ ವಾಕ್ಯಗಳ ಯುಗಲವು ಬಲು ಪರಿಣಾಮಕಾರಿಯಾಗಿರುವುದು. ಅದರಲ್ಲಿ ಅರ್ಥದ '**ವಿರೋಧ**' ವಿದ್ದರಂತೂ ಅವುಗಳ ಕಸುವು ಇನ್ನೂ ಹೆಚ್ಚುವುದು.

**ಉ :—**೧. ಅವರು ಆಡಿದುದೇ ಆದೇಶ, ಮಾಡಿದುದೇ ಮಹಾಕಾರ್ಯ.
೨. ಅಗ್ನಿಯು ಕಾವಿನಿಂದ ಹುಟ್ಟಿಸಿದ್ದುಂಟು, ಬೆಳಕಿನಿಂದ ಕಾಯ್ದುದ್ದುಂಟು; ಬೆಂಕಿಯಿಂದ ಸುಟ್ಟಿದ್ದುಂಟು.
೩. ನೀನು ನಕ್ಕರೆ ಬೆಳಕಿನ ಬೆಳೆ; ಅತ್ತರೆ ಮುತ್ತಿನ ಮಳೆ; ನೀನು ನಕ್ಕರೊಂದು ರುಚಿ; ಅತ್ತರೊಂದು ರುಚಿ.
೪. ಉಲ್ಲಾಸದ ಅಭಾವವೆ ಆಯಾಸ; ಆಸಕ್ತಿಯ ಅಭಾವವೇ ಆಲಸ್ಯ.

**ಸಮತೂಕದ** (Balance) ರಚನೆಯಿಂದ ಎರಡು ಬಗೆಯ ಲಾಭ ಗಳಾಗುವವು. ಅದರಿಂದ ೧. **ನೆನವಿಗೆ ನೆರವಾಗಿ** ೨. **ಅಂದವಾದ ಅಚ್ಚರಿ**-ಆಶ್ಚರ್ಯ ಉಂಟಾಗುವುದು. ಪುನರುಕ್ತಿಯು ಮನಸ್ಸನ್ನು ಸಹಜ ವಾಗಿ ಸೆಳೆದು, ವಿಷಯ ವೈವಿಧ್ಯದಲ್ಲಿಯ ರಚನಾಸಾಮರ್ಥ್ಯವು ಒಂದು ಬಗೆಯ ಆನಂದವನ್ನು ಹುಟ್ಟಿಸುವುದು. ತೀರ ಹೊಸ ಅರ್ಥವನ್ನು ಸುಮಾರಾಗಿ ಅದೇ ಶಬ್ದದಿಂದ ಉಸುರುವುದು ಅಚ್ಚರಿಯನ್ನು ಹುಟ್ಟಿಸದಿರದು.

**ಉ :—**ಇದು ದಿಟವಿದ್ದರೂ ಕಟುವಲ್ಲ.
ಆಡಿದ್ದನ್ನು ಮಾಡದಿರುವುದಕ್ಕಿಂತ ಮಾಡಿದ್ದನ್ನು ಆಡದಿರುವುದು ಲೇಸು.

(೬) **ಪ್ರಶ್ನೆಗಳ ಮಾಲೆ** :—ನುರಿತ ಬರಹಗಾರರು ಪರಿಣಾಮಕ್ಕಾಗಿ ಪ್ರಶ್ನೆಗಳ ಸುರಿಮಳೆಯನ್ನೇ ಕರೆಯುವುದುಂಟು.

ಉ :—ಪ್ರಾಣಪ! ಬೆಳುದಿಂಗಳೇಕೆ, ಬಿಸುಪೇಕೆ ? ಅಮೃತವೇಕೆ ವಿಷವೇಕೆ ? ಬೆಳಗೇಕೆ ತಮವೇಕೆ ? ನೀನೇಕೆ ಈ ಮುಳಿಸೇಕೆ ?–ನಂಬಿದರ ಗೋಣಂ ಕೊಯ್ವರೆ? ಶಿಶುವನಿರಿವರೆ ? ಪಶುವಂ ಕೊಲುವರೆ ? ಎನ್ನಂ ಬಿಡುವರೇ ?

## ೪. ವಾಕ್ಯಪಲ್ಲಟ.

**೧. ವಾಕ್ಯ ಭೇದಗಳು :—**

ವಾಕ್ಯಗಳನ್ನು ಸಾಮಾನ್ಯವಾಗಿ ಎರಡು ವಿಧವಾಗಿ ವರ್ಗೀಕರಿಸಬಹುದು. ೧. ಒಂದು ರಚನೆಯ ದೃಷ್ಟಿಯಿಂದ, ೨. ಇನ್ನೊಂದು ಅಭಿಪ್ರಾಯದ ದೃಷ್ಟಿಯಿಂದ.

(೧) **ರಚನೆಯ ದೃಷ್ಟಿಯಿಂದ** ವಾಕ್ಯಗಳಲ್ಲಿ ಮೂರು ಪ್ರಭೇದಗಳನ್ನು ಮಾಡಿರುವರು. (ಅ) **ಸಾಮಾನ್ಯವಾಕ್ಯ** (Simple) (ಆ) **ಮಿಶ್ರವಾಕ್ಯ** (Complex) (ಇ) **ಸಂಯುಕ್ತವಾಕ್ಯ** (Compound) ಇವೇ ಆ ಮೂರು ಭೇದಗಳು.

(ಅ) **ಸಾಮಾನ್ಯವಾಕ್ಯ** :— ಒಂದೇ ಕ್ರಿಯಾಪದವುಳ್ಳ ವಾಕ್ಯವು ಸಾಮಾನ್ಯವಾಕ್ಯವು.

ಉ :—ರಾಮನು ಪ್ರತಿಜ್ಞೆಯನ್ನು ಪರಿಪಾಲಿಸಿದನು.
ನಾಳೆ ನೀನಲ್ಲಿಗೆ ಹೋಗಲೇಬೇಕು.

(ಆ) **ಮಿಶ್ರವಾಕ್ಯ** :—ಒಂದು **ಪ್ರಧಾನ** ಮತ್ತು ಒಂದು ಇಲ್ಲವೆ ಹೆಚ್ಚು **ಅಧೀನ** ವಾಕ್ಯಗಳಿಂದ ಕೂಡಿದ ವಾಕ್ಯವು **ಮಿಶ್ರವಾಕ್ಯವು.** ಈ ಅಧೀನವಾಕ್ಯವು ಪ್ರಧಾನ ವಾಕ್ಯದಲ್ಲಿ (೧) **ಕಾರಕದ** (ಕರ್ತೃ-ಕರ್ಮ) ಕೆಲಸವನ್ನು ಮಾಡಬಹುದು. (೨) '**ನಾಮವಿಶೇಷಣ**' ದ ಕೆಲಸವನ್ನು ಮಾಡಬಹುದು. ಇಲ್ಲವೆ (೩) '**ಕ್ರಿಯಾವಿಶೇಷಣ**' ದ ಕಾರ್ಯವನ್ನು ನೆರವೇರಿಸಬಹುದು.

ಉ :—೧. ನನಗೇನೂ ತಿಳಿದಿಲ್ಲವೆಂಬುದು ನಿಜ.
ಅವನು ನನ್ನನ್ನು ಹೇಗೆ ಕಾಪಾಡಿದನೆಂಬುದನ್ನು ಬಲ್ಲೆಯಾ ?

೨. ನಾನು ಪಂಡಿತನಾಗಬಹುದೆಂಬ ಆಶೆಯಿಂದ ತಂದೆಯವರು ನನ್ನನ್ನು ಕಾಲೇಜಿಗೆ ಕಳುಹಿದರು.

ನಾವು ಎಷ್ಟು ದುಡಿಯುವೆವೋ ಅಷ್ಟು ಸುಖವು ನಮಗೆ ದೊರೆಯುವುದು.

೩. ಕಳ್ಳನು ಯಾವಾಗ ಒಳನುಗ್ಗಿದನೋ ಆವಾಗ ನಾಯಿಯು ಬೊಗಳದಿರಲಿಲ್ಲ.

ನನ್ನನ್ನು ಅವರು ಕರೆದಾರೆಂದು ನಾನಲ್ಲಿ ಸಾಯಂಕಾಲದವರೆಗೆ ಕಾದುಕೊಂಡೆನು.

**ಸೂಚನೆ**:—೧. ಮೊದಲಿನ ಗುಂಪಿನಲ್ಲಿಯ ಅಧೀನವಾಕ್ಯಗಳು ಕರ್ತೃ-ಕರ್ಮಗಳು. ಆದುದರಿಂದ ಅವು '**ನಾಮವಾಕ್ಯ**'ಗಳು; ೨. ಎರಡನೆಯ ಗುಂಪಿನಲ್ಲಿಯ ಅಧೀನವಾಕ್ಯಗಳು ನಾಮಗಳ ವಿಶೇಷಣಗಳು; ಆದುದರಿಂದ ಅವಕ್ಕೆ '**ನಾಮವಿಶೇಷಣವಾಕ್ಯ**' ಎಂದು ಹೆಸರು. ೩. ಮೂರನೆಯ ಗುಂಪಿನಲ್ಲಿಯ ಅಧೀನವಾಕ್ಯಗಳು ಕ್ರಿಯಾಪದಗಳ ವಿಶೇಷಣಗಳಾದುದರಿಂದ ಅವುಗಳಿಗೆ '**ಕ್ರಿಯಾವಿಶೇಷಣವಾಕ್ಯ**'ಗಳೆಂಬ ಹೆಸರು.

೨. (ಅ) **ಏನು? ಏನನ್ನು? ಏತರಿಂದ?** ಎಂಬ ಪ್ರಶ್ನೆಗೆ ಉತ್ತರವಾಗಿ ಬರುವವು **ನಾಮವಾಕ್ಯಗಳು.**

(ಆ) **ಎಂಥ? ಎಷ್ಟು? ಯಾವ?** ಎಂಬವುಗಳಿಗೆ ಉತ್ತರವಾಗಿ ಬರುವುವು **ವಿಶೇಷಣವಾಕ್ಯಗಳು.**

(ಇ) **ಎಲ್ಲಿ? ಯಾವಾಗ? ಏಕೆ? ಹೇಗೆ?** ಎಂಬವುಗಳಿಗೆ ಉತ್ತರವಾಗಿ ಬಂದವುಗಳು **ಕ್ರಿಯಾವಿಶೇಷಣವಾಕ್ಯಗಳು.**

(ಇ) **ಸಂಯುಕ್ತವಾಕ್ಯ**:— ಎರಡು ಇಲ್ಲವೆ ಹೆಚ್ಚು ಸಾಮಾನ್ಯವಾಕ್ಯಗಳಿಂದ ಕೂಡಿದ ವಾಕ್ಯವು **ಸಂಯುಕ್ತ**ವಾಕ್ಯವು. ಇಲ್ಲಿ ಎಲ್ಲ ವಾಕ್ಯಗಳೂ ಪ್ರಧಾನವಾದವುಗಳು. **ಮತ್ತು—ಆದರೆ—ಇಲ್ಲವೆ** ಮುಂತಾದ ಸಮುಚ್ಚಯಾವ್ಯಯಗಳು ಅವನ್ನು ಹೊಂದಿಸುವುದುಂಟು.

ಉ:—ಹಿರಿಯರು ಹೇಳಬೇಕು **ಮತ್ತು** ನಾವು ಕೇಳಬೇಕು. ನಾವು ಆಡುವುದು ಬಹಳ, **ಆದರೆ** ಮಾಡುವುದು ವಿರಲ. ನೀವು ತೆರಳಿರಿ, **ಇಲ್ಲವೆ** ನಾನು ಹೋಗುವೆ. ನಮ್ಮ ಸಮಾಜದಲ್ಲೀಗ ಎಲ್ಲೆಲ್ಲೂ ಅನಾಯಕತೆ ಬೆಳೆದಿದೆ, **ಆದುದರಿಂದ** ಒಬ್ಬರ ಕಾಲ್ಮರೆಯು ಇನ್ನೊಬ್ಬರ ಕಾಲಲ್ಲಿ.

**ಸೂಚನೆ**:—ಇಲ್ಲಿ ಸಮುಚ್ಚಯ-ತಾರತಮ್ಯ-ಕಾರಣ ಇತ್ಯಾದಿ ಸಂಬಂಧವು ಮೇಲಿನ ಸಂಯುಕ್ತವಾಕ್ಯದ ಉಪವಾಕ್ಯಗಳಲ್ಲಿ ಕಾಣಬರುವುದು.

(೨) **ಅಭಿಪ್ರಾಯದ ದೃಷ್ಟಿಯಿಂದ** ವಾಕ್ಯಗಳಲ್ಲಿ ಕೆಳಗಣ ಐದು ಪ್ರಭೇದಗಳನ್ನು ಮಾಡಬಹುದು.

೧. ಅಂಗೀಕಾರಾರ್ಥಕ ವಾಕ್ಯ (Affirmative Sentence)
೨. ನಿಷೇಧಾರ್ಥಕ ವಾಕ್ಯ (Negative Sentence)
೩. ಪ್ರಶ್ನಾರ್ಥಕ ವಾಕ್ಯ (Interogative Sentence)
೪. ವಿಧ್ಯರ್ಥಕ ವಾಕ್ಯ (Imperative Sentence)
೫. ಭಾವಬೋಧಕ ವಾಕ್ಯ (Exclamatory Sentence)

**(i) ಅಂಗೀಕಾರಾರ್ಥಕ ವಾಕ್ಯಗಳು :—**

**ಆದ—ಆಗುವ—ಆಗಬಹುದಾ**ದುದನ್ನು ತಿಳಿಸುವ ವಾಕ್ಯಗಳಿಗೆ ಮೇಲಿನ ಹೆಸರು.

ಉ :—ಅವನು ನಿನಗೆ ಬೇಕಾದದ್ದನ್ನು ಕೊಟ್ಟನು.
ಅವನು ನಿನಗೆ ಬೇಕಾದದ್ದನ್ನು ಕೊಡುತ್ತಾನೆ.
ಅವನು ನಿಮಗೆ ಬೇಕಾದದ್ದನ್ನು ಕೊಡಬಹುದು.
ಆ ಕೆಲಸವು ನಿನ್ನಲ್ಲಿಯೇ ನಡೆದಿರಬೇಕು.
ನೀನಲ್ಲಿಗೆ ಹೋಗಿದ್ದರೆ ನಿನಗೆಲ್ಲ ತಿಳಿಯಬಹುದಾಗಿತ್ತು.

**(ii) ನಿಷೇಧಾರ್ಥಕ ವಾಕ್ಯಗಳು :—**

ಇವು 'ಇಲ್ಲ' ವೆಂದೂ 'ಅಲ್ಲ' ವೆಂದೂ ತಿಳಿಸುವವು.

ಉ :—ಅವನು ಏನನ್ನೂ ಅರಿಯನು.
ಸುಜನರು ಆಡಿದ್ದನ್ನು ಮಾಡದೆ ಬಿಡರು.
ನಾನಲ್ಲಿ ಸಾಯುವ ವರೆಗೆ ಹೋಗಲಾರೆ.
ದೇವರ ಉಪಕಾರವನ್ನೆಂದಿಗೂ ತೀರಿಸಲು ಬಾರದು.

**(iii) ಪ್ರಶ್ನಾರ್ಥಕ ವಾಕ್ಯಗಳು :—**

ಇವು ಪ್ರಶ್ನೆಯನ್ನು ತಿಳಿಸುತ್ತವೆ. ಇವು ಅಭಿಪ್ರಾಯವನ್ನು ಕೇಳುವ ವಾಕ್ಯಗಳು.

ಉ :—ಇದು ನಿನ್ನ ಆಸ್ತಿಯಲ್ಲವೆ ?
ನಮ್ಮ ನಾಯಿ ನಿಮ್ಮಲ್ಲಿಗೆ ಬರಲಿಲ್ಲವಷ್ಟೆ ?
ಇಂಥ ವಿಪರೀತ ಸಂಗತಿಯನ್ನು ಯಾರು ಹೇಳಿಯಾರು ?
ಆ ಹಾಳು ಹರಟೆಯನ್ನು ಎಷ್ಟು ಕೊಚ್ಚುವಿರಿ ?

**(iv) ವಿಧ್ಯರ್ಥಕ ವಾಕ್ಯಗಳು :—**

ಇವು **ಆಜ್ಞೆ, ಅನುಮತಿ, ಔತಣ, ಆಶೀರ್ವಾದ, ಪ್ರಾರ್ಥನೆ** ಮೊದಲಾದ ಎಷ್ಟೋ ಅರ್ಥಗಳಲ್ಲಿ ಉಪಯೋಗಿಸಲ್ಪಡುವವು. ಸಂದರ್ಭವನ್ನು ಕಂಡು ಅರ್ಥವನ್ನು ಗ್ರಹಿಸಬೇಕು.

ಉ :—ಕೂಡಲೆ ಹೊರಡಿಲ್ಲಿಂದ ! (ಆಜ್ಞೆ)
ಒಮ್ಮೆ ನಮ್ಮಲ್ಲಿಗೆ ಬಾರಯ್ಯ ! (ಔತಣ)
ಎಲ್ಲರೂ ಮನೆಗೆ ಹೋಗಬಹುದು ! (ಅನುಮತಿ)
ಸಿರಿ ಕನ್ನಡವು ಗೆಲ್ಲಲಿ ! (ಹಾರೈಕೆ)
ನಿನ್ನ ನಾಲಗೆಯು ಕಡಿದು ಬೀಳಲಿ ! (ಶಾಪ)
ಕಾಯಯ್ಯ ನಿನ್ನ ಕಂದಮ್ಮನನ್ನು ! (ಪ್ರಾರ್ಥನೆ)

**(v) ಭಾವಬೋಧಕ ವಾಕ್ಯಗಳು :—**

ಇವು ಮನಸ್ಸಿನ ಭಾವಗಳನ್ನು ಎದ್ದು ಕಾಣುವಂತೆ ತಿಳಿಸುವವು. ತೋರಿಕೆಗೆ ಇವು ಪ್ರಶ್ನಾರ್ಥಕ ಇಲ್ಲವೆ ನಿಷೇಧಕ ವಾಕ್ಯಗಳಂತೆ ಕಾಣುವವು. ಆದರೆ ಅರ್ಥದಿಂದ ಇವುಗಳ ನೈಜಸ್ವರೂಪವನ್ನರಿಯಬೇಕು.

ಉ :—ಅಯ್ಯೋ ! ನಮಗಿನ್ನೇನು ಗತಿ !
ಪಾಪ ! ಅವನು ಕೆಟ್ಟುಹೋದನಲ್ಲ !
ಅಂದಿನ ವೈಭವವನ್ನು ಎನಿತು ಬಣ್ಣಿಸಲಿ !
ನಡೆ ! ಅದನ್ನಾರು ಕೇಳುವವರು !
ಅಬ್ಬ ! ಎಂಥ ದೊಡ್ಡ ಹಾವಪ್ಪ ಅದು !

**ಸೂಚನೆ** :— ಅಂಗೀಕಾರ-ನಿಷೇಧಾರ್ಥಕಗಳಿಗೆ ಕೂಡಿ **ನಿಶ್ಚಯಾರ್ಥಕ**ವೆಂಬ ಹೆಸರು.

**೨. ವಾಕ್ಯರೂಪ-ಪಲ್ಲಟ :—**

ವಾಕ್ಯದ ಅಭಿಪ್ರಾಯವನ್ನು ಹಾಗೆಯೆ ಇಟ್ಟು ಅದರ ರೂಪವನ್ನು ಪರಿವರ್ತಿಸುವುದಕ್ಕೆ **ವಾಕ್ಯ-ಪಲ್ಲಟ**ವೆನ್ನುವರು. ಈ ಪರಿವರ್ತನ ಕೌಶಲದಿಂದ ನಮಗೆ ವಾಕ್ಯರಚನೆಯನ್ನು ಇಷ್ಟವಾದ ರೀತಿಯಲ್ಲಿ ಜೋಡಿಸಲು ಬರುವುದು. ಮತ್ತು ವಾಕ್ಯಗಳ ಮೇಲಿನ ನಮ್ಮ ಪ್ರಭುತ್ವವು ಬೆಳೆಯುವುದು.

ಮೇಲ್ಕಾಣಿಸಿದ ವಾಕ್ಯಗಳ **ಒಂದನೆಯ ವರ್ಗದ** ಆಂತರಿಕ ಭೇದಗಳಲ್ಲಿಯೂ—**ಎರಡನೆಯ ವರ್ಗದ** ಆಂತರಿಕ ಭೇದಗಳಲ್ಲಿಯೂ ಈ ಪರಿವರ್ತನವು—ಪಲ್ಲಟವು ಸಾಧ್ಯ. ಅದರ ರೀತಿಯನ್ನು ಕೆಳಗೆ ಕಾಣಬಹುದು.

**(ಅ) ೧ನೆಯ ವರ್ಗ :—**

(೧) **ಸಾಮಾನ್ಯ** ವಾಕ್ಯವನ್ನು **ಮಿಶ್ರ** ವಾಕ್ಯಕ್ಕೆ ಪಲ್ಲಟಿಸುವುದು ಮೂರು ವಿಧದಿಂದ.

(i) ಸಾಮಾನ್ಯ ವಾಕ್ಯದಲ್ಲಿಯ ಒಂದು **ನಾಮವನ್ನು ನಾಮವಾಕ್ಯವನ್ನಾಗಿ** ಮಾಡುವುದು.

ಉ:—೧. ನಿನಗೆ ನನ್ನ ಗೆಲುವಿನ ಕಾರಣವು ಗೊತ್ತಿಲ್ಲ.
ನಿನಗೆ ನಾನು ಹೇಗೆ ಗೆದ್ದೆನು ಎಂಬುದು ಗೊತ್ತಿಲ್ಲ.
೨. ನಮ್ಮ ಹಾನಿಯ ಪ್ರಮಾಣವನ್ನು ಬಲ್ಲವರಾರು ?
ನಮಗೆ ಹಾನಿಯೆಷ್ಟಾಯಿತೆಂಬುದನ್ನು ಬಲ್ಲವರಾರು ?
೩. ನೀನಿಲ್ಲಿ ಬರುವ ದಿನವನ್ನು ತಿಳಿಸು.
ನೀನಿಲ್ಲಿ ಎಂದು ಬರುವೆಯೆಂಬುದನ್ನು ತಿಳಿಸು.
೪. ಮಳೆ ಬೀಳುವ ಬಗೆಯನ್ನವರು ಅರಿಯರು.
ಮಳೆಯು ಹೇಗೆ ಬೀಳುವುದೆಂಬುವುದನ್ನು ಅವರು ಅರಿಯರು.

(ii) ಸಾಮಾನ್ಯ ವಾಕ್ಯದಲ್ಲಿಯ **ವಿಶೇಷಣವನ್ನು ನಾಮವಿಶೇಷಣ ವಾಕ್ಯಕ್ಕೆ** ಪರಿವರ್ತಿಸುವುದು.

ಉ:—೧. ಓದು ಬರೆಹ ಬಾರದಿದ್ದ ಬಡವರನ್ನು ಕೇಳುವವರಾರು ?
ಯಾರಿಗೆ ಓದು ಬರಹ ಬರುವುದಿಲ್ಲವೋ ಅಂಥ ಬಡವರನ್ನು ಕೇಳುವವರಾರು ?
೨. ಆಡಿದಂತೆ ಮಾಡುವವನು ಉತ್ತಮನು.
ಯಾವನು ಆಡಿದಂತೆ ಮಾಡುವನೋ ಅವನು ಉತ್ತಮನು.

(iii) ಸಾಮಾನ್ಯವಾಕ್ಯದಲ್ಲಿಯ **ಕ್ರಿಯಾವಿಶೇಷಣಾವ್ಯಯವನ್ನು** (Adverb) **ಕ್ರಿಯಾವಿಶೇಷಣವಾಕ್ಯವನ್ನಾಗಿ** ಬದಲಿಸುವುದು.

ಉ:—೧. ವಿದ್ಯೆಯು ನಿನ್ನನ್ನು ಎಲ್ಲೆಲ್ಲಿಯೂ ಸಲಹುವುದು.
ವಿದ್ಯೆಯು ನೀನು ಎಲ್ಲಿ ಹೋಗುವೆಯೋ ಅಲ್ಲಿ ನಿನ್ನನ್ನು ಸಲಹುವುದು.
೨. ಅಭ್ಯಾಸವನ್ನು ಸರಿಯಾಗಿ ಮಾಡಿರುವೆಯಲ್ಲವೆ ?
ಅಭ್ಯಾಸವನ್ನು ಹೇಗೆ ಮಾಡಬೇಕೋ ಹಾಗೆ ಮಾಡಿರುವೆಯಲ್ಲವೇ ?
೩. ಗಾಳಿ ಬಂದಾಗ ತೂರಿಕೊಳ್ಳಬೇಕು.
ಯಾವಾಗ ಗಾಳಿ ಬರುವುದೋ ಆವಾಗ ತೂರಿಕೊಳ್ಳಬೇಕು.

(೨) **ಮಿಶ್ರವಾಕ್ಯವನ್ನು ಸಾಮಾನ್ಯ** ವಾಕ್ಯಕ್ಕೆ ಪಲ್ಲಟಿಸುವುದು.

ಮೇಲೆ ಹೇಳಿದ್ದಕ್ಕೆ ವಿರುದ್ಧವಾಗಿ ಬೇರೆ ಬೇರೆ ತರಹದ ಅಧೀನ ವಾಕ್ಯಗಳ ಸ್ಥಳದಲ್ಲಿ ನಾಮ-ಕೃದಂತ-ಕ್ರಿಯಾವಿಶೇಷಣಗಳನ್ನಿಟ್ಟು ಸಾಮಾನ್ಯ ವಾಕ್ಯಗಳನ್ನು ಮಾಡಬಹುದು.

(ಅ) **ನಾಮಸಮುಚ್ಚಯವನ್ನು** ಪಯೋಗಿಸಿ.

ಉ:—೧. ಧನವನ್ನು ಹೇಗೆ ಗಳಿಸಬೇಕೆಂಬುದನ್ನು ಬಲ್ಲೆಯಾ ?
ಧನವನ್ನು ಗಳಿಸುವ ರೀತಿಯನ್ನು ಬಲ್ಲೆಯಾ ?

೨. ಅವನು ಏಕೆ ಸೋತನೆಂಬುದು ತಿಳಿಯಿತೇ ?
ಅವನು ಸೋತ ಕಾರಣವು ತಿಳಿಯಿತೇ ?

(ಆ) **ವಿಶೇಷಣ-ಸಮುಚ್ಚಯು**ವನ್ನು ಪಯೋಗಿಸಿ.

ಉ :—೧. ಬಲ್ಲಿದರಾಗಬೇಕೆಂಬ ಬಯಕೆಯು ಅದಾರಿಗಿಲ್ಲ ?
ಬಲ್ಲಿದರಾಗುವ ಬಯಕೆಯು ಅದಾರಿಗಿಲ್ಲ ?

೨. ನಾವು ಯಾವುದನ್ನು ಮಾಡಬೇಕೋ ಆ ಕೆಲಸವನ್ನು ನಮಗೆ ಹೇಳು ವವರಾರು ? ನಾವು ಮಾಡಬೇಕಾದ ಕೆಲಸವನ್ನು ನಮಗೆ ಹೇಳು ವವರಾರು ?

(ಇ) **ಕ್ರಿಯಾವಿಶೇಷಣ ಸಮುಚ್ಚಯು**ವನ್ನು ಪಯೋಗಿಸಿ.

ಉ :—೧. ನಿನಗೆ ಮನ್ನಣೆ ಸಿಕ್ಕಿತೆಂದು ಸೊಕ್ಕಿಗೆ ಬರಬೇಡ.
ನಿನಗೆ ಮನ್ನಣೆ ಸಿಕ್ಕಿದ್ದಕ್ಕಾಗಿ ಸೊಕ್ಕಿಗೆ ಬರಬೇಡ.

೨. ಆ ವಾರ್ತೆಯನ್ನು ಕೇಳಿದನೋ ಇಲ್ಲವೋ, ಅವನಿಗೆ ತುಂಬಾ ಗಾಬರಿ ಯಾಯಿತು.
ಆ ವಾರ್ತೆಯನ್ನು ಕೇಳಿದ ಕೂಡಲೇ ಅವನಿಗೆ ತುಂಬಾ ಗಾಬರಿ ಯಾಯಿತು.

(೩) **ಸಾಮಾನ್ಯ**ವಾಕ್ಯವನ್ನು **ಸಂಯುಕ್ತ**ವಾಕ್ಯಕ್ಕೆ ಪಲ್ಲಟಿಸುವುದು.

ಸಾಮಾನ್ಯವಾಕ್ಯಗಳಲ್ಲಿಯ ಒಂದು ಶಬ್ದ ಇಲ್ಲವೆ ಶಬ್ದ ಸಮುದಾಯ ವನ್ನು ಸ್ವತಂತ್ರವಾಕ್ಯವಾಗಿ ಮಾಡಿ, ಅದನ್ನು ಸರಿಯಾದ ಸಂಬಂಧ ಸೂಚಕ ಶಬ್ದಗಳಿಂದ ಮೂಲ ವಾಕ್ಯಕ್ಕೆ ಕೂಡಿಸುವುದು.

ಉ :—೧. ಆ ಬಡಪಾಯಿಗಳು ತಮ್ಮ ಮುಗುಡವನ್ನು ತೋಡಿಕೊಳ್ಳುತ್ತಿರಲು ಅಧಿಕಾರಿಗಳು ತಮ್ಮ ತಮ್ಮಲ್ಲಿ ಕೆಲೆಯುತ್ತಿದ್ದರು.
ಆ ಬಡಪಾಯಿಗಳು ತಮ್ಮ ಮುಗುಡವನ್ನು ತೋಡಿಕೊಳ್ಳುತ್ತಿದ್ದರು ; ಆಗ ಅಧಿಕಾರಿಗಳು ತಮ್ಮ ತಮ್ಮಲ್ಲಿ ಕೆಲೆಯುತ್ತಿದ್ದರು.

೨. ನಮ್ಮ ತಪ್ಪಿಗಾಗಿ ನಮಗೆ ಶಿಕ್ಷೆ ಬೇಡವೇ ?
ನಾವು ತಪ್ಪು ಮಾಡಿರುವೆವು. ಅದಕ್ಕಾಗಿ ನಮಗೆ ಶಿಕ್ಷೆ ಬೇಡವೇ ?

೩. ಆಗವನು ಏನು ಕಾರಣದಿಂದಲೋ ರೇಗಿದನು.
ಆಗವನು ರೇಗಿದನು ; ಆದರೆ ಅದರ ಕಾರಣವು ತಿಳಿಯದು.

(೪) **ಸಂಯುಕ್ತ**ವಾಕ್ಯವನ್ನು **ಸಾಮಾನ್ಯ** ವಾಕ್ಯಕ್ಕೆ ಪಲ್ಲಟಿಸುವುದು.

ಒಂದು ಸ್ವತಂತ್ರವಾಕ್ಯವನ್ನು ಕಾಯ್ದು ಬೇರೆ ಎಲ್ಲ ವಾಕ್ಯಗಳನ್ನೂ ಶಬ್ದಗಳನ್ನಾಗಿಯಾಗಲಿ ಶಬ್ದಸಮುಚ್ಚಯಗಳನ್ನಾಗಿಯಾಗಲಿ ಮಾಡಬೇಕು.

ಉ :—೧. ಚಂದ್ರೋದಯವಾಯಿತು, ಆಗ ನಾವು ಆ ನದಿಯ ದಂಡೆಯ ಮೇಲೆ ಅಲೆದಾಡಲು ಹೋದೆವು.

ಚಂದ್ರೋದಯವಾದ ಕೂಡಲೇ ನಾವು ನದಿಯ ದಂಡೆಯ ಮೇಲೆ ಅಲೆದಾಡಲು ಹೋದೆವು.

೨. ನಾನು ಹೇಳಿದ್ದನ್ನು ಕೇಳು ; ಇಲ್ಲವಾದರೆ ಹಾಳಾಗುವೆ.

ನಾನು ಹೇಳಿದ್ದನ್ನು ಕೇಳದಿದ್ದರೆ ಹಾಳಾಗುವೆ.

(ಇ) **ಮಿಶ್ರ**ವಾಕ್ಯವನ್ನು **ಸಂಯುಕ್ತ** ವಾಕ್ಯಕ್ಕೆ ಪಲ್ಲಟಿಸುವುದು.

ಮಿಶ್ರವಾಕ್ಯದಲ್ಲಿಯ ಅಧೀನವಾಕ್ಯವನ್ನು ಸ್ವತಂತ್ರವಾಕ್ಯವನ್ನಾಗಿ ಮಾಡಬೇಕು. ಮುಂದೆ ಸರಿಯಾದ ಸಂಬಂಧ ಸೂಚಕಗಳನ್ನಿಡಬೇಕು.

ಉ :—೧. ನಮ್ಮ ನಾಡವರು ಇನ್ನೂ ಕರ್ತವ್ಯದಕ್ಷರಾಗಿಲ್ಲವೆಂಬುದನ್ನು ನೀವು ಬಲ್ಲಿರಿ.

ನಮ್ಮ ನಾಡವರು ಇನ್ನೂ ಕರ್ತವ್ಯದಕ್ಷರಾಗಿಲ್ಲ; ಇದನ್ನು ನೀವು ಬಲ್ಲಿರಿ.

೨. ನೀನದನ್ನು ಓದಬೇಡೆಂದು ಹೇಳಿದರೂ ಏಕೆ ಓದಿದೆ ?

ನೀನದನ್ನು ಓದಬೇಡೆಂದು ಹೇಳಿದ್ದೆ ; ಆದರೂ ಏಕೆ ಓದಿದೆ ?

(ಈ) **ಸಂಯುಕ್ತ** ವಾಕ್ಯವನ್ನು **ಮಿಶ್ರ**ವಾಕ್ಯಕ್ಕೆ ಪಲ್ಲಟಿಸುವುದು.

ಒಂದು ಸ್ವತಂತ್ರ ವಾಕ್ಯಕ್ಕೆ ಉಳಿದ ವಾಕ್ಯಗಳನ್ನು ಅಧೀನಗೊಳಿಸಿ ಯೋಗ್ಯ ಸಂಬಂಧ ಸೂಚಕಗಳನ್ನು ಸೇರಿಸಬೇಕು.

ಉ :—೧. ನಾನು ಧನವನ್ನು ವಿಪುಲವಾಗಿ ಗಳಿಸಿದೆ, ಆದರೆ ಸಂತಸವು ಅಷ್ಟೇನೂ ದೊರೆಯಲಿಲ್ಲ.

ನಾನು ಧನವನ್ನು ವಿಪುಲವಾಗಿ ಗಳಿಸಿದರೂ ನನಗೆ ಸಂತಸವು ಅಷ್ಟೇನೂ ದೊರೆಯಲಿಲ್ಲ.

೨. ದೇವರು ನಮ್ಮೆಲ್ಲರ ಒಡೆಯ ; ಆದುದರಿಂದ ನಾವವನನ್ನು ಸದೈವ ಭಜಿಸಬೇಕು.

ದೇವರು ನಮ್ಮೆಲ್ಲರ ಒಡೆಯನಾದುದರಿಂದ ನಾವವನನ್ನು ಸದೈವ ಭಜಿಸಬೇಕು.

(ಆ) **೨ನೆಯ ವರ್ಗ :—**

(೧) **ಅಂಗೀಕಾರಾರ್ಥಕ-ನಿಷೇಧಾರ್ಥಕ** ವಾಕ್ಯಗಳ ಪಲ್ಲಟ.

ಉ :—೧. ಅಂ—ನಾನು ನನ್ನ ಮನಬಂದಂತೆ ನಡೆಯಲು ಸಮರ್ಥನು.

ನಿ :—ನಾನು ನನ್ನ ಮನಬಂದಂತೆ ನಡೆಯಲು ಸಮರ್ಥನಿಲ್ಲವೆಂದಲ್ಲ.

೨. ನಿ :—ದುಃಖವಿಲ್ಲದೆ ಸುಖವಿಲ್ಲ.

ಅಂ :—ದುಃಖ ಸಹಿಸಿದರೆ ಸುಖವುಂಟು.

## (೨) ನಿಶ್ಚಯಾರ್ಥಕ-ಪ್ರಶ್ನಾರ್ಥಕ ವಾಕ್ಯಗಳ ಪಲ್ಲಟ.

ಉ :—೧. ನಿಶ್ಚ :—ದುಃಖದಲ್ಲಿ ಎಲ್ಲರೂ ಅಳುವರು.
ಪ್ರಶ್ನ :—ದುಃಖದಲ್ಲಿ ಅದಾರು ಅಳುವುದಿಲ್ಲ ?
೨. ಪ್ರಶ್ನ :—ಈ ಮಾತು ನಿನ್ನ ಕೈಯಲ್ಲಿಲ್ಲವೇ ?
ನಿಶ್ಚ :—ಈ ಮಾತು ನಿನ್ನ ಕೈಯಲ್ಲುಂಟು.
೩. ನಿಶ್ಚ :—ಜಾತಿವೀರರು ಸಾವಿಗಂಜುವುದಿಲ್ಲ.
ಪ್ರಶ್ನ :—ಜಾತಿವೀರರು ಸಾವಿಗಂಜುವರೇ ?
೪. ಪ್ರಶ್ನ :—ಮುಕ್ತಿಗೆ ಭಕ್ತಿಯೇ ಸಾಧನವಲ್ಲವೇ ?
ನಿಶ್ಚ :—ಮುಕ್ತಿಗೆ ಭಕ್ತಿಯೇ ಸಾಧನವು.

## (೩) ನಿಶ್ಚಯಾರ್ಥಕ-ವಿಧ್ಯರ್ಥಕ ವಾಕ್ಯಗಳ ಪಲ್ಲಟ.

ಉ :—೧. ನಿ :—ನೀನು ಅಭ್ಯಾಸವನ್ನು ಮಾಡಿದರೆ ಪಾಸಾಗುವೆ.
ವಿ :—ಅಭ್ಯಾಸವನ್ನು ಮಾಡು ; ಅಂದರೆ ನೀನು ಪಾಸಾಗುವೆ.
೨. ವಿ :—ಸರಿಯಾಗಿ ಮಾತನಾಡು ; ಇಲ್ಲವಾದರೆ ಹೊರಗೆ ಹೋಗಬೇಕಾದೀತು.
ನಿ :—ನೀನು ಸರಿಯಾಗಿ ಮಾತನಾಡದಿದ್ದರೆ, ಹೊರಗೆ ಹೋಗಬೇಕಾದೀತು.
೩. ನಿ :—ಅವನ ಕಲ್ಯಾಣವಾಗಲೆಂಬುದು ನನ್ನ ಹಾರೈಕೆ.
ವಿ :—ಅವನ ಕಲ್ಯಾಣವಾಗಲಿ.
೪. ವಿ :—ನಮ್ಮ ಪಾತಕಗಳೆಲ್ಲ ಅಳಿಯಲಿ.
ನಿ :—ನಮ್ಮ ಪಾತಕಗಳೆಲ್ಲ ಅಳಿಯಲೆಂದು ನನ್ನ ಪ್ರಾರ್ಥನೆ.

## (೪) ನಿಶ್ಚಯಾರ್ಥಕ-ಭಾವಬೋಧಕ ವಾಕ್ಯಗಳ ಪಲ್ಲಟ.

ಉ :—೧. ನಿ :—ಅವನು ಬಲು ಮರುಳನು.
ಭಾ :—ಎಂಥ ಮರುಳನವನು !
೨. ಭಾ :—ಎಲಾ ಇಂಥ ಜಾಣನು ಎಲ್ಲಿಯಾದರೂ ಉಂಟೆ ?
ನಿ :—ಇಂಥ ಜಾಣನು ಎಲ್ಲಿಯೂ ಇಲ್ಲ.
೩. ನಿ :—ಇವನಿಗೆ ಅಪಾರವಾದ ಹಾನಿಯಾಯಿತು.
ಭಾ :—ಎಂಥ ಹಾನಿಯಾಯಿತು ಇವನಿಗೆ !
೪. ಭಾ :—ಛಿ ! ಇಂಥ ಹೇಡಿಗಳು ಕನ್ನಡ ಕುಲದಲ್ಲಿ ಹುಟ್ಟಬಹುದೆ ?
ನಿ :—ಇಂಥ ಹೇಡಿಗಳು ಕನ್ನಡ ಕುಲದಲ್ಲಿ ಹುಟ್ಟಿದುದು ಅಚ್ಚರಿಯ ಸಂಗತಿ-ಅಸಾಧ್ಯವಾದ ಮಾತು.

(೫) **ಪ್ರಶ್ನಾರ್ಥಕ-ಭಾವಬೋಧಕ** ವಾಕ್ಯಗಳ ಪಲ್ಲಟ.

ಉ :—೧. ಪ್ರ :—ಇವನು ಬಲು ಚಿಕ್ಕ ಬಾಲಕನಲ್ಲವೇ ?

ಭಾ :—ಎಂಥ ಚಿಕ್ಕ ಬಾಲಕನಿವನು !

೨. ಭಾ :—ಮಹಾತ್ಮರು ಎಂಥ ಹಿರಿಯ ಸತ್ಪುರುಷರು !

ಪ್ರ :—ಮಹಾತ್ಮರು ಬಲು ಹಿರಿಯ ಸತ್ಪುರುಷರಲ್ಲವೇ ?

---

ಅಭ್ಯಾಸ ೧.

(ಅ) ಕೆಳಗಣ **ಸಾಮಾನ್ಯ** ವಾಕ್ಯಗಳನ್ನು **ಮಿಶ್ರ**ವಾಕ್ಯಗಳನ್ನಾಗಿ ಪರಿವರ್ತಿಸಿರಿ.

೧. ಶ್ರೀರಾಮನು ಸೇರಿದ ಕಾಡಾವುದು ? ೨. ಬೆಳದಿಂಗಳಲ್ಲಿಯ ಇರುಳಿನ ಶೋಭೆಯನ್ನು ಬಣ್ಣಿಸಬಹುದೇ ? ೩. ಮುಂದೆ ಆಗುವುದನ್ನು ಇಂದು ತಿಳಿದವನೇ ಜಾಣ. ೪. ಧನವನ್ನು ಮಿತವಾಗಿ ವಿನಿಯೋಗಿಸುವ ರೀತಿಯನ್ನು ಅರಿತುಕೊಳ್ಳಬೇಕು. ೫. ಅವನು ಮನಸ್ಸಿನಲ್ಲಿ ಮಾಡಿದ್ದನ್ನೆಯೆ ಬಾಯಿಂದ ಆಡಿಬಿಟ್ಟನು.

(ಆ) ಕೆಳಗಣ **ಮಿಶ್ರ** ವಾಕ್ಯಗಳನ್ನು **ಸಾಮಾನ್ಯ** ವಾಕ್ಯಗಳಿಗೆ ಪಲ್ಲಟಿಸಿರಿ.

೧. ಇನ್ನಾವ ಕೆಲಸವನ್ನು ಮಾಡಬೇಕೆಂಬುದನ್ನು ನಮ್ಮ ನಿರ್ಗತಿಕ ತರುಣರು ತಿಳಿಯುವವರಾಗಿರುವರು. ೨. ತನ್ನ ನಾಡನ್ನು ತೊರೆಯಬೇಕೆಂಬ ಕಲ್ಪನೆಯು ಅದಾವ ಸುಪುತ್ರನಲ್ಲಿ ಮೂಡಬಹುದು ? ೩. ಅನ್ನದಾನಕ್ಕಿಂತ ಮಿಗಿಲಾದ ದಾನವಿಲ್ಲವೆಂಬುದನ್ನು ನಮ್ಮವರು ಪೂರ್ತಿಯಾಗಿ ಅರಿತಿದ್ದರು. ೪. ನಮ್ಮ ತಾಯ್ನಾಡು ಯಾವ ಹೀನಸ್ಥಿತಿಯಲ್ಲಿರುವುದೋ ಅದನ್ನು ಕಂಡು ಮರುಗದವರಾರು ? ೫. ನಾಡಿಗೆ ಕೇಡು ಬಯಸಿ ಧನಿಕರಾಗುವ ಆಶೆ ನಮ್ಮ ತರುಣರಲ್ಲೆಂದೂ ಇರಲರಿಯದು.

(ಇ) ಕೆಳಗಣ **ಸಾಮಾನ್ಯ** ವಾಕ್ಯಗಳನ್ನು **ಸಂಯುಕ್ತ** ವಾಕ್ಯಗಳನ್ನಾಗಿ ಪರಿವರ್ತಿಸಿರಿ.

೧. ನಾನು ಊಟವನ್ನು ತೀರಿಸಿಕೊಂಡು ಮಲಗಿದೆನು. ೨. ಚಂದ್ರನು ಉದಯಿಸಲು ಎಲ್ಲೆಲ್ಲಿಯೂ ಬೆಳದಿಂಗಳು ಬಿದ್ದಿತು. ೩. ಆ ಎತ್ತು ಕೆಸರಿನಲ್ಲಿ ಒದ್ದಾಡುತ್ತಿರುವಾಗ, ನನ್ನ ಕರುಳು ಕರಗಿ ನೀರಾಯಿತು. ೪. ನಿಮ್ಮ ಸೂಚನೆಯ ಮೇರೆಗೆ ನಾನು ನಡೆಯಲು ಸಿದ್ಧನಿರುವೆ. ೫. ನಮ್ಮ ಪೂರ್ವ ವೈಭವವನ್ನು ನೆನೆದು ನಾವು ನವಚೈತನ್ಯವನ್ನು ಪಡೆಯಬೇಕು.

(ಈ) ಕೆಳಗಣ **ಸಂಯುಕ್ತ** ವಾಕ್ಯಗಳನ್ನು **ಸಾಮಾನ್ಯ** ವಾಕ್ಯಗಳನ್ನಾಗಿ ಪರಿವರ್ತಿಸಿರಿ.

೧. ಆ ಹುಲಿಯು ಒಮ್ಮೆಲೆ ಜಿಗಿಯಿತು; ಆದುದರಿಂದ ಅದಕ್ಕೆ ಆ ಗುಂಡು ತಾಗಲಿಲ್ಲ. ೨. ಎದೆಗುಂದಬೇಡ; ಅಂದರೆ ಎಲ್ಲವೂ ಸರಿಹೋಗುವುದು. ೩. ಮುದುಕರನ್ನು ಆಶ್ರಯಿಸದಿರಲು ಎಷ್ಟೋ ಹೇಳಿದೆನು; ಆದರೆ ಅವರದನ್ನು ಕೇಳಲೇ ಇಲ್ಲ. ೪. ನೀನು ಮಿತಿಯಿಂದ ವೆಚ್ಚ ಮಾಡು; ಇಲ್ಲದಿದ್ದರೆ ಮುಂದೆ ಬಳಲಬೇಕಾದೀತು. ೫. ಅವನ ವೈಭವವೆಲ್ಲ ಹಾಳಾಯಿತು; ಆದರೂ ಅವನ ನತ್ಯವು ಅಳಿಯಲಿಲ್ಲ.

(ಉ) ಕೆಳಗಣ **ಮಿಶ್ರ** ವಾಕ್ಯಗಳನ್ನು **ಸಂಯುಕ್ತ** ವಾಕ್ಯಗಳಿಗೆ ಪರಿವರ್ತಿಸಿರಿ.

೧. ಕನ್ನಡಿಗರು ಒಳ್ಳೆಯ ಕರ್ತೃತ್ವಶಾಲಿಗಳಿದ್ದರೆಂಬುದನ್ನು ಆರು ಅರಿಯರು? ೨. ಯಾರಿಗೂ ಓದಲು ಬರಬಾರದಷ್ಟು ಚೆನ್ನಾಗಿ ಅವನು ಬರೆಯಲು ಕಲಿತಿರುವನು. ೩. ನೀನು ಕಾಳಿದಾಸನಿಗೆ ಸಮಾನನೆಂದು ಯಾರು ತಿಳಿಯುವರು? ೪. ನಾವು ಯಾವಾಗ ಜಾರುವೆವೋ ಆಗ ನಮ್ಮನ್ನು ಎಬ್ಬಿಸುವವರಾರು? ೫. ನಿನಗೆ ಯಾವ ಮಾತು ಸಹ್ಯವೋ ಅದು ನನಗೆ ಅಸಹ್ಯವು.

(ಊ) ಕೆಳಗಣ **ಸಂಯುಕ್ತ** ವಾಕ್ಯಗಳನ್ನು **ಮಿಶ್ರ** ವಾಕ್ಯಗಳನ್ನಾಗಿ ಮಾರ್ಪಡಿಸಿರಿ.

೧. ಅವನೇನೂ ಬಹಳ ಬುದ್ಧಿವಂತನಲ್ಲ; ಆದರೆ ಅವನು ಶೀಲವಂತನು. ೨. ಪರಮಾತ್ಮನು ದಯಾಸಾಗರನು; ಇದನ್ನು ಮನಗಂಡವರು ವಿರಲ. ೩. ನಾನು ಮನಸ್ಸಿನಲ್ಲಿ ಮಂಡಿಗೆಯನ್ನು ಮಾಡಿದ್ದೆ; ಅದರಲ್ಲೊಂದೂ ಕೈಗೂಡಲಿಲ್ಲ. ೪. ನಮ್ಮ ತಾಯಿಯು ಪ್ರಿಯಳು; ಹಾಗೆಯೆ ತಾಯ್ನುಡಿಯೂ ಪ್ರಿಯವು. ೫. ನಮಗೆ ಸ್ವಾತಂತ್ರ್ಯವು ದೊರೆಯಿತು; ಆದುದರಿಂದ ನಮ್ಮ ಬಯಕೆಗಳೆಲ್ಲ ಫಲಿಸಿದವು.

## ಅಭ್ಯಾಸ ೨.

(ಅ) ಕೆಳಗಿನ **ಅಂಗೀಕಾರಾರ್ಥಕ-ನಿಷೇಧಾರ್ಥಕ** ವಾಕ್ಯಗಳನ್ನು ಅರ್ಥ ಕೆಡದಂತೆ ಪರಸ್ಪರ ಪರಿವರ್ತಿಸಿರಿ.

೧. ಬಸವಣ್ಣನವರು ಭಕ್ತಿಯ ಭಾಂಡಾರಿಗಳು. ೨. ಅವರು ಸರಿಯಾಗಿ ಸಂಸಾರಮಾಡಲಿಲ್ಲವೆಂದಲ್ಲ. ೩. ಅವರ ಅಂತರಂಗದ ಕೋಮಲತೆಯೂ ಆಶ್ಚರ್ಯಕರವಾಗಿದೆ. ೪. ಅವರಲ್ಲಿ ದಾತೃತ್ವಬುದ್ಧಿಯೂ ಕಡಮೆಯಿತ್ತೆಂದಲ್ಲ. ೫. ತನ್ನ ಉದ್ಧಾರವನ್ನು ಮಾಡಿಕೊಳ್ಳದೆ ಅನ್ಯರನ್ನುದ್ಧರಿಸಲು ಯಾರಿಗೂ ಬರುವಂತಿಲ್ಲ.

(ಆ) ಕೆಳಗಣ **ನಿಶ್ಚಯಾರ್ಥಕ-ಪ್ರಶ್ನಾರ್ಥಕ** ವಾಕ್ಯಗಳನ್ನು ಅರ್ಥಕ್ಕೆ ಬಾಧೆ ಬರದಂತೆ ಪರಸ್ಪರ ಪಲ್ಲಟಿಸಿರಿ.

೧. ಬೇವು ಬೆಲ್ಲದೊಳಿದ್ದರೆ ಫಲವಿಲ್ಲ. ೨. ಹಾವಿಗೆ ಹಾಲೆರೆದರೇನು ಪ್ರಯೋಜನ? ೩. ನಾವು ಇಂಥ ಕಾರ್ಯವನ್ನು ಮಾಡಲು ಅಯೋಗ್ಯರಲ್ಲ. ೪. ಜಾತಿ

ಹೀನರ ಮನೆಯು ಜ್ಯೋತಿ ತಾ ಹೀನವೇ ? ೫. ಕಳ್ಳನ ದಾರಿ ಕಳ್ಳನಿಗಲ್ಲದೆ ಇನ್ನಾರಿಗೂ ತಿಳಿಯದು.

(ಇ) ಕೆಳಗಣ **ನಿಶ್ಚಯಾರ್ಥಕ-ಭಾವಬೋಧಕ** ವಾಕ್ಯಗಳನ್ನು ಪರಸ್ಪರ ಪರಿವರ್ತಿಸಿರಿ.

೧. ಪರತನುವು ತೀರ ಅಪರೂಪವಾದುದು. ೨. ಎಲಾ ! ಎಂಥ ಹುಚ್ಚು ಹಿಡಿಯಿತಿವನಿಗೆ ! ೩. ಅವನ ಯಶಸ್ಸನ್ನು ಕಂಡು ನನಗೆ ತುಂಬ ಸಂತೋಷ. ೪. ಗಾಳಿಯು ಎಷ್ಟು ಭರದಿಂದ ಬೀಸುವುದು ! ೫. ಎಷ್ಟು ರುಚಿಕರವಾದ ಹಣ್ಣದು !

(ಈ) ಮುಂದಿನ **ನಿಶ್ಚಯಾರ್ಥಕ-ವಿಧ್ಯರ್ಥಕ** ವಾಕ್ಯಗಳನ್ನು ಪರಸ್ಪರ ಪರಿವರ್ತಿಸಿರಿ.

೧. ವಿವೇಕದ ಒಳದನಿಯನ್ನು ಕೇಳಿದರೆ ನಮ್ಮ ಕಲ್ಯಾಣವಾಗುವುದು. ೨. ಪರಮಾತ್ಮನು ನಮ್ಮ ಬಯಕೆಯನ್ನು ಪೂರೈಸಲಿ ! ೩. ಕಾಡಿನಲ್ಲಿ ಬರಿಗಾಲಿನಿಂದ ನಡೆದರೆ ನಿಮಗೆ ಮುಳ್ಳು ಮುರಿಯದಿರವೇ ! ೪. ಮನಸ್ಸನ್ನು ಬಿಗಿಹಿಡಿಯಲು ಕಲಿ, ನೀನು ಬಲವಂತನಾಗುವೆ. ೫. ನನ್ನ ಗೆಳೆಯನ ಏಳ್ಗೆಯಾಗಲೆಂದು ನಾನು ಹಾರೈಸುವೆ.

(ಉ) ಮುಂದಿನ **ಪ್ರಶ್ನಾರ್ಥಕ-ಭಾವಬೋಧಕ** ವಾಕ್ಯಗಳನ್ನು ಪರಸ್ಪರ ಪರಿವರ್ತಿಸಿರಿ.

೧. ತಾವರೆಯು ಬಹು ಸುಂದರವಾದುದಲ್ಲವೇ ? ೨. ಎಂಥ ತಿಳಿಗೇಡಿ ನಾನು ! ೩. ಇದು ನಿಮಗೆ ಬಹಳ ಪ್ರಿಯವಾದುದಲ್ಲವೇ ? ೪. ಎಂಥ ಬಲಶಾಲಿ ನಮ್ಮ ಬಲಭೀಮನು ! ೫. ವಿಕ್ರಮನು ಮಹಾಪರಾಕ್ರಮಿಯಲ್ಲವೇ ?

## ೫. ವಾಕ್ಯಸಂಯೋಗ

ಹಲವು ಬಿಡಿಬಿಡಿಯಾದ ವಾಕ್ಯಗಳನ್ನು ಒಡೆದು ಒಂದು ವಾಕ್ಯವನ್ನು ಮಾಡುವುದಕ್ಕೆ **ವಾಕ್ಯಸಂಯೋಗ**ವೆನ್ನುವರು. ಇದರಿಂದ ಸಂಕ್ಷೇಪ ಕಥನಕ್ಕೆ—ಸ್ವಲ್ಪದರಲ್ಲಿ ಹೇಳುವುದಕ್ಕೆ—ಎಷ್ಟೋ ಅನುಕೂಲವಾಗುವುದು. ಶೈಲಿಯಲ್ಲಿ ವೈವಿಧ್ಯವುಂಟಾಗಿ ಅದರ ಸೊಬಗು ಹೆಚ್ಚಾಗುವುದು.

ಇದನ್ನು ಕೆಳಗಿನ ಮೂರು ವಿಧದಿಂದ ಮಾಡಬಹುದು.

೧. ಕೆಲವು **ಸಾಮಾನ್ಯ** ವಾಕ್ಯಗಳನ್ನು ಒಡೆದು ಒಂದೇ **ಸಾಮಾನ್ಯ ವಾಕ್ಯವನ್ನು** ಮಾಡುವುದು. ಇದನ್ನು ಕೆಳಗೆ ಕಾಣಿಸಿದ್ದ ನಾಲ್ಕು ಬಗೆಯಿಂದ ಮಾಡಬಹುದು.

(i) ಒಂದು ಮುಖ್ಯ ವಾಕ್ಯವನ್ನಿಟ್ಟು ಉಳಿದ ವಾಕ್ಯಗಳ ಸ್ಥಲದಲ್ಲಿ **ನಾಮಪದಗಳನ್ನು** ಪಯೋಗಿಸಿ.

ಉ:—(ಅ) ಅವನು ಅಲಸಿಗನಾದನು; ಅವನ ವೈಭವವು ಅಳಿಯಿತು.
ಅವನ ಆಲಸ್ಯದಿಂದ ಅವನ ವೈಭವವು ಅಳಿಯಿತು.

(ಆ) ಆಂಗ್ಲರು ಹೆದರಿಸಿದರು; ಜರ್ಮನರು ಒಪ್ಪಿಕೊಂಡರು.
ಆಂಗ್ಲರ ಹೆದರಿಸುವಿಕೆಯು ಜರ್ಮನರನ್ನು ಒಪ್ಪಿಕೊಳ್ಳುವಂತೆ ಮಾಡಿತು.

(ii) ವಾಕ್ಯದ ಸ್ಥಲದಲ್ಲಿ **ವಿಶೇಷಣಗಳನ್ನು** ಪಯೋಗಿಸಿ.

ಉ:—(ಅ) ರಾಮನು ಸತ್ಯಸಂಧನು; ಅವನನ್ನು ನಾನು ಭಜಿಸುವೆ.
ಸತ್ಯಸಂಧನಾದ ರಾಮನನ್ನು ನಾನು ಭಜಿಸುವೆ.

(ಆ) ಆ ಮಗುವು ಮುದ್ದಾದದ್ದು; ಅದನ್ನೆಲ್ಲರೂ ಅಪ್ಪಿಕೊಳ್ಳುವರು.
ಆ ಮುದ್ದು ಮಗುವನ್ನು ಎಲ್ಲರೂ ಅಪ್ಪಿಕೊಳ್ಳುವರು.

(ಇ) ಆ ಕಾಡಿನಲ್ಲೊಂದು ಹುಲಿಯನ್ನು ಕಂಡೆ; ಅದು ನನ್ನೆಡೆಗೆ ಭರದಿಂದ ಬರುತ್ತಿತ್ತು.
ನನ್ನೆಡೆಗೆ ಭರದಿಂದ ಬರುತ್ತಿರುವ ಹುಲಿಯೊಂದನ್ನು ನಾನು ಆ ಕಾಡಿನಲ್ಲಿ ಕಂಡೆ.

(iii) ವಾಕ್ಯದ ಸ್ಥಲದಲ್ಲಿ **ಕೃದಂತ ಅವ್ಯಯಗಳನ್ನು** ಪಯೋಗಿಸಿ.

ಉ:—(ಅ) ನಾನು ಬಂದೆನು; ಒಂದು ಗಂಟೆಯಾಯಿತು.
ನಾನು ಬಂದು ಒಂದು ಗಂಟೆಯಾಯಿತು.

(ಆ) ಅವನು ಹರಟುವನು; ವೇಳೆಯನ್ನು ಕಳೆಯುವನು.
ಅವನು ಹರಟುತ್ತ ವೇಳೆಯನ್ನು ಕಳೆಯುವನು.

(ಇ) ತಾಯಿ ನಗಲಿಲ್ಲ; ಆಕೆ ಸುಮ್ಮನೆ ಕುಳಿತಳು.
ತಾಯಿಯು ನಗದೆ ಸುಮ್ಮನೆ ಕುಳಿತಳು.

(ಈ) ಗಾಯಕನು ಹಾಡಿದನು; ಅರಸನು ಕೇಳಿದನು.
ಗಾಯಕನು ಹಾಡಲು ಅರಸನು ಕೇಳಿದನು.



(ಉ) ನೀನು ನಗು; ನೀನು ಬಾಳುವೆ.
ನೀನು ನಕ್ಕರೆ ಬಾಳುವೆ!

(iv) **ತುಲನೆಯಿಂದ**

ಉ:—ನಾನು ಕುಶಲನು; ಅವನು ಹೆಚ್ಚು ಕುಶಲನು.
ನನಗಿಂತ ಅವನು ಹೆಚ್ಚು ಕುಶಲನು.

೨. ಕೆಲವು **ಸಾಮಾನ್ಯ** ವಾಕ್ಯಗಳನ್ನು ಸೇರಿಸಿ ಒಂದು **ಮಿಶ್ರ**

ವಾಕ್ಯವನ್ನು ಮುಂದೆ ಕಾಣಿಸಿದ ರೀತಿಯಿಂದ ಮಾಡಬಹುದು. ಒಂದು ವಾಕ್ಯವನ್ನು ಪ್ರಧಾನವಾಗಿಟ್ಟು ಉಳಿದವುಗಳನ್ನು,

(i) **ನಾಮವಾಕ್ಯಗಳನ್ನಾಗಿ ಮಾಡಿ:— ಎಂಬುದು-ಎಂದು ಎಂತ-ಆಗಿ-ಎಂದರೆ-ಏ-ಓ** ಇವುಗಳನ್ನು ಸೇರಿಸಿದರೆ **ನಾಮವಾಕ್ಯ** ಗಳಾಗುವವು.

ಉ.—(ಅ) ಇನ್ನು ಯುದ್ಧವು ಆಗುವುದು ; ಇದು ನಿಶ್ಚಿತ.
ಇನ್ನು ಯುದ್ಧವಾಗುವುದೆಂಬುದು ನಿಶ್ಚಿತ.

(ಆ) ತಿರಿವರಿಂ ಸಿರಿವಂತರಾರು ? ಹೀಗೆ ಸರ್ವಜ್ಞನು ಉಸುರಿದನು.
ತಿರಿವರಿಂ ಸಿರಿವಂತರಾರೆಂದು ಸರ್ವಜ್ಞನು ಉಸುರಿದನು.

(ಇ) ನನ್ನ ಹಣವನ್ನು ಮರಳಿ ಕೊಡು: ಇದು ನನ್ನ ಪ್ರಾರ್ಥನೆ.
ನನ್ನ ಹಣವನ್ನು ಮರಳಿ ಕೊಡಬೇಕಾಗಿ ಪ್ರಾರ್ಥನೆ.

(ಈ) ಏನು ಮಾಡುತ್ತಾನೆ; ಅದನ್ನು ಮಾಡಲಿ.
ಏನು ಮಾಡುತ್ತಾನೋ ಮಾಡಲಿ.

(ii) **ನಾಮವಿಶೇಷಣ-ವಾಕ್ಯಗಳನ್ನಾಗಿ ಮಾಡಿ:—' ಎಂಬ-ಎಂಬುದನ್ನು-ಓ-ಎಂದರೆ'** ಇವುಗಳನ್ನು ಸೇರಿಸಿದರೆ ಇಂಥ ವಾಕ್ಯಗಳಾಗುವವು.

ಉ.-(ಅ) ಮಹಾತ್ಮರು ನಮ್ಮಲ್ಲಿಗೆ ಬರುತ್ತಾರೆ; ಈ ಮಾತು ಎಲ್ಲರಿಗೆ ತಿಳಿಯಿತು.
ಮಹಾತ್ಮರು ನಮ್ಮಲ್ಲಿಗೆ ಬರುವರೆಂಬ ಮಾತು ಎಲ್ಲರಿಗೆ ತಿಳಿಯಿತು.

(ಆ) ಪೃಥಿವಿಯು ಸೂರ್ಯನ ಸುತ್ತಲು ತಿರುಗುತ್ತದೆ; ಇದನ್ನು ಎಲ್ಲರೂ ಬಲ್ಲರು.
ಪೃಥಿವಿಯು ಸೂರ್ಯನ ಸುತ್ತಲು ತಿರುಗುತ್ತದೆಂಬ ಮಾತನ್ನು ಎಲ್ಲರೂ ಬಲ್ಲರು.

(ಇ) ನಾನು ಅದನ್ನು ಯೋಚಿಸಿಕೊಂಡಿದ್ದೆನು; ಅದನ್ನೇ ನಾನು ಹೇಳಿ ಬಿಟ್ಟೆನು.
ನಾನು ಯಾವುದನ್ನು ಯೋಚಿಸಿದ್ದೆನೋ ಅದನ್ನೆಯೇ ಹೇಳಿಬಿಟ್ಟೆನು.

(iii) **ಕ್ರಿಯಾವಿಶೇಷಣ ವಾಕ್ಯಗಳನ್ನಾಗಿ ಮಾಡಿ:—ಎಂದು-ಎಂಬಂತೆ-ಎಂಬ-ಹಾಗೆ-ಹೊರತು-ಅಲ್ಲದೆ-ಏ-ಆ-ಎಂದರೆ-ಆದರೂ** ಇತ್ಯಾದಿಗಳನ್ನು ಸೇರಿಸಿ ಇಂಥ ವಾಕ್ಯಗಳನ್ನು ಸಿದ್ಧಪಡಿಸುವುದು.

ಉ:—(ಅ) ಅವರು ನೋಡಬೇಕು; ಅದಕ್ಕಾಗಿ ನಾನದನ್ನು ಕೊಟ್ಟೆ.
ಅವರು ನೋಡಲೆಂದು ನಾನದನ್ನು ಕೊಟ್ಟೆ.

(ಆ) ಅವನು ತೀರ ಕೋಣನು ; ಅವನು ಜಾಣನಲ್ಲ.
ಅವನು ಕೋಣನೇ ಹೊರತು ಜಾಣನಲ್ಲ.

(ಇ) ನಾನು ಹೇಳಿದೆನು ; ಅವನು ಬರಲಿಲ್ಲ.
ನಾನು ಹೇಳಿದೆನಾದರೂ ಅವನು ಬರಲಿಲ್ಲ.

(ಈ) ನಾನು ಬಿದ್ದೆ–ನಾನು ಸೋತೆ ; ನೀನು ಬಿದ್ದೆ, ನೀನು ಸೋತೆ.
ನಾನು ಬಿದ್ದೆನೇ, ನಾನು ಸೋತೆ; ನೀನು ಬಿದ್ದೆಯಾ, ನೀನು ಸೋತೆ.

**ಸೂಚನೆ :**—(೧) ಮೇಲೆ ಕೊಟ್ಟ ಸಂಬಂಧಸೂಚಕಗಳು ವಾಕ್ಯದ ಬಗೆಯನ್ನು ನಿಶ್ಚಿತಗೊಳಿಸುವ ಅನನ್ಯಲಕ್ಷಣಗಳಲ್ಲ. ಉಪವಾಕ್ಯದ ಬಗೆಯನ್ನೂ ಸಂಬಂಧವನ್ನೂ ಅರ್ಥವನ್ನೂ ಅರಿತುಕೊಂಡೆಯೆ ಗೊತ್ತು ಮಾಡಬೇಕೇ ಹೊರತು ಈ ಸಂಬಂಧ ಸೂಚಕಗಳನ್ನು ಕಂಡಲ್ಲ.

ಉ :—(ಅ) ಈ ಕೊಲೆಯನ್ನು ಮಾಡಿದವನು ಇವನೇ ಎಂದು ಹೇಳಲು ಬರುವಂತಿಲ್ಲ.

(ಆ) ಇದು ನಿಮಗೆ ತಿಳಿಯಲೆಂದು ನಾನದನ್ನು ಉಸುರಿದ್ದು.

(ಅ) ಇಲ್ಲಿ 'ಏನನ್ನು ಹೇಳಲಿ ?' ಎಂಬ ಪ್ರಶ್ನೆಗೆ ಉತ್ತರವಿದ್ದುದರಿಂದ ಈ ಉಪವಾಕ್ಯವು ನಾಮವಾಕ್ಯವು.

(ಆ) ಇಲ್ಲಿ 'ಯಾವ ಕಾರಣಕ್ಕಾಗಿ ?' ಎಂಬುದಕ್ಕೆ ಉತ್ತರವಿದ್ದುದರಿಂದ ಈ ಉಪವಾಕ್ಯವು ಕ್ರಿಯಾವಿಶೇಷಣ ವಾಕ್ಯವು.

**(೨) ಇವನ್ನು ಗುರುತಿಸಲು, ಹಿಂದೆ ಕಾಣಿಸಿದ ಏನು ? ಎಂಥ ? ಎಲ್ಲಿ ? ಇತ್ಯಾದಿ ಪ್ರಶ್ನೆಗಳನ್ನು ಕೇಳಬೇಕು.**

೩. ಕೆಲವು **ಸಾಮಾನ್ಯ** ವಾಕ್ಯಗಳನ್ನು ಸೇರಿಸಿ ಒಂದು **ಸಂಯುಕ್ತ** ವಾಕ್ಯವನ್ನು ಸಿದ್ಧಪಡಿಸುವುದು. ಅದಕ್ಕೆ ಕೆಳಗಣ ಅವ್ಯಯಗಳನ್ನು ಉಪಯೋಗಿಸಬೇಕು.

**(೧) ಸಮುಚ್ಚಯ :— ಊ – ಮತ್ತು – ಹಾಗೂ–ಅಲ್ಲದೆ–ಇದಲ್ಲದೆ–ಬೇರೆ–ಬಳಿಕ–ತರುವಾಯ–ಆಮೇಲೆ–ಅನಂತರ,** ಇವುಗಳನ್ನು ಸೇರಿಸಿ.

ಉ :—(ಅ) ಬಡತನವು ನನ್ನ ಧೈರ್ಯವನ್ನು ಕುಂದಿಸಲಿಲ್ಲ ; ಬಳಲಿಕೆಯು ನನ್ನ ಧೈರ್ಯವನ್ನು ಹೆಚ್ಚಿಸಿತು.
ಬಡತನವೂ ಬಳಲಿಕೆಯೂ ನನ್ನ ಧೈರ್ಯವನ್ನು ಕುಂದಿಸಲಿಲ್ಲ.

(ಆ) ನಾನದನ್ನು ಓದಿದೆ ; ಅದರಲ್ಲಿಯ ರಹಸ್ಯವನ್ನು ಅವರಿಗೆ ಅರುಹಿದೆ.
ನಾನದನ್ನು ಓದಿದ್ದೂ ಆಯಿತು, ಅದರ ರಹಸ್ಯವನ್ನವರಿಗೆ ಅರುಹಿದ್ದೂ ಆಯಿತು.

(ಇ) ನಾವು ಹೊಗಳಿಕೆಯಿಂದ ಹಿಗ್ಗುವೆವು ; ತೆಗಳಿಕೆಯಿಂದ ಕುಗ್ಗುವೆವು.
ನಾವು ಹೊಗಳಿಕೆಯಿಂದ ಹಿಗ್ಗುವೆವು ಮತ್ತು ತೆಗಳಿಕೆಯಿಂದ ಕುಗ್ಗುವೆವು.

(ಈ) ಮೊದಲು ಮೈಬಲವನ್ನು ಗಳಿಸು : ಬುದ್ಧಿಬಲವನ್ನು ಹಿಂದಿನಿಂದ ಸಂಪಾದಿಸು.
ಮೊದಲು ಮೈಬಲವನ್ನು ಗಳಿಸು ತರುವಾಯ-ಆಮೇಲೆ-ಅನಂತರ-ಬಳಿಕ ಬುದ್ಧಿಬಲವನ್ನು ಸಂಪಾದಿಸು.

**(೨) ವಿಕಲ್ಪ :— (ಪಕ್ಷಾಂತರ) ಇಲ್ಲವೆ-ಅಥವಾ-ಹಾಗಾದರೆ-ಆದರೂ-ಅಲ್ಲದಿದ್ದರೆ-ಇಲ್ಲದಿದ್ದರೆ-ಆ ಪಕ್ಷಕ್ಕೆ,** ಇವುಗಳನ್ನು ಪಯೋಗಿಸಿ.

ಉ :— (ಅ) ನಾವು ಗೆಲ್ಲುವೆವು ; ನಾವು ಸಾಯುವೆವು.
ನಾವು ಗೆಲ್ಲುವೆವು ಇಲ್ಲವೆ ಸಾಯುವೆವು.

(ಆ) ನೀನು ಹೋಗು ; ಹೋಗದಿರು. ನಾನಂತೂ ಹೋಗಲೇಬೇಕು.
ನೀನು ಹೋಗು ಇಲ್ಲವೆ ಹೋಗದಿರು, ನಾನಂತೂ ಹೋಗಲೇಬೇಕು.

**(೩) ಪರಿಣಾಮ :— (ಕಾರಣ) ಅದರಿಂದ-ಆದುದರಿಂದ-ಆದ ಕಾರಣ-ಹೀಗಿರುವುದರಿಂದ** ಇತ್ಯಾದಿಗಳನ್ನು ಪಯೋಗಿಸಿ.

ಉ :— (ಅ) ಅವನು ಪ್ರಧಾನರನ್ನು ಕಾಣಬಯಸಿದನು ; ಅವನು ಮುಂಬಯಿಗೆ ತೆರಳಿದನು.
ಅವನು ಪ್ರಧಾನರನ್ನು ಕಾಣಬಯಸಿದನು, ಆದುದರಿಂದ ಮುಂಬಯಿಗೆ ತೆರಳಿದನು.

(ಆ) ಅಲ್ಲಿಯ ಹವೆಯು ಚೆನ್ನಾಗಿರಲಿಲ್ಲ ; ಅವನ ಆರೋಗ್ಯವು ಕೆಟ್ಟಿತು.
ಅಲ್ಲಿಯ ಹವೆಯು ಚನ್ನಾಗಿರಲಿಲ್ಲ, ಆದುದರಿಂದ ಅವನ ಆರೋಗ್ಯವು ಕೆಟ್ಟಿತು.

(ಇ) ಮಳೆಯು ಚೆನ್ನಾಗಿ ಸುರಿಯಿತು, ಒಕ್ಕಲಿಗರು ಸಂತುಷ್ಟರಾದರು.
ಮಳೆಯು ಚೆನ್ನಾಗಿ ಸುರಿಯಿತು ಆದಕಾರಣ ಒಕ್ಕಲಿಗರು ಸಂತುಷ್ಟರಾದರು.

**(೪) ವಿರೋಧ :—(ತಾರತಮ್ಯ) ಆದರೆ-ಆದರೂ-ಆದಾಗ್ಯೂ-ಏನೋ-ಅಂತೂ-ಓ** ಇವನ್ನು ಸೇರಿಸಿ.

ಉ :—(ಅ) ಅವರು ಮಾಡಹೋದುದು ಒಂದು ; ಆದುದು ಇನ್ನೊಂದು.
ಅವರು ಮಾಡಹೋದುದು ಒಂದು, ಆದರೆ ಆದುದು ಇನ್ನೊಂದು.

(ಆ) ನೀವು ಸಿರಿವಂತರು ; ನಾವು ಬಡವರು.
ನೀವು ಸಿರಿವಂತರು ನಾವೋ ಬಡವರು.

(ಇ) ಹರ್ಷನು ಬಲವಾಗಿ ಯತ್ನಿಸಿದನು; ಅವನಿಗೆ ಗೆಲವು ದೊರೆಯಲಿಲ್ಲ.
ಹರ್ಷನೇನೋ ಬಲವಾಗಿ ಯತ್ನಿಸಿದನು ಆದರೂ ಅವನಿಗೆ ಗೆಲವು ದೊರೆಯಲಿಲ್ಲ.

(ಈ) ಪಟ್ಟಣದಲ್ಲಿ ಪ್ಲೇಗಿನ ಹಾವಳಿಯು ಹೆಚ್ಚಿತು ; ಅವನು ಊರನ್ನು ಬಿಡಲಿಲ್ಲ.
ಪಟ್ಟಣದಲ್ಲಿ ಪ್ಲೇಗಿನ ಹಾವಳಿಯು ಹೆಚ್ಚಿತಾದರೂ ಅವನು ಊರನ್ನು ಬಿಡಲಿಲ್ಲ.

## ಅಭ್ಯಾಸ ೩.

ಕೆಳಗಿನ ವಾಕ್ಯಗಳ ಗುಂಪನ್ನು ಕೂಡಿಸಿ ಒಂದು **ಸಾಮಾನ್ಯ** ವಾಕ್ಯವನ್ನು ಮಾಡಿರಿ.

೧. ಅವನು ಒಳ್ಳೆಯ ಪ್ರಾಮಾಣಿಕನು ; ಅವನಿಂಥ ಮೋಸವನ್ನೆಂದಿಗೂ ಮಾಡನು. ೨. ಕ್ಷಮೆಯು ಮಹಾನುಭಾವರಲ್ಲಿಯ ಒಂದು ಗುಣ. ಅದರ ಬಲದಿಂದವರು ಅಪರಾಧ ರಾಶಿಗಳನ್ನು ಮರೆಯಬಲ್ಲರು. ೩. ನಾನೊಂದು ಗ್ರಂಥವನ್ನು ಬರೆದೆ ; ಅದರ ವಿಷಯವು ಗ್ರಾಮಸುಧಾರಣೆ. ೪. ಅವನ ಪರೀಕ್ಷೆಯು ನಾಪಾಸಾಯಿತು. ಇದು ಅವನಿಗೆ ಒದಗಿದ ಇನ್ನೊಂದು ಸಂಕಟ. ೫. ನನ್ನ ತಂದೆಯವರು ಬಲು ಉದಾರರು ; ಅವರು ಬಹಳ ಸಾಲ ಮಾಡಿದರು ; ಅದರಿಂದ ನನಗೆ ತುಂಬಾ ತೊಂದರೆಯಾಯಿತು.

## ಅಭ್ಯಾಸ ೪.

ಕೆಳಗಣ ವಾಕ್ಯಗಳ ಗುಂಪುಗಳನ್ನು ಕೂಡಿಸಿ **ಮಿಶ್ರ** ವಾಕ್ಯಗಳನ್ನು ತಯಾರಿಸಿರಿ.

೧. ಅಲ್ಲಿ ಒಂದು ಜಾತ್ರೆಯಿತ್ತು. ನಾವೆಲ್ಲ ನಮ್ಮ ಊರಿಂದ ಹೊರಟೆವು. ಎರಡು ದಿನ ನಡೆದೆವು. ೨. ನಾನು ಧನಿಕನಾಗಬಯಸುವೆ. ನಾನು ಹಗಲಿರುಳು ಎಡೆಬಿಡದೆ ದುಡಿಯುವೆ. ಕೊನೆಗೇನಾಗುವದೋ ಬಲ್ಲವರಾರು ? ೩. ಮನುಷ್ಯ ಜಾತಿಯ ಬಯಕೆಗಳು ಅನೇಕ. ಅದರಲ್ಲಿ ದೀರ್ಘಾಯುಸ್ಸಿನ ಬಯಕೆಯು ಅತಿ ಪ್ರಬಲವಾದುದು. ಇದನ್ನು ಧಾರಾಳವಾಗಿ ಹೇಳಬಹುದು. ೪. ಮುದುಕರು ಪರಂಪರಾಪ್ರಿಯರು. ತರುಣರು ಕ್ರಾಂತಿಕರರು ; ಅವರ ಜೀವನಕ್ಕೆ ಪರಂಪರಾ ಪ್ರೀತಿಯು ತಡೆಯನ್ನುಂಟುಮಾಡುವದು. ಸಮಾಜದ ಹೆಜ್ಜೆ ನಿಂತಲ್ಲಿಯೇ ನಿಲ್ಲುವದು. ೫.

ತನಗಿಂತ ವಯಸ್ಸಾದವರು ಎಷ್ಟೋ ಮಂದಿ. ಅವರು ಎರಡನೆಯ ಮದುವೆ ಮಾಡಿಕೊಂಡಿರುವರು. ಅವರು ಸುಖ-ಸಂತೋಷದಿಂದಿರುವರು. ತನಗೆ ಮಾತ್ರ ಆ ಸುಖಭೋಗವಿಲ್ಲ. ಇದು ಅವನ ಸಂಕಟ.

### ಅಭ್ಯಾಸ ೫.

ಕೆಳಗಿನ ವಾಕ್ಯಗಳ ಪ್ರತಿಯೊಂದು ಗುಂಪನ್ನೂ **ಸಂಯುಕ್ತ** ವಾಕ್ಯಕ್ಕೆ ಪರಿವರ್ತಿಸಿರಿ.

೧. ಹುಸಿಯನು ನುಡಿಯಲು ಬೇಡ. ಇದೇ ಅಂತರಂಗದ ಶುದ್ಧಿ. ಇದೇ ಬಹಿರಂಗದ ಶುದ್ಧಿ. ೨. ನಾನು ಹಾಲು ಕುಡಿಯಲಿಲ್ಲ. ನಾನು ವ್ಯಾಯಾಮ ಮಾಡಲಿಲ್ಲ. ನನಗೆ ಕಸುವು ಬರಲಿಲ್ಲ. ೩. ನಿನ್ನ ತೊಂದರೆಗಳನ್ನು ನನಗೆ ಅರುಹು. ನಾನು ನಿನಗೆ ಸರಿಯಾದ ನೆರವನ್ನೀಯುವೆ. ೪. ಸಿರಿಯ ಸಂಸಾರವನು ಸ್ಥಿರವೆಂದು ನಂಬದಿರು. ಅದು ಒರೆದೊಂದು ಸಂತೆ. ನೆರೆದೊಂದು ಜಾವಕ್ಕೆ ಹರಿದು ಹೋದಂತೆ. ೫. ನೀನಾದರೂ ಅವನನ್ನು ಕರೆ. ಅವನಾದರೂ ನಿನ್ನನ್ನು ಕರೆಯಲಿ. ಯಾರಾದರೂ ಇಲ್ಲಿ ಸೋಲಲೇ ಬೇಕು.

# ಎರಡನೆಯ ಭಾಗ – ವಾಕ್ಯವೃಂದಗಳು

## ೧. ಪೀಠಿಕೆ

### ೧. ವಾಕ್ಯವೃಂದವೆಂದರೇನು ?

ಇದೊಂದು ಸುಸಂಬದ್ಧ ವಾಕ್ಯಗಳ ಗುಂಪು. ಇದಕ್ಕೆ **ಲೇಖನಖಂಡ**ವೆಂತಲೂ **ಮಹಾವಾಕ್ಯ**ವೆಂತಲೂ ಬೇರೆ ಹೆಸರುಗಳುಂಟು. ಅವೆಲ್ಲ ಅದರ ಒಂದೊಂದು ಲಕ್ಷಣವನ್ನು ಸೂಚಿಸುವವು. ನಾವಾಯ್ದ ಹೆಸರು ಹೆಚ್ಚು ಪ್ರಚಾರದಲ್ಲುಂಟು.

ಉ:—ನುಡಿಯು ನಾಡಿನ ಗುಡಿಯು, ನಾಡಿನ ಸಂಸ್ಕೃತಿಯು ಹೆಚ್ಚಾಗಿ ಅದರ ನುಡಿಯಲ್ಲಿ-ಸಾಹಿತ್ಯದಲ್ಲಿ ಮೂಡಿರುವದು. ಜನತೆಯ ಭಾವ-ಬುದ್ಧಿಗಳು, ರೀತಿ-

ನೀತಿಗಳು ಅವರ ಮಾತಿನಲ್ಲಿ ಮೈದಾಳುತ್ತಿವೆ. ಕರಾಳವಾದ ಕಾಲನ ಒಡಲನ್ನು ಸೀಳಿ, ನಾಡಿನ ಗತವೈಭವವನ್ನಲ್ಲಿಂದ ಸೆಳೆದು, ಅದನ್ನು ಅಲ್ಲಿಯ ನವಯುವಕರೆದುರು ಒಡ್ಡಿ, ಅವರನ್ನು ಚೇತರಿಸುವ ಹಿರಿಗೆಲಸವನ್ನು ಮಾಡುವವರು ನುಡಿದೇವಿಯನ್ನುಳಿದು ಇನ್ನಾರು ? ಆದುದರಿಂದ ಇಂಥ ನುಡಿಯ ಸೇವೆಯು ನಾಡಿನ ಏಳ್ಗೆಯ ಅಡಿಗಲ್ಲೆನ್ನಲು ಅಡ್ಡಿಯಿಲ್ಲ.

**ಸೂಚನೆ:**—ಮೇಲಿನ ವಾಕ್ಯವೃಂದದಲ್ಲಿ-ನುಡಿಯ ಮೇಲ್ಮೆಯನ್ನು ಬಣ್ಣಿಸಿದೆ. ಅದರಲ್ಲಿಯ ಎಲ್ಲ ವಾಕ್ಯಗಳಲ್ಲಿ ಒಂದು ವಿಧದ ನಿಕಟ ಸಂಬಂಧವಿದೆ, ಒಂದು ಸರಿಯಾದ ಕ್ರಮವಿದೆ. ಇಂಥ ಗುಂಪುಗಳೇ **ವಾಕ್ಯವೃಂದಗಳು.** ಪರಸ್ಪರ ಸಂಬಂಧವಿಲ್ಲದ ವಾಕ್ಯಗಳ ಸಮೂಹವು ವಾಕ್ಯವೃಂದವಾಗಲರಿಯದು.

## ೨. ಇದರ ಮಹತ್ವ :—

ಪ್ರಬಂಧದಲ್ಲಿ ವಾಕ್ಯದಂತೆ **ವಾಕ್ಯವೃಂದಕ್ಕೂ** ಒಂದು ಮಹತ್ವದ ಸ್ಥಾನವಿದೆ. ಪ್ರಬಂಧದಲ್ಲಿಯ ಒಂದೊಂದು ವಿಚಾರವು ಒಂದೊಂದು ವಾಕ್ಯವೃಂದದಲ್ಲಿ ಅರಳುವುದು. ವಾಕ್ಯವೃಂದವು **ಪ್ರಬಂಧಮಾಲೆಯಲ್ಲಿಯ** ಹೂವಿನ **ಗೊಂಚಲು—ಪ್ರಬಂಧಾಕೃತಿಯಲ್ಲಿಯ ರೇಖೆ.** ಚಿಕ್ಕ ದೊಡ್ಡ ವಾಕ್ಯವೃಂದಗಳನ್ನು ಒಂದರ ಮುಂದೊಂದಿಟ್ಟೇ ಪ್ರಬಂಧವನ್ನು ಪೂರ್ಣಗೊಳಿಸತಕ್ಕದ್ದು. ಪ್ರಬಂಧದ ಸೊಬಗು ಅದರಲ್ಲಿಯ ವಾಕ್ಯಗಳಂತೆ ವಾಕ್ಯವೃಂದಗಳ ಸೊಬಗನ್ನೂ ಅವಲಂಬಿಸಿದೆ. ಅದಕ್ಕಾಗಿಯೇ ಇದರ ರಚನೆಯ ವಿಚಾರವನ್ನು ವಿವರವಾಗಿ ಮಾಡುವುದು ಅವಶ್ಯ.

## ೩. ವಿವೇಚನೆಯ ಕ್ರಮ :—

ಈ ಭಾಗದಲ್ಲಿ ವಾಕ್ಯವೃಂದದ ರಚನೆಯನ್ನು ಮೊದಲು ವಿವೇಚಿಸಿ ತರುವಾಯ ಒಂದು ಆಲೋಚನೆಯನ್ನು ಅರಳಿಸಿ ವಾಕ್ಯವೃಂದವನ್ನು ಹೇಗೆ ಬರೆಯಬೇಕೆಂಬುದನ್ನು ಹೇಳಲಾಗುವುದು. ಮುಂದೆ ದೊಡ್ಡ ವಾಕ್ಯವೃಂದಗಳನ್ನು ಸಂಗ್ರಹವಾಗಿ ಬರೆಯುವ ಕೌಶಲವನ್ನು ತಿಳಿಸಿ ತರುವಾಯ ವಾಕ್ಯವೃಂದದ ಅರ್ಥಬೋಧೆಗೆ ತೀರ ಅವಶ್ಯವಾದ ವಿರಾಮ ಚಿಹ್ನೆಗಳ ಪರಿಚಯವನ್ನು ಮಾಡಿಕೊಡಲಾಗುವುದು. ಕೊನೆಗೆ **ಕಥಾರಚನೆಯ ವಿಷಯವಾಗಿ** ವಿವೇಚನೆಯನ್ನು ಮಾಡಿ ಕೆಲವು ಅಭ್ಯಾಸಗಳನ್ನು ಸೇರಿಸುವೆವು.

---

## ೨. ವಾಕ್ಯವೃಂದ—ರಚನೆ.

### ೧. ಮುಖ್ಯ ಗುಣಗಳು :—

ವಾಕ್ಯವೃಂದವು **ಸುಂದರವೂ ಪರಿಣಾಮಕಾರಿಯೂ** ಆಗಬೇಕಾದರೆ ಅದರಲ್ಲಿ ಮುಂದಿನ ಮೂರು ಗುಣಗಳಂತೂ ಇರಲೇ ಬೇಕು. ಅವಿಲ್ಲದುದು ವಾಕ್ಯವೃಂದವೇ ಆಗಲರಿಯದು.

**(ಅ) ಐಕ್ಯ :**—(೧) ಇದು ವಾಕ್ಯವೃಂದದಲ್ಲಿರಬೇಕಾದ ಮಹತ್ವದ ಗುಣ. ವಾಕ್ಯದಲ್ಲಿ ಒಂದೇ **ವಿಚಾರವಿರಬೇಕಾದಂತೆ**, ವಾಕ್ಯವೃಂದದಲ್ಲಿ ಒಂದೇ **ವಿಷಯವು** ಇರತಕ್ಕದ್ದು. ಅದರಲ್ಲಿ ಒಂದಕ್ಕಿಂತ ಹೆಚ್ಚು ವಿಷಯಗಳು ಬರಕೂಡದು. ವಾಕ್ಯವೃಂದದಲ್ಲಿಯ ಪ್ರತಿಯೊಂದು ಮಾತು ಆ ಪ್ರಧಾನ ವಿಷಯವನ್ನು ಪೋಷಿಸುವಂತಹದಿರಬೇಕು. ಬರಹಗಾರನು ಅದನ್ನು ಬಿಟ್ಟು ಅತ್ತಿತ್ತ ಎಷ್ಟೂ ಅಲೆಯಕೂಡದು.

(೨) ತಿಳಿಯಾದ—ಕಸುವುಳ್ಳ ಬರಹದಲ್ಲಿ ಈ **ಐಕ್ಯವು** ಅತ್ಯವಶ್ಯ.

**(ಆ) ಕ್ರಮ :**—ಕ್ರಮವು ವಾಕ್ಯವೃಂದದಲ್ಲಿರಬೇಕಾದ ಇನ್ನೊಂದು ಗುಣ. ಅದರಲ್ಲಿ ತರ್ಕಶುದ್ಧವಾದ ವಿಚಾರ ಕ್ರಮವು ಇರಬೇಕು. ಅಂದರೆ ಅದನ್ನು ಓದುಗರು ಸಹಜವಾಗಿ ಗ್ರಹಿಸಿ, ಆನಂದಪಡಬಹುದು.

ಎಲ್ಲ ವಿಚಾರಗಳನ್ನು ಪ್ರಧಾನ ಕಲ್ಪನೆಯೊಡನೆ ಹೊಂದಿಸಿ ಅವುಗಳ ಮಹತ್ವವನ್ನನುಸರಿಸಿ, ಅವುಗಳಿಗೆ ತಕ್ಕ ಸ್ಥಲವನ್ನು ಕೊಡಬೇಕು. ವಾಕ್ಯವೃಂದದಲ್ಲಿ ಪ್ರಸಂಗಗಳ ವರ್ಣನೆಯಿದ್ದರೆ ಅವುಗಳ ವಿವರಣೆಯಲ್ಲಿ ಕಾಲಕ್ರಮವನ್ನು ಇಡಬೇಕು. ಅವು ಒದಗಿದ ಕ್ರಮದಿಂದ ಅವನ್ನು ಬಣ್ಣಿಸಬೇಕು. ಅಂದರೆ ವಿಚಾರಗಳ ರಚನೆಯಲ್ಲಿ **ತರ್ಕಕ್ರಮ, ಮಹತ್ವಕ್ರಮ, ಕಾಲಕ್ರಮ**ಗಳನ್ನನುಸರಿಸಲು ಯತ್ನಿಸಬೇಕು.

**(ಇ) ವೈವಿಧ್ಯ :**—(೧) ಪ್ರತಿವಾಕ್ಯವೃಂದದಲ್ಲಿಯ ವಾಕ್ಯಗಳು ಒಂದೆ ಮಾದರಿಯವು ಇರಬಾರದು. ಅವುಗಳ ರಚನೆಯಲ್ಲಿಯೂ ಉದ್ದಳತೆಯಲ್ಲಿಯೂ ವಿವಿಧತೆ ಬೇಕು. ಎಲ್ಲೆಡೆಯಂತೆ ಇಲ್ಲಿಯೂ **ವೈವಿಧ್ಯವು ಸೊಬಗಿನ ಸೆಲೆಯು**. ಅದರಿಂದ ವಾಕ್ಯವೃಂದವು ಆಕರ್ಷಕವಾಗುವುದುಂಟು.

(೨) ವಾಕ್ಯಗಳಂತೆ ಬೇರೆ ಬೇರೆ ವಾಕ್ಯವೃಂದಗಳಲ್ಲಿಯೂ ವಿವಿಧತೆ ಬೇಕು. ಅವುಗಳ ಉದ್ದಳತೆಯಲ್ಲಿ ಭಿನ್ನತೆಯಿರಬೇಕು.

೨. **ರಚನೆ :—**

**(ಅ) ಆಂತರಿಕ :—**ವಾಕ್ಯವೃಂದವು ಒಂದು ನಿಬಂಧವೇ ಸರಿ. ಅದರಲ್ಲಿ ಒಂದೇ ವಿಷಯವನ್ನು **ಅರಳಿಸಲಾ**ಗಿರುವುದು. ವಿಸ್ತಾರವಾಗಿ ವಿವರಿಸಲ್ಪಡಲಿರುವುದು. ಅದಕ್ಕೊಂದು **ಆದಿಯಿದೆ, ಮಧ್ಯವಿದೆ, ಕೊನೆಯಿದೆ.** ಅವೆಲ್ಲ ಯೋಗ್ಯರೀತಿಯಿಂದ ಬರೆಯಲ್ಪಟ್ಟರೆ, ಅದು ಅಂದವಾಗುವುದು. ಆದುದರಿಂದ ಅವೆಲ್ಲವುಗಳನ್ನೂ ವಿವರಿಸುವುದು ಅವಶ್ಯ.

(೧) **ಆದಿ :—**ವಾಕ್ಯವೃಂದದ ಆದಿಯಲ್ಲಿ ಯಾವಾಗಲೂ ಪ್ರಧಾನ ವಾಕ್ಯವನ್ನಿಡಲು ಮರೆಯಬಾರದು. ಅದಕ್ಕೆ **ಕೀಲ-ವಾಕ್ಯ** (Key-Sentence) ಎಂಬ ಹೆಸರು. ಮುಂದಿನ ಭಾಗದಲ್ಲಿ ಅದರಲ್ಲಿಯ ಕಲ್ಪನೆಯ ವಿಸ್ತಾರವೇ ಇರುವುದರಿಂದ ಅದಕ್ಕೆ **ಬೀಜವಾಕ್ಯ**ವೆಂದರೂ ಸಲ್ಲುವುದು. ಒಮ್ಮೊಮ್ಮೆ ಈ ಕೀಲವಾಕ್ಯವನ್ನು ಕೊನೆಯಲ್ಲಿಯೂ ಇಡುವುದುಂಟು.

(೨) **ಮಧ್ಯ :—**ಮಧ್ಯದಲ್ಲಿ ಆದಿಯಲ್ಲಿಯ ವಿಧಾನದ ವಿವರಣೆಯಿರುವುದರಿಂದ ಅದರಲ್ಲಿ **ಐಕ್ಯವೂ ಕ್ರಮವೂ ವೈವಿಧ್ಯವೂ ಇರಬೇಕು.** ಹಿಂದಿನ ಮುಂದಿನ ವಾಕ್ಯಗಳಲ್ಲಿ ಸಹಜವಾದ ಹೊಂದಿಕೆಯಿರಬೇಕು. **ಕಾರ್ಯ-ಕಾರಣ, ಸಾಮಾನ್ಯ-ವಿಶೇಷ** ಇತ್ಯಾದಿ ಕ್ರಮವೂ ಇರಬೇಕು. ವಾಕ್ಯಗಳ ರಚನೆ-ಉದ್ದಳತೆಗಳಲ್ಲಿ ವೈವಿಧ್ಯವಿರಬೇಕು.

(೩) **ಕೊನೆ :—**ಕೊನೆಯು **ಆಕರ್ಷಕ ವಿಧಾನದಿಂದ** ಮಾಡಲ್ಪಡಬೇಕು. ಅದರಲ್ಲಿ ವಾಕ್ಯವೃಂದದ ಸಾರವು ಇಳಿಯಬೇಕು.

**(ಆ) ಬಾಹ್ಯ :—**ವಾಕ್ಯವೃಂದದ **ಬಾಹ್ಯರಚನೆ**ಯ ವಿಷಯವಾಗಿ ವಿಶೇಷ ಬರೆಯುವಂತಿಲ್ಲ. ಅದರಲ್ಲಿ ಎರಡು ಸಂಗತಿಗಳನ್ನು ವಿಶೇಷವಾಗಿ ಗಮನಿಸಬೇಕು.

(೧) ವಾಕ್ಯವೃಂದಗಳು ತೀರ ಚಿಕ್ಕವಾಗಲಿ ತೀರ ದೊಡ್ಡವಾಗಲಿ ಇರಕೂಡದು. ಅವುಗಳ ಉದ್ದಳತೆಗಳಲ್ಲಿಯೂ ಒಂದು ಬಗೆಯ ವೈವಿಧ್ಯವಿದ್ದರೆ **ನಿಬಂಧದ** ಸೊಬಗು ಹೆಚ್ಚಾಗುವುದು.

(೨) ಒಂದು ವಾಕ್ಯವೃಂದದಿಂದ ಇನ್ನೊಂದಕ್ಕೆ ಸಾಗುವಾಗ ಅವುಗಳಲ್ಲಿ ವಿಚಾರದ ಸಂಕ್ರಮಣವು – ಬದಲು ಸಹಜವಾಗಿ ಆಗಬೇಕು. ವಾಕ್ಯವೃಂದಗಳ ಮಾಲೆಯಲ್ಲಿಯೂ ಒಂದು ಸುಸಂಬದ್ಧ ಕ್ರಮವು ಇರಬೇಕು. ಅವುಗಳಲ್ಲಿ ಸರಿಯಾದ ಹೊಂದಿಕೆಯಿರಬೇಕು.

**೩. ಹೊಂದಿಸುವ ರೀತಿ :—**

ವಾಕ್ಯ-ವಾಕ್ಯಗಳನ್ನಾಗಲಿ, ವಾಕ್ಯವೃಂದ-ವಾಕ್ಯವೃಂದಗಳನ್ನಾಗಲಿ ಹೊಂದಿಸಲು ಕೆಲವು ಸಾಧನಗಳುಂಟು. ಅವುಗಳಲ್ಲಿ ಪ್ರಮುಖವಾದವು ಗಳನ್ನು ಮುಂದೆ ಕಾಣಬಹುದು.

(೧) ಸರಿಯಾದ ಅವ್ಯಯಗಳನ್ನು ಪಯೋಗಿಸಿ :—

**ಸಮುಚ್ಚಯ :**—ಮತ್ತೆ-ಹಾಗೆಯೇ-ಕೂಡ-ಇಲ್ಲದೆ.

**ವಿರೋಧ :**—ಆದರೆ-ಆದರೂ.

**ಪರಿಣಾಮ :**—ಆದುದರಿಂದ-ಇದರಿಂದ-ಏಕೆಂದರೆ.

**ಪಕ್ಷಾಂತರ :**—ಈ ಮೇರೆಗೆ-ಒಟ್ಟಾರೆ-ಅಥವಾ-ಇಲ್ಲವೆ-ಆಗಲಿ.

**ನಿತ್ಯಸಂಬಂಧ :**—ಹೇಗೆ-ಹಾಗೆ ; ಎಂಥ-ಅಂಥ ಇ.

**ಈ ಮೇರೆಗೆ, ಒಟ್ಟಿನಲ್ಲಿ** ಇವುಗಳನ್ನು ಒಂದು ವಾಕ್ಯವೃಂದವನ್ನು ಇನ್ನೊಂದರೊಡನೆ ಹೊಂದಿಸಲು ಉಪಯೋಗಿಸಬಹುದು.

(೨) ಪುನರುಕ್ತಿಯಿಂದ :—ಒಮ್ಮೊಮ್ಮೆ ಪುನರುಕ್ತಿಯಿಂದಲೂ ಈ ಕಾರ್ಯವು ಆಗುವುದು.

**ಸೂಚನೆ :**—ಮುಂದೆ ಕೊಟ್ಟ **ಮಾದರಿಯ ವಾಕ್ಯವೃಂದ**ಗಳನ್ನು ಪರೀಕ್ಷಿಸಿ ಮೇಲ್ಕಾಣಿಸಿದ ಸಂಗತಿಗಳ ಉದಾಹರಣೆಗಳನ್ನು ಕಂಡುಹಿಡಿಯಬಹುದು.

**೪. ಮಾದರಿಗಳು :—**

## ೧. ಮುಂಜಾವಿನ ಸಂಗೀತ

ಬೀಸುವ ವೇಳೆಯೆಂದರೆ ಸಾಮಾನ್ಯವಾಗಿ ರಾತ್ರಿಯ ಕೊನೆಯ ಜಾವದ ಸಮಯ. ಆಗ ಎಲ್ಲೆಲ್ಲಿಯೂ ಶಾಂತತೆಯ ಸಾಮ್ರಾಜ್ಯವು ನೆಲೆಗೊಂಡಿರುವುದು. ಎಲ್ಲ ಪ್ರಾಣಿಗಳಿಗೂ ಸಕ್ಕರೆನಿದ್ದೆಯ ಕಾಲವದು. ಹಳ್ಳಿಯ ಹೆಂಗಸರು ಎದ್ದು ಬೀಸುವುದಕ್ಕೆ ಮೊದಲು ಮಾಡುವರು. ಸೃಷ್ಟಿಯು ತನ್ನ ನೈಸರ್ಗಿಕ ಸಂಗೀತಮಯ ವಾತಾವರಣದಿಂದ ಮೊದಲೇ ಕೂಡಿಕೊಂಡಿರುವುದು. ಅದರಲ್ಲಿಯೇ ಬೀಸುವ ಕಲ್ಲು ಎಡೆಬಿಡದೆ ಮಂದ ಷಡ್ಜದಲ್ಲಿ ಸ್ವರವನ್ನು ಹಿಡಿದು ನಡೆದಿರುವುದು. ' ನಾಗರ ಹೆಡೆಯಂತೆ ನಲಿನಲಿದು ಬೀಸುವ' ನಾರಿಯರು ಆ ಸ್ವರದಲ್ಲಿ ಸ್ವರವನ್ನು ಬೆರೆಯಿಸಿ, ಕೈಬಳೆಗಳ ' ಗಲಕು ಗಲಕು ' ಎಂಬ ಸಪ್ಪಳವೇ ತಾಳಗಳನ್ನು ಹಾಕುತ್ತಿರಲು, ವೀಣೆ ಕೊಳಲುಗಳನ್ನು ಮೂದಲಿಸುವ ಮಂಜುಲ ಕಂಠದಿಂದ ಚೆಲುವು

ಒಲವುಗಳನ್ನು ಬಣ್ಣಿಸಿ ಹಾಡುತ್ತಿರುವರು. ಅಂತಹ ಸಂಗೀತ ಸಂಯೋಗವು ಅದಾರ ಮನಸ್ಸನ್ನು ಸೆಳೆದುಕೊಳ್ಳದಿರುವುದು ? ಅಳುತಿರುವ ಎಳೆಯ ಹಸುಳೆಗಳು ಆ ಸಂಗೀತವನ್ನು ಕೇಳಿ ಅಳುವುದನ್ನು ನಿಲ್ಲಿಸಿ ಸಮಾಧಾನಗೊಂಡು ನಿದ್ದೆಹೋಗುವವು. ಅರೆನಿದ್ದೆಯಲ್ಲಿರುವವರು ಆ ಸಂಗೀತದಿಂದ ಸೂಸುತ್ತಿರುವ ಸಂತೋಷತರಂಗವಲ್ಲಿ ಓಡಾಡಿ ಓಲಾಡಿ ಮೈಮರೆಯುತ್ತಲಿರುವರು. ಮನಸ್ಸಿನ ದುಗುಡವನ್ನು ಹೊಡೆದೋಡಿಸಿ ಅದನ್ನು ಪ್ರಸನ್ನತೆಯ ಕಡೆಗೆ ತಿರುಗಿಸುವುದಾ ಮೋಹಿನಿಯ ಮಂತ್ರ. ಇಂತಹ ಸಂತೋಷವನ್ನು ನಿತ್ಯನಿತ್ಯವೂ ಅನುಭವಿಸುತ್ತಿರುವವರೆಂತಹ ಪುಣ್ಯಶಾಲಿಗಳೊ ! ಜೀವಿತಕಾಲದಲ್ಲಿ ಒಮ್ಮೆಯಾದರೂ ನಾವದನ್ನು ಅನುಭವಿಸಿಯೇ ತೀರಬೇಕು.

—ಆನಂದಕಂದ.

## ೨. ವೀರರ ಜನನ.

ರಾಷ್ಟ್ರದ ಅಭಿವೃದ್ಧಿಗೆ ದೃಢಕಾಯರೂ ಸ್ಥಿರಬುದ್ಧಿಯವರೂ ಆದ ಪ್ರಜೆಗಳು ಬೇಕೆಂಬುದನ್ನು ಯಾರೂ ಒಪ್ಪಬಹುದು. ಹಾಗಾದರೆ ಇಂಥ ವೀರಬಂಟರು ಬೆಳೆಯಲು ಯಾವ ಏರ್ಪಾಡು ಮಾಡಬೇಕೆಂಬ ಬಗ್ಗೆ ನಾವು ವಿಚಾರ ಮಾಡಬೇಕಲ್ಲವೇ ? ಕೊನೆಯು ಸರ್ವಾಂಗಸುಂದರವಾಗಬೇಕಾದರೆ ಅದರ ಮೂಲವೂ ಹಾಗಿರಬೇಕೆಂಬುದನ್ನು ಮರೆಯಲಾಗದು. ಆದಿಗೂ ಅಂತ್ಯಕ್ಕೂ ನಿಕಟಸಂಬಂಧವಿರುವುದು. ಬೆಳೆಯ ಗುಣವು ಮೊಳಕೆಯಲ್ಲಿರುವುದೇನಾಶ್ಚರ್ಯ ? ನಮಗೆ ಸಮೀಚೀನವಾದ ಉತ್ತಮ ಹಣ್ಣುಗಳು ಬೇಕಾದರೆ ನಾವು ಆ ಹಣ್ಣುಗಳಾಗುವ ಗಿಡದ ಆರೈಕೆಯನ್ನು ಬೀಜದಿಂದಲೂ ಮಾಡುತ್ತೇವೆ. ಮೊದಲು ಬೀಜದ ಗುಣವನ್ನು ನೋಡುವೆವು. ಆ ಮೇಲೆ ಆ ಬೀಜವನ್ನು ಬಿತ್ತಬೇಕಾದ ಹೊಲದ ಗುಣಪರೀಕ್ಷೆ ಮಾಡುತ್ತೇವೆ. ಕೆಲವೊಂದು ಬಗೆಯ ಸಸ್ಯಾದಿಗಳು ಬಲವಾಗಿ ಬೆಳೆಯಬೇಕಾದರೆ ಕೆಲವೊಂದು ಗುಣವುಳ್ಳ ನೆಲವೇ ಅವಶ್ಯವಾಗಿ ಬೇಕಾಗುತ್ತದೆ. ವಿಷಬೀಜಕ್ಕೆ ಅಮೃತ ಫಲವಾಗುವುದಿಲ್ಲ. ಅಂದಬಳಿಕ ಸುಪ್ರಜಾ ನಿರ್ಮಾಣವಾಗಬೇಕಾದರೆ ತಾಯಿ ತಂದೆಗಳ ಮದುವೆಯಿಂದ ಎಚ್ಚರಪಡಬೇಕಾಯಿತಲ್ಲವೇ ? ಆದ್ದರಿಂದಲೇ ವಿವಾಹಕ್ಕೆ ಅಷ್ಟೊಂದು ಮಹತ್ವ. ಮಾನವ ಜಾತಿಯ ಪ್ರಗತಿಯನ್ನುಂಟು ಮಾಡುವ ವೀರ ಭೂಪತಿಗಳನ್ನು ಪಡೆಯುವುದೇ ಮದುವೆಯ ಮುಖ್ಯ ಉದ್ದೇಶವಿರಬೇಕು.

—ತಾರಾನಾಥ.

## ೩. ಸೂಕ್ತಿ ವಿಸ್ತಾರ.

### ೧. ಅಂದರೇನು ?

ಇದೊಂದು ವಾಕ್ಯವೃಂದವನ್ನು ಬರೆಯುವ ಇನ್ನೊಂದು ರೀತಿ. ಇಲ್ಲಿಯೂ ವಾಕ್ಯವೃಂದವನ್ನು ಬರೆಯಲು ಬೇಕಾದ ಕೌಶಲವು ಅವಶ್ಯವು. ಕಳೆದ ಪ್ರಕರಣದಲ್ಲಿ ಒಂದು ವಿಷಯುವನ್ನು ಕುರಿತು ವಾಕ್ಯವೃಂದವನ್ನು ಬರೆಯಲು ಕಲಿತುದಾಯಿತು. ಇಲ್ಲಿ **ವಿಚಾರಸಾರವುಳ್ಳ**—ಮಹತ್ವದ ವಿಚಾರವನ್ನು ಒಳಗೊಂಡ—ಒಂದು ಕಿರಿನುಡಿಯನ್ನು, ಚಿಕ್ಕ ವಾಕ್ಯವನ್ನು, ಬೆಳೆಯಿಸಿ ಬರೆಯುವ ರೀತಿಯನ್ನು ಅರುಹಬೇಕಾಗಿದೆ.

### ೨. ಬರೆವುದೇತಕ್ಕೆ ?

ಈ ಬಗೆಯಾಗಿ ಬರೆಯುವುದೇತಕ್ಕೆ ? ಎಂಬುದನ್ನು ಮೊದಲು ಅರಿತು ಕೊಳ್ಳೋಣ ! ಅಂದರೆ ಇದರ ವಿಷಯವಾಗಿ ಕುತೂಹಲವು ಹೆಚ್ಚಾಗಿ ಅದನ್ನು ಬರೆಯಲು ಉತ್ಸಾಹವು ಬೆಳೆಯುವುದು.

ಒಂದು ಕಲ್ಪನೆಯನ್ನು ಹಿಗ್ಗಿಸಲು—ಬೆಳೆಯಿಸಿ ಬರೆಯಲು—ಕಲಿಯುವು ದರಿಂದ ಅದರ ಸಾಂಗ-ಉಪಾಂಗ ಜ್ಞಾನವು ನಮಗೆ ಆಗುವುದು. ಸರಿಯಾದ ವಾಕ್ಯವೃಂದಗಳನ್ನು ಬರೆಯುವ ಕೌಶಲವು ಬೆಳೆದು ಮುಂದೆ ನಿಬಂಧ ಬರಹ ವನ್ನು ಕಲಿಯಲು ಅನುಕೂಲವಾಗುವುದು.

### ೩. ಹೇಗೆ ?

(೧) ಕೊಟ್ಟ ವಾಕ್ಯವನ್ನು ಪುನಃ ಪುನಃ ಓದಿ ಅದರ ತಿರುಳನ್ನು—ಮುಖ್ಯ ಅಂಶವನ್ನು—ಅರಿಯಿರಿ. ಅದನ್ನು ವಿಸ್ತರಿಸುವಾಗ ತೀರ ಅವಶ್ಯ ವಾದ ಮಾತುಗಳನ್ನಷ್ಟೇ ಸೇರಿಸಿ ಅನವಶ್ಯಕವಾದ ಜೊಳ್ಳು ಸಂಗತಿಗಳನ್ನು ತೊರೆಯಿರಿ—ಬಿಟ್ಟುಬಿಡಿರಿ.

(೨) ವಾಕ್ಯಗಳಲ್ಲಿ ಸರಿಯಾದ ಹೊಂದಿಕೆಯಿರಲಿ. ಕಳೆದ ಪ್ರಕರಣ ದಲ್ಲಿಯ ಸೂಚನೆಗಳನ್ನು ಮರೆಯದಿರಿ. ಹೊಂದಿಕೆಯಲ್ಲಿ ಶೈಥಿಲ್ಯ ಉಂಟಾ ಯಿತೆಂದರೆ ವಿಸ್ತಾರದ **ಬಿಗುವು** ಅಳಿಯುವುದು.

(೩) ವಿಸ್ತಾರವು ಒಂದು ವಾಕ್ಯವೃಂದವನ್ನು ಮೀರಬಾರದು. ಅಷ್ಟೇ ಇರಬೇಕು. ಅದೊಂದು ಆ ವಿಷಯವನ್ನೊಳಗೊಂಡ ಚಿಕ್ಕ ನಿಬಂಧವೇ ಆಗಬೇಕು.

**೪. ಮಾದರಿಗಳು :—**

**೧. ಉದ್ಯೋಗವುಳ್ಳವನ ಹೊದ್ದುವುದು ಸಿರಿಬಂದು.**

ದುಡಿದವನೆ ಪಡೆಯಬೇಕೆಂಬುದು ನಿಸರ್ಗ–ದೇವತೆಯ ನಿಯಮ. ವೈಗಳ್ಳನನ್ನಾಕೆ ಎಂದೂ ಹರಸಳು. ಹಾರುವ ಹಕ್ಕಿಯು, ಅಲೆಯುವ ಮೃಗವು, ಅರಸುವ ಮೀನು, ತಮ್ಮ ಜೀವನಕ್ಕೆ ಬೇಕಾದ ವಸ್ತುಗಳನ್ನು ಪಡೆಯುವವು. ಅದನ್ನುಳಿದು ವೈಮರೆತು ಮಲಗಿದವರ ಮುಖದಲ್ಲಿ ಬೀಳುವುದು ಮಣ್ಣೊಂದಲ್ಲದೆ ಇನ್ನೇನು ? ಆದುದರಿಂದ ನಮಗೆ ಬೇಕಾದುದನ್ನು ದೊರಕಿಸಲು ಉದ್ಯೋಗವೇ ಮಿಗಿಲಾದ ಸಾಧನವು. ಅದರಿಂದಲೇ ನಮ್ಮ ಬಾಳು ಸಾಗುವುದು, ನಮಗೆ ವೈಭವವು ಸಿಗುವುದು.

**೨. ದಯವೇ ಧರ್ಮದ ಮೂಲವಯ್ಯ.**

ಪರಮಾತ್ಮನ ಪ್ರಾಪ್ತಿಯು ಧರ್ಮದ ಗುರಿ. ಅವನ ಪ್ರೀತಿಯು ಆ ಗುರಿಯನ್ನು ಮುಟ್ಟುವ ಹಿರಿದಾರಿ. ದೇವನನ್ನು ಪ್ರೀತಿಸುವ ವಿವಿಧ ಬಗೆಗಳಲ್ಲಿ ಆತನ ಮಕ್ಕಳನ್ನು ಪ್ರೀತಿಸುವುದು—ವಿಶೇಷವಾಗಿ ಅನೇಕ ಬವಣೆಗಳಿಂದ ಬಳಲುವ ಆತನ ಹೀನ-ದೀನ ಮಕ್ಕಳನ್ನು ಪ್ರೀತಿಸುವುದು ಮಿಗಿಲಾದುದು. ಈ ಪ್ರೀತಿಗೆ **ದಯೆ** ಎಂಬ ಹೆಸರು. ಆದುದರಿಂದ ದಯೆಯು ಪ್ರತಿಯೊಂದು ಧರ್ಮದ ಮೂಲವಾಗಿರುವುದು.

**೩. ಮಾತಾಡಿದಂತೆ ನಡೆದಾತ ಜಗವೆಲ್ಲ ಕೂತಲ್ಲಿ ಆಳ್ವ !**

ಸತ್ಯವಂತರು ಆಡಿದಂತೆ ಮಾಡುವರು. ಅವರದು ಮತಿಯಂತೆ ಮಾತು ; ಮಾತಿನಂತೆ ಕೃತಿ. ಈ ಏಕರೂಪತೆಯಿಂದಲೇ ಜನರು ಅವರನ್ನು ನಂಬುವರು ; ಆದರಿಸುವರು ; ಅವರು ಹೇಳಿದುದನ್ನು ಕೇಳುವರು. ಈ ಮೇರೆಗೆ ತಮ್ಮ ನೈತಿಕ ಬಲದಿಂದ ಇವರು ಅನೇಕರನ್ನು ತಿದ್ದುವರು. ಅವರನ್ನು ಸರಿಯಾದ ದಾರಿಯಲ್ಲಿ ನಡೆಯಿಸುವರು. ಅದಕ್ಕಾಗಿ ಅವರು ತಮ್ಮ ಸ್ಥಲದಿಂದ ಕದಲುವ ಕಾರಣವಿಲ್ಲ. ತಮ್ಮ ಆಕರ್ಷಣ ಶಕ್ತಿಯಿಂದ ಅವರು ಜನರನ್ನೆಯೇ ತಮ್ಮೆಡೆಗೆ ಸೆಳೆದು ಅವರನ್ನು ಉದ್ಧರಿಸುವರು.

**೪. ಬಡವಂ ಬಲ್ಲಿದನಾಗನೇ ?**

ಜಗಚ್ಚಕ್ರವು ಸಂತತವಾಗಿ ತಿರುಗುವುದರಿಂದ ಮೇಲಿನದು ಕೆಳಗೆ, ಕೆಳಗಿನದು ಮೇಲೆ ಆಗುವುದು ಸಹಜ. ಈ ಗತಿಯು ಸರ್ವಗಾಮಿಯು. ಬೀಜವು ಮಣ್ಣಿನಿಂದೆದ್ದು, ಹೂತು, ಕಾತು, ಮರಳಿ ಮಣ್ಣನ್ನು ಕೂಡುವು

ದುಂಟು.—ಮಾನವನ ಅವಸ್ಥೆಯೂ ಹಾಗೆಯೇ! ಎದ್ದವನು ಬೀಳುವಂತೆ, ಬಿದ್ದವನು ಏಳುವನು. ಅದೇ ರೀತಿಗೆ ಬಡವನು ಸಿರಿವಂತನಾಗುವುದೂ ಸಿರಿವಂತನು ಬಡವನಾಗುವುದೂ ಖಂಡಿತ. ಶಾಶ್ವತ ಐಶ್ವರ್ಯವೂ ದಾರಿದ್ರ್ಯವೂ ಯಾರಿಗೂ ದೊರೆಯದು.

### ೫. ತಾಗುವ ಮುನ್ನವೇ ಬಾಗುವ ತಲೆ ಲೇಸು.

ಮುಂಜಾಗ್ರತೆಯು ಜಾಣತನದ ಹಿರಿಕುರುಹು. ವಿವೇಕಶಾಲಿಯು ಯಾವಾಗಲೂ ಮುಂದೇನಾಗುವುದೆಂಬುದನ್ನು ಅರಿತೇ ವರ್ತಿಸುವನು. ಅವನಿಗೆ ಮುಂದಿನ ತಗ್ಗು-ದಿನ್ನೆಗಳು ಗೊತ್ತಾಗುವವು. ಆದುದರಿಂದ ಅವನಿಗೆ ಕಷ್ಟಕ್ಕೀಡಾಗುವ ಪ್ರಸಂಗವು ಬರುವುದಿಲ್ಲ. ಅವನ ಬಾಳು ಸುಖಮಯವಾಗುವುದು. ಆದರೆ ಹಿಂದು ಮುಂದನ್ನರಿಯದ ಕುರುಡ ಕೋಣರು, ತಿಳಿಯದೆ ನುಸುಳಿ ಬಂದ ಗಂಡಾಂತರಗಳಲ್ಲಿ ಸಿಲುಕಿ, ಅತಿಯಾಗಿ ಗೋಳಾಡುವರು. ಹೀಗಿರಲು ತಾಗುವ ಪೂರ್ವದಲ್ಲಿ ಬಾಗುವ ಜಾಣ್ಮೆಯೇ ಒಳಿತಲ್ಲವೇ?

### ೬. ಪೂಜೆಯೆಂದರೆ ವಾತ್ಸಲ್ಯ-ಮಮತೆಗಳ ಆಲಿಂಗನ.

ಪೂಜ್ಯನಲ್ಲಿ ವಾತ್ಸಲ್ಯ; ಪೂಜಾರಿಯಲ್ಲಿ ‘ಮಮತೆ.’ ಹೀರುವುದು ವಾತ್ಸಲ್ಯದ ಸ್ವಭಾವ; ಹರಿಯುವುದು ಮಮತೆಯ ಸ್ವಭಾವ. ಅದು ಹೀರಿದತ್ತ ಇದು ಹರಿದೀತು: ಇದು ಹರಿದು ಬಂದರೆ ಅದು ಹೀರೀತು. ಮಮತೆಗೆ ಮಹಾಪೂರ ಬಂದು, ಅದು ವಿಶ್ವವನ್ನೆಲ್ಲ ತುಂಬಿ ತುಳುಕಬಹುದು. ಆಗ ವಾತ್ಸಲ್ಯ ಮಮತೆಗಳಲ್ಲಿ ಐಕ್ಯವು ಒಡಮೂಡುವುದು. ಆಗ ಎಲ್ಲೆಲ್ಲಿಯೂ ವಾತ್ಸಲ್ಯ.

—ಜಿನ್ನ.

### ೭. ತನ್ನ ತಾನರಿತರೆ ತನ್ನರಿವೆ ಗುರು.

ತಾನಾರೆಂಬುದನ್ನು ಅರಿಯಲು ತನ್ನ ಜೀವನವನ್ನು ಹತ್ತುಕಡೆಯಿಂದ ನೋಡಿ ಅದರ ಸ್ವರೂಪವನ್ನು ಕಂಡುಹಿಡಿಯಬೇಕು. ತನ್ನನ್ನು ತಾನರಿಯುವದೆಂದರೆ ಅದು ಬರಿಯ ಆತ್ಮವಿಚಾರವಲ್ಲ. ದೇಹದವರೆಗಿನ ವಿಚಾರವೂ ಅಹುದು; ಬರಿಯ ವೇದಾಂತವಿಚಾರವಲ್ಲ, ವ್ಯವಹಾರದ ವರೆಗಿನ ವಿಚಾರವೂ ಅಹುದು; ಬರೀ ವ್ಯಕ್ತಿ ವಿಚಾರವಲ್ಲ, ವಿಶ್ವದ ವರೆಗಿನ ವಿಚಾರವೂ ಅಹುದು. ಇಂಥ ಆತ್ಮಜ್ಞಾನವು ಗುರುವಿನಂತೆ ಅದಾರನ್ನು ಉದ್ಧರಿಸಲಿಕ್ಕಿಲ್ಲ?

—ಬೇಂದ್ರೆ.

## ಅಭ್ಯಾಸ ೬.

ಕೆಳಗಿನ ಅವತರಣಗಳನ್ನು ವಿಸ್ತರಿಸಿ ಬರೆಯಿರಿ.

೧. ಜಗದ ಜಾತ್ರೆಯಲ್ಲಿ ಕಹಿಯಿಲ್ಲದೆ ಬರಿಯ ಸಿಹಿಯೆಲ್ಲಿಯದು ? ೨. ಬೋಧವಿಲ್ಲದೆ ಬೋಧವನ್ನಾರೂ ಸ್ವೀಕರಿಸರು. ೩. ಅರಿಯುವುದರಲ್ಲಿ ಒಂದು ಆನಂದವಿದೆ. ೪. ಬಡಕಾದ ಮೈಯಲ್ಲಿ ಬಡವಾದ ಮನವಿರುವುದು. ೫. ನಾಲಗೆಯು ಹೃದಯದ ಪ್ರತಿನಿಧಿಯಾಗಲಿ. ೬. ನಾಳೆ ಎಂಬವನ ಮನೆ ಹಾಳು. ೭. ರಸಿಕನಾಡಿದ ಮಾತು ಶಶಿಯುದಿಸಿಬಂದಂತೆ. ೮. ಹಂಗಿನಾ ಹಾಲಿನಿಂದಂಬಲಿಯು ತಿಳಿ ಲೇಸು. ೯. ಕಳ್ಳನ ಹೆಜ್ಜೆ ಕಳ್ಳನೇ ಬಲ್ಲ. ೧೦. ಕಂಡುದನು ಆಡೆ ಭೂಮಂಡಲವು ಮುನಿಯುವದು. ೧೧. ಮರೆತು ಧರ್ಮವ ಮಾಡು. ೧೨. ಸ್ವಾನುಭವಿಗಳ ನುಡಿ ಲೇಸು. ೧೩. ಮುನಿದರೆ ನಾರಿಯೆ ಮಾರಿ. ೧೪. ಕೊಟ್ಟು ಕುದಿಯಲಿ ಬೇಡ, ಕೊಟ್ಟಾಡಿಕೊಳ ಬೇಡ. ೧೫. ನಾಲಗೆಯ ಕಟ್ಟಿದವನು ಕಾಲನಿಗೆ ದೂರದನು. ೧೬. ಸತ್ಯರಿಗೆ ಧರೆಯೆಲ್ಲ ಮಸ್ತಕದಿ ಎರಗುವದು. ೧೭. ಪರುಷ ಲೋಹವ ಸೋಂಕಿ ಪರುಷ ಇರಬಲ್ಲದೇ ? ೧೮. ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬಕ್ಕು. ೧೯. ಆಪ್ತರ ವಚನ ಅಧರಕ್ಕೆ ಕಹಿ, ಉದರಕ್ಕೆ ಸಿಹಿ. ೨೦. ಸಾಧಿಪಗೆ ಬಾರದಿಹುದುಂಟೆ ?

## ೪. ಸಾರಸಂಗ್ರಹ.

### ೧. ಅಂದರೇನು ?

ಒಂದು ವಿಸ್ತಾರವಾದ ಅವತರಣದಲ್ಲಿಯ **ಸಾರವನ್ನು, ಮುಖ್ಯಾಂಶವನ್ನು** ಹೀರಿ ಬರೆಯುವುದೇ **ಸಾರಸಂಗ್ರಹವು**. ನುರಿತ ಬರಹಗಾರನು ತನ್ನ ಬರಹದಲ್ಲಿ ಅವತರಣಗಳನ್ನು ಸೇರಿಸಿ, ಉದಾಹರಣೆಗಳನ್ನು ಉಪಯೋಗಿಸಿ, ಸಂಭಾಷಣೆ, ಬಣ್ಣನೆ, ಇತ್ಯಾದಿಗಳನ್ನು ತುಂಬಿ, ಅದರ ಸೌಂದರ್ಯವನ್ನು ಹೆಚ್ಚಿಸುವುದುಂಟು ; ತನ್ನ ಮುಖ್ಯ ವಿಷಯವನ್ನು ರಂಜಕವಾಗುವಂತೆ ಮಾಡುವುದುಂಟು. ಸಂಗ್ರಹಕಾರನು ಅವನ್ನೆಲ್ಲ ಅಲ್ಲಗಳೆದು **ಪ್ರಧಾನ ವಿಷಯ**ವನ್ನಷ್ಟೇ ಎತ್ತಿ ತೋರಿಸುವನು.

### ೨. ಬರೆವುದೇತಕ್ಕೆ ?

(೧) **ಸಾರಸಂಗ್ರಹವು** ಪ್ರಪಂಚದಲ್ಲೆಲ್ಲ ದಿನಂಪ್ರತಿ ನಡೆವ ಸಂಗತಿ. ಹಂಸವು ನೀರನ್ನು ತೊರೆದು ಕ್ಷೀರವನ್ನು ಸೇವಿಸುವುದು. ಒಕ್ಕಲಿಗನು ಜೊಳ್ಳನ್ನು ತೂರಿ ಕಾಳನ್ನು ಕೂಡಹಾಕುವನು. ಈ ಮೇರೆಗೆ ಸಾರವನ್ನು ಹೀರುವ ಶಕ್ತಿಯು ಜ್ಞಾನಪ್ರಪಂಚದಲ್ಲಿಯೂ ಅಷ್ಟೇ ಮಹತ್ವದ್ದುಂಟು. ಅದನ್ನು ಬಲಿಸುವುದು ಅಷ್ಟೇ ಅಗತ್ಯದ್ದು.

(೨) ಈ ಬಗೆಯ ಅಭ್ಯಾಸಕ್ಕೆ ಮನಸ್ಸು ತೀರ ಏಕಾಗ್ರವಾಗಬೇಕಾಗು ವುದು. ಅಂದರೇನೆ ಅದಕ್ಕೆ ವಿಸ್ತಾರವಾದ ಅವತರಣದಲ್ಲಿಯ ರಹಸ್ಯಮಯ ಸಂಗತಿಯು ತಿಳಿಯುವುದು. ಆದುದರಿಂದ ಇದರ ಅಭ್ಯಾಸದ ಫಲವಾಗಿ ಮನಸ್ಸಿನ ಏಕಾಗ್ರತೆಯು ಹೆಚ್ಚುವುದುಂಟು.

(೩) ಈ ಮೇರೆಗೆ ಚಿತ್ತವಿಟ್ಟು ಓದುವ ಕೌಶಲ್ಯವನ್ನು ನೀಡುವು ದಲ್ಲದೆ **ಸಾರಸಂಗ್ರಹವು, ಕಿರಿದರಲ್ಲಿ ಹಿರಿದಾದ ಅರ್ಥವನ್ನು** ಉಸುರಲು ಕಲಿಸುವುದು. ಇದರ ಅಭ್ಯಾಸವು ಚೆನ್ನಾಗಿ ಆಯಿತೆಂದರೆ ನಮಗೆ ತಿಳಿ ಯಾಗಿಯೂ ಸಂಕ್ಷೇಪವಾಗಿಯೂ ಬರೆಯಲು ಬರುವುದು.

(೪) ಓದಿದ್ದನ್ನೂ ಕೇಳಿದ್ದನ್ನೂ ತ್ವರಿತವಾಗಿಯೂ ಸ್ಪಷ್ಟವಾಗಿಯೂ ಅರಿತುಕೊಂಡು, ಅದನ್ನು ತಿಳಿಯಾಗಿಯೂ ಸಂಗ್ರಹವಾಗಿಯೂ ಬರೆಯುವ ಶಕ್ತಿಯು ಪ್ರತಿಯೊಬ್ಬನಿಗೂ ಬೇಕು. ಆದುದರಿಂದ ಈ ವಿಷಯವನ್ನು ಚಿತ್ತವಿಟ್ಟು ಅಭ್ಯಸಿಸುವುದು ಪ್ರತಿಯೊಬ್ಬನ ಕರ್ತವ್ಯ.

**೩. ಹೇಗೆ? :—**

## (ಅ) ಪೂರ್ವಸಿದ್ಧತೆ

(೧) **ಓದುವುದು**—ಕೊಟ್ಟ ಅವತರಣವನ್ನು ಮೊದಲು ಒಳ್ಳೆಯ **ದಕ್ಷತೆಯಿಂದಲೂ ಸೂಕ್ಷ್ಮತೆಯಿಂದಲೂ** ಕೊನೆಯವರೆಗೆ ಓದಬೇಕು. ಒಮ್ಮೆ ಓದುವುದರಿಂದ ಅದರ ಅಭಿಪ್ರಾಯವು ಸ್ಪಷ್ಟವಾಗಿ ತಿಳಿಯದಿದ್ದರೆ ಅದನ್ನು ಎರಡು ಮೂರು ಸಲ ಓದಬೇಕು.

(೨) ಅದರಲ್ಲಿಯ ಮುಖ್ಯ ವಿಷಯವನ್ನರಿಯಬೇಕು. ಮತ್ತು ಅದ ನ್ನನುಲಕ್ಷಿಸಿ ಆ ಅವತರಣಕ್ಕೆ ಒಂದು ಹೆಸರನ್ನು ಕೊಡಬೇಕು.

(೩) ತರುವಾಯ ಪ್ರತಿಯೊಂದು ವಿವರವನ್ನು ಅಭ್ಯಸಿಸಬೇಕು. ಅದರಲ್ಲಿ ಪ್ರತಿಯೊಂದು ಶಬ್ದದ ಅರ್ಥವನ್ನೂ ವಾಕ್ಯದ ಆಶಯವನ್ನೂ ಅರಿ ಯಲು ಯತ್ನಿಸತಕ್ಕದ್ದು.

(೪) ಜೊಳ್ಳಿನಿಂದ ಕಾಳನ್ನು ಬೇರೆ ಮಾಡಿ ಪ್ರಧಾನಾಂಶಗಳ ಟಿಪ್ಪಣಿ ಯೊಂದನ್ನು ಮಾಡಬೇಕು. ಸ್ವಲ್ಪ ಹೆಚ್ಚು ಟಿಪ್ಪಣಿಗಳನ್ನು ಮಾಡುವುದು ಒಳಿತು.

(೫) ಇನ್ನೊಮ್ಮೆ ಅವತರಣವನ್ನೋದಿ, ಅದರಲ್ಲಿಯ ಮುಖ್ಯಾಂಶ ವೇನಾದರೂ ಉಳಿದಿದೆಯೋ ಹೇಗೆಂಬುವನ್ನು ನೋಡಿಕೊಳ್ಳಬೇಕು.

## (ಅ) ಪ್ರತ್ಯಕ್ಷ ಬರಹ.

(೧) ಇಷ್ಟು ಸಿದ್ಧತೆಯಾದ ತರುವಾಯ, ಟಿಪ್ಪಣಿಗಳನ್ನುಪಯೋಗಿಸಿ ಒಂದು ಕರಡು ಪ್ರತಿಯನ್ನು ಬರೆಯಬೇಕು. ಅದನ್ನು ಸ್ಪಷ್ಟವಾದ ಪೂರ್ಣ ವಾಕ್ಯಗಳಲ್ಲಿ ಬರೆಯತಕ್ಕದ್ದು.

(೨) ವಿಚಾರವು ಮೂಲದಲ್ಲಿಯದಿರಲಿ! ಭಾಷೆಯು ನಿಮ್ಮದಿರಲಿ! ಮೂಲದಲ್ಲಿಯ ಶಬ್ದಗಳನ್ನೂ ಶಬ್ದ ಸಮೂಹವನ್ನೂ ಆದಷ್ಟು ಉಪಯೋಗಿಸದಿರುವುದು ಒಳಿತು. ಅದರಲ್ಲಿ ನಿಮ್ಮ ಸ್ವಂತ ಟೀಕೆ-ಟಿಪ್ಪಣಿಗಳನ್ನು ಸೇರಿಸಕೂಡದು.

(೩) ಸಾರಾಂಶವು **ಸುಸಂಬದ್ಧವೂ ಸ್ವಯಂಪೂರ್ಣವೂ** ಆಗಿರಬೇಕು. ಅದನ್ನೋದಿದೊಡನೆ ಬರಹಗಾರನ ಭಾವವು ತಿಳಿಯುವಂತಿರಬೇಕು. ಅದಕ್ಕಾಗಿ ಮೂಲವನ್ನೋದುವ ಅವಶ್ಯಕತೆಯು ಬೀಳಬಾರದು.

(೪) ಭಾಷೆಯು ಶುದ್ಧವಾದುದಿರಲಿ-ಸುಲಭವಾದುದಿರಲಿ-ಸ್ಪಷ್ಟವಾದುದಿರಲಿ. ಅದನ್ನಾವಾಗಲೂ **ಪರೋಕ್ಷಕಥನದಲ್ಲಿಯೂ** (Indirect Speech) **ಭೂತಕಾಲದಲ್ಲಿಯೂ** ಬರೆಯುವ ರೂಢಿಯುಂಟು.

(೫) **ಪುನರ್ನಿರೀಕ್ಷಣವಾಗಲಿ!** (Revise) ಇನ್ನೊಮ್ಮೆ ನೋಡುವುದಾಗಲಿ! ಮೂಲದೊಡನೆ ಸರಿಹೋಲಿಸಿ ಸಂಗ್ರಹದಲ್ಲಿಯ ಚಿಕ್ಕ ಪುಟ್ಟ ದೋಷಗಳನ್ನು ತಿದ್ದಬೇಕು. ಅದರಲ್ಲಿ ಶಬ್ದಗಳನ್ನೆಣಿಸಿ ಅದು ಮೂಲದ ಮೂರರಲ್ಲಿಯ ಒಂದರಷ್ಟು ಆಗಿರುವುದೋ ಹೇಗೆಂಬುವನ್ನು ನೋಡಬೇಕು. ಕಡಿಮೆಯಾಗಿದ್ದರೆ ಬೆಳಸಿ, ಹೆಚ್ಚಾಗಿದ್ದರೆ ಅಳಿಸಿ, ಕಡಿಮೆ ಮಾಡಿ, ಅದಕ್ಕೆ ಸರಿಯಾದ ರೂಪವನ್ನು ಕೊಡಬೇಕು.

(೬) ಕೊನೆಗೆ ಶುದ್ಧ ಪ್ರತಿಯನ್ನು ತಯಾರಿಸಬೇಕು.

**೪. ಮಾದರಿಗಳು :—**

## ೧. ನಮ್ಮ ಅಧೋಗತಿ.

ನಾವು ದಿನಕ್ಕೊಂದು ಚೆಂದದಂತೆ ನಮ್ಮ ಗಂಡಸುತನವನ್ನು ಕಳಕೊಳ್ಳಹತ್ತಿರುವೆವೆಂಬುವದರಲ್ಲಿ ಅತಿಶಯೋಕ್ತಿಯೇನೂ ಇಲ್ಲ. ಈ ಅಧೋಗತಿಯನ್ನು ನಾವು ತಡೆಯದಿದ್ದರೆ ದೇಶದ ಅತ್ಯಂತ ನಾಶವಾಗುವುದರಲ್ಲಿ ಸಂದೇಹವಿಲ್ಲ. ಅದು ಈಗಾಗಲೇ ನಮ್ಮ ರಾಷ್ಟ್ರಜೀವನದ ತಿರುಳನ್ನು ತುಂಡರಿಸಹತ್ತಿದೆ. ನಮ್ಮ ದೇಶಬಾಂಧವರ ಆರೋಗ್ಯ ಸ್ಥಿತಿಯನ್ನು ನಿರೀಕ್ಷಿ

ನೋಡಿದರೆ ನಮಗೇನು ತೋರುತ್ತದೆ? ಬಹು ಜನರು ಅಶಕ್ತರೂ, ಅಗ್ನಿಮಾಂದ್ಯ, ದೃಷ್ಟಿಮಾಂದ್ಯ, ಬಹುಮೂತ್ರ, ಉಪದಂಶ ಮುಂತಾದ ರೋಗರಚನೆಗಳಿಂದ ಪೀಡಿತರೂ ಆಗಿರುವರು. ಪ್ರತಿಯೊಂದು ಕುಟುಂಬದವರೂ ವೈದ್ಯ-ಡಾಕ್ಟರುಗಳಿಗೆ ತೆರುವ ಹಣವೇ ಇದಕ್ಕೆ ಸಾಕ್ಷಿ. ರೋಗಿಗಳ ಇಮ್ಮಡಿ ವೈದ್ಯರುಗಳ ಸಂಖ್ಯೆಯು ಬೆಳೆಯುತ್ತಿದೆ. ಎಲ್ಲ ದೇಶಗಳಿಗಿಂತಲೂ ಔಷಧಕ್ಕಾಗಿ ನಾವೇ ಹೆಚ್ಚು ಹಣವನ್ನು ಸೂರೆಗೈಯುವೆವಂತೆ! ನಾನಾ ಜನಾಂಗಗಳ ವ್ಯಕ್ತಿಗಳ ಜೀವನಸಮಯವನ್ನು ಸರಿಹೋಲಿಸಿದರೆ ನಾವು ಬದುಕುವ ವೇಳೆಯು ತೀರ ಕಡಿಮೆ. ನಮ್ಮ ನಿಲುವಿಕೆ, ಎತ್ತರ, ಮೈಕಟ್ಟು ಮುಂತಾದವುಗಳನ್ನು ನೋಡಿ ವಿದೇಶೀಯರು ನಗಬೇಕಾಗಿದೆ. ನಮ್ಮ ಹಿರಿಯರು ಬಂಗಾರವನ್ನು ತಿಂದು ಕರಗಿಸುತ್ತಿದ್ದರಂತೆ. ಉಕ್ಕಿನ ಹರವಾದ ಎದೆಯವರೂ, ಕಬ್ಬಿಣದಂಥ ಮೈಕಟ್ಟಿನವರೂ ಕ್ಷಾತ್ರತೇಜವುಳ್ಳವರೂ ಆದ ನಮ್ಮ ಪೂರ್ವಜರೆತ್ತ! ಕಣ್ಣು ಗುಡ್ಡೆಗಳು ಒಳಗೆ ಸೇರಿ, ಜೋಲು ಮೋರೆಯಿಂದ ನಿರ್ಬಲರಾಗಿರುವ ಪೋಟು ಮರಗಳಾದ ನಾವೆತ್ತ!! ತೆಕ್ಕೆಯಿಂದ (ದಿಂಬು) ಗಾದಿಗೂ ಗಾದಿಯಿಂದ ಒರಗುವ ಖುರ್ಚಿಗೂ ಹೊಂದಿ ಬೀಳುವ ನಾವು, ರಬರುಬತ್ತ ಕಡಲೆಯ ಗಿಡಕ್ಕೆ ನಿಚ್ಚಣಿಕೆಯನ್ನು ಹಚ್ಚುವುದರಲ್ಲಿ ಸಂದೇಹವಿಲ್ಲ. ನಡುಹರೆಯದ ಒಬ್ಬ ಹುಡುಗನ ಗಲ್ಲವನ್ನು ಹಿಂಡಿದರೆ ಕೈಯಲ್ಲಿ ಬರುವುದು ನೀರು, ನೆತ್ತರವಲ್ಲ! **ಎಳೆತನದಲ್ಲಿಯೇ ಹಳೆತನದ ಎಲ್ಲ ಲಕ್ಷಣಗಳೂ ಕಂಡುಬರುತ್ತಿವೆ.** ಆದರೆ ಈ ಸ್ಥಿತಿಗೆ ಅಪವಾದವೂ ಇದೆ. ನಮ್ಮಲ್ಲಿ ಪ್ರಪಂಚದ ಅತೀವ ಪ್ರಚಂಡಬಾಹುಗಳನ್ನು ಸಹ ಸರಿಹೋಲುವ, ಕಿಂಬಹುನಾ, ಒಂದು ತೂಕ ಮೇಲಾಗಿರುವ ಶೂರಧೀರರೂ ಇನ್ನೂ ನಮೂನೆಗೆಂದು ಕೆಲವರು ಇರುವರು. ಭಾರತೀಯರು ಇವರ ಬಗ್ಗೆ ಅತ್ಯಂತ ಅಭಿಮಾನ ತಾಳಬೇಕಾಗಿದೆ.

—ತಾರಾನಾಥ.

**ಮುಖ್ಯಾಂಶಗಳು :—**

ನಮ್ಮ ಶಾರೀರಿಕ ಅವನತಿ—ರೋಗಗಳ ವೈಪುಲ್ಯ—ಆಯುರ್ಮರ್ಯಾದೆಯು ಕಡಿಮೆಯಾದುದು—ಅಂದಿನವರಲ್ಲಿ ಇಂದಿನವರಲ್ಲಿ ಅಜಗಜಾಂತರ—ನಮ್ಮ ವಿಲಾಸ ಜೀವನ—ತಾರುಣ್ಯದಲ್ಲಿ ವಾರ್ಧಕ್ಯದ ಕುರುಹುಗಳು—ಕೆಲವು ಅಪವಾದಗಳು.

**ಸಾರಸಂಗ್ರಹ :-**

## ನಮ್ಮ ಶಾರೀರಿಕ ಅವನತಿ.

ದಿನದಿನಕ್ಕೆ ಹೆಚ್ಚುತ್ತಿರುವ ನಮ್ಮ ಶಾರೀರಿಕ ದೌರ್ಬಲ್ಯವು ತೀರ ಶೋಚನೀಯವಾದುದು. ಬಲಶಾಲಿಗಳಾದ ನಮ್ಮ ಪೂರ್ವಜರೆತ್ತ ? ಬಲ ಹೀನರಾದ ನಾವೆತ್ತ ? ನಮ್ಮ ವಿಲಾಸ ಜೀವನವು ನಮ್ಮಲ್ಲಿಯ ಸತ್ವವನ್ನೆಲ್ಲ ಹೀರಿ, ನಮ್ಮನ್ನು ಸಾವಿರ ರೋಗಗಳ ತವರೂರನ್ನಾಗಿ ಮಾಡಿರುವುದು. ಅದರಿಂದ ನಮ್ಮ ನಿಲುವಿಕೆ—ಆಯುರ್ಮರ್ಯಾದೆ ಇತ್ಯಾದಿಗಳು ಕಡಿಮೆ ಯಾಗಿ ನಾವು ಎಲ್ಲ ಜನಾಂಗಗಳ ನಗೆಗೆ ಈಡಾಗಿರುವೆವು. ನಮ್ಮ ತರು ಣರು ವಾರ್ಧಕ್ಯದ ಕುರುಹುಗಳಿಂದ ಕೂಡಿದವರಾಗಿರುವರು. ಇದಕ್ಕೆ ಕೆಲವು ಅಪವಾದಗಳೂ ಇಲ್ಲವೆಂದಲ್ಲ. ಆದರೂ ಅದರಿಂದ ನಮ್ಮ ಅಧೋಗತಿಯು ತೀವ್ರತೆಯೇನೂ ಇಲ್ಲದಂತಾಗುವುದಿಲ್ಲ. ಆದುದರಿಂದ ಅದನ್ನು ಬೇಗನೆ ತಡೆಯದಿದ್ದರೆ ನಮ್ಮ ನಾಡು ಹಾಳಾಗದಿರದು.

**ಸೂಚನೆ :**—ಮೂಲ ಅವತರಣದಲ್ಲಿ ಸುಮಾರು ೧೬೦ ಶಬ್ದಗಳಿವೆ. ಮೇಲಿನ ಸಾರಾಂಶವು ೫೫ ಶಬ್ದಗಳುಳ್ಳದ್ದಾಗಿದೆ. ಆದುದರಿಂದ ಇದು ಸುಮಾರಾಗಿ ಮೂಲದ ಒಂದು ಮೂರಾಂಶದಷ್ಟು ಆಗಿರುವುದು.

## ೨. ಸಮಾಜದ ಕಟ್ಟು.

ಸಮಾಜದ ಕಟ್ಟುಕಟ್ಟಳೆಗಳು ಗಾಯನ ವಾದ್ಯಗಳ ಕಟ್ಟುಗಳಿದ್ದಂತಿರ ಬೇಕು. ಸಾಮಾಜಿಕ ಬಂಧನವು ಮುಕ್ತಿಯ ಮೂಲಕಾರಣವಾಗಿರಬೇಕು, ಅಲ್ಲದೆ ಪ್ರಗತಿಯನ್ನು ನೆಲಕ್ಕೆ ಒತ್ತಿ ಮಾನವನನ್ನು ನಿರ್ಜೀವ ಯಂತ್ರವಾಗಿ ಹಾಳು ಮಾಡುವದಕ್ಕಲ್ಲ. ವೀಣೆಗೇರಿಸಿದ ತಂತಿಗಳು ಬಂಧನದಲ್ಲಿವೆ. ಆ ಬಂಧನದಿಂದ ಅನೇಕ ರಾಗ-ರಾಗಿಣಿಗಳಿಗೆ ಜನ್ಮ ಕೊಟ್ಟು, ಪರರನ್ನು ಆನಂದ ಸಾಗರದಲ್ಲಿ ಮುಳುಗಿಸಿ, ತಾವೂ ಕೀರ್ತಿಯನ್ನು ಪಡೆಯುತ್ತವೆ. ಬಂಧನ ದಿಂದಲೇ ರಸಭರಿತವಾದ, ಆಹ್ಲಾದಕರವಾದ ರಾಗಗಳನ್ನುತ್ಪಾದಿಸುವ ಸ್ವಾತಂತ್ರ್ಯವು ಬಂದಿತಲ್ಲವೇ ? ಸಾಮಾಜಿಕ ಬಂಧನವೂ ಹೀಗೆ ಪ್ರಗತಿಗೆ ಉತ್ತೇಜನವನ್ನು ಕೊಡುವಂಥದಾಗಿರಬೇಕು. ವೀಣೆಯ ತಂತಿಗಳಂತೆ, ವ್ಯಕ್ತಿಯ ಪ್ರಗತಿಯನ್ನೂ, ಸಮಾಜದ ಸುಖವನ್ನೂ ಬೆಳೆಸುವಂಥವೇ ಶಾಸ್ತ್ರೋಕ್ತ ಬಂಧನ. ಇದ್ದಂತಿರುವದು ಯಂತ್ರಜೀವನ; ಪ್ರಾಣಿಜೀವನ

ವಲ್ಲಿ. ಪರಿಸ್ಥಿತಿಯನ್ನು ಪಳಗಿಸಲು ಯತ್ನಿಸುವದೇ ಪ್ರಾಣಿಸ್ವಭಾವ: '**ಮುಂದೆ, ಇನ್ನೂ ಮುಂದೆ**' ಎಂಬುದೇ ಅಹೋರಾತ್ರಿ ಪ್ರಾಣಿಗಳೆಲ್ಲಾ ಗುವ ಆಕಾಶವಾಣಿ........ನಮ್ಮಲ್ಲಿಯ ಪ್ರತಿಯೊಂದು ವ್ಯಕ್ತಿಗೂ ಪ್ರಫುಲ್ಲಿತ ವಾಗಿ ಅರಳಲಿಕ್ಕೆ ಯಾವಾಗ ಸಮಾಜದಲ್ಲಿ ಪ್ರೋತ್ಸಾಹವಿಲ್ಲದಿದ್ದರೂ, ನಂದ ರ್ಭಮಾತ್ರವಾದರೂ ದೊರೆಯುವದೋ, ಆ ದಿನವೇ ನಮ್ಮ ಸಮಾಜವು ಅಜಿಂಕ್ಯವಾಗುವದು: ಆ ಹೊತ್ತೇ ಜ್ಞಾನಭಾಸ್ಕರನು ತನ್ನ ಪ್ರೇಮದ ಕಿರಣ ಗಳನ್ನು ಸುರಿಸುವನು. ಉಷಾದೇವಿಯು ತನ್ನ ಅನೇಕ ರೂಪವರ್ಣಗಳ ಸುಂದರ ಮತ್ತು ಲಲಿತ ರೂಪಗಳನ್ನು ತೋರಿಸುವಳು. ಅಂದೇ ನಿಸರ್ಗ ದೇವತೆಯು ತನ್ನ ಸುಂದರ ಬಾಳೆಯಾದ ಪುಷ್ಪಪಲ್ಲವಗಳ ನರ್ತನದೊಡನೆ ಅನುಪಮ ಗಂಧರ್ವ ಗಾನವನ್ನು ಮಾಡುವಳು.

—ತಾರಾನಾಥ.

**ಮುಖ್ಯಾಂಶಗಳು :**

ಸಮಾಜದ ಬಂಧನ—ವೀಣೆಯ ಬಂಧನದಂತೆ—ಪ್ರಗತಿಗೆ ಸಾಧಕವಿರ ಬೇಕು; ಬಾಧಕವಿರಬಾರದು. ಅಂದರೇನೇ ಸಮಾಜದ ಏಳ್ಗೆ.

**ಸಾರಸಂಗ್ರಹ :—**

## ಸಮಾಜದ ಬಂಧನವು.

ಸಮಾಜದ ಬಂಧನವು ವೀಣೆಯ ಬಂಧನದಂತೆ ಪ್ರಗತಿಪೋಷಕವಾದು ದಿರಬೇಕು. ವೀಣೆಯು ಬಂಧನದಲ್ಲಿದ್ದು ತನ್ನ ತಂತಿಗಳಿಂದ ರಸಭರಿತ ಸಂಗೀತವನ್ನು ಹುಟ್ಟಿಸುವಂತೆ ಸಮಾಜವು ವ್ಯಕ್ತಿಗಳಿಗೆ ಚೆನ್ನಾಗಿ ಬೆಳೆಯಲು ಅವಕಾಶ ಕೊಟ್ಟು ಅವರಿಂದ ತನ್ನ ಕಲ್ಯಾಣವನ್ನು ಸಾಧಿಸಿಕೊಳ್ಳಬೇಕು. ಬಿಡುಗಡೆಯೇ ಬಂಧನದ ಗುರಿಯಾಗಬೇಕು. ಅಂದೇ ಸಮಾಜವು ಬಲಶಾಲಿ ಯಾಗುವದು.

## ೩. ಕವಿತೆಯ ಹೃದಯ.

ತನ್ನಲ್ಲಿ ತಾನು ಕಂಡುದನ್ನು ಇತರರು ಕಾಣುವಂತೆ ನೋಟವನ್ನು ಕೊಡುವ, ತಾನು ಅನುಭವಿಸಿದುದನ್ನು ಉಳಿದವರು ಅನುಭವಿಸುವಂತೆ ಭಾವಗಳನ್ನಲ್ಲಾಡಿಸುವ ಮಾತುಗಳ ಹೆಣಿಕೆಯೇ ನಿಜವಾದ ಕವಿತೆ. ಅಂತಹ ಹೆಣಿಕೆಗಾರನೇ ಬಲ್ಲಿದನಾದ ಕಬ್ಬಿಗನು. ನಿಜವಾದ ಕವಿತೆಗೆ ವ್ಯಾಕರಣ ಸೂತ್ರಗಳಿಂದ ಬಿಗಿದು ಬಿಗಿದು ಕಟ್ಟಿದ ಭಾಷೆಯೇ ಇರಬೇಕಾದ ಕಾರಣವಿಲ್ಲ.

ನಾವು ಮಾತನಾಡುವ ನಿತ್ಯದ ವ್ಯವಹಾರದ ಭಾಷೆಯನ್ನೇ ಅರ್ಥದ ಔಚಿತ್ಯವನ್ನರಿತು, ನಾದದ ಮಾಧುರ್ಯವನ್ನು ತಿಳಿದು ಉಪಯೋಗಿಸಿದರೂ ಸಾಕು. ಅರ್ಥಾಲಂಕಾರದ ತೊಡಕು ಬಲೆಗಳೂ, ಶಬ್ದಾಲಂಕಾರದ ಬಯಲು ಬೆಡಗೂ ಇರಲೇ ಬೇಕೆಂಬ ನಿಯಮವಿಲ್ಲ. ಹೇಳಬೇಕಾಗಿದ್ದ ವಿಷಯವು ಮನದಲ್ಲಿ ಮೂಡಿ, ಬುದ್ಧಿಯಲ್ಲಿ ಬಳೆದು, ಹೃದಯವನ್ನು ಸಿಲುಕಿ, ತಲೆಯನ್ನು ತೂಗಿಸಿದರೆ ಕೆಲಸವಾಯಿತು. ಕೃತ್ರಿಮಗಳೆಂದು ಕಂಡುಬರುವ ಕವಿಸಮಯವೂ, ಕಾವ್ಯ ಸಂಪ್ರದಾಯಗಳ ಬಡಿವಾರದ ಬಣ್ಣನೆಯೂ, ಅಷ್ಟೊಂದು ಅವಶ್ಯಕವಾದುದಿಲ್ಲ. ಅಕೃತ್ರಿಮವಾದ ರೀತಿಯಿಂದ ರಸಾನುಭವವನ್ನುಂಟುಮಾಡುವ ಸ್ವಾಭಾವಿಕ ವರ್ಣನೆಯಿದ್ದರೂ ಸಾಕು. ಛಂದಃಶಾಸ್ತ್ರದ ಬಂಧನಕ್ಕೆ ಸಿಲುಕಿದ ನಿಯಮಿತ ವೃತ್ತಗಳೇ ಇರಬೇಕೆಂಬುವದರ ನಿರ್ಬಂಧವಿಲ್ಲ. ಭಾವಕ್ಕೆ ಅನುಗುಣವಾದ ಪದವಿನ್ಯಾಸವಿದ್ದು, ಕಿವಿಗೆ ಸವಿಯಾಗಿರುವ ಎಂತಹ ಪದ್ಯಗಳಿಂದಲೂ ಕೆಲಸವನ್ನು ನಡೆಯಿಸಬಹುದು.

—ಆನಂದಕಂದ.

**ಮುಖ್ಯಾಂಶಗಳು :—**

ಎದೆ ತಟ್ಟುವಂತೆ ಉಸುರಿದ ಅನುಭವದ ಮಾತುಗಳೆ ಕವಿತೆ—ವ್ಯಾಕರಣ—ಛಂದಸ್ಸು—ಅಲಂಕಾರ—ಕವಿಸಮಯಗಳ ಕೃತ್ರಿಮ ಬಂಧನವು ಅನವಶ್ಯಕ—ಅರ್ಥಪೂರ್ಣತೆ, ನಾದಮಾಧುರ್ಯ, ಭಾವಕ್ಕೆ ತಕ್ಕ ಸಹಜ ಭಾಷೆ ಸಾಕು.

**ಸಾರಸಂಗ್ರಹ :**

## ನಿಜವಾದ ಕವಿತೆಯ ತಿರುಳು.

ತಾನು ಅನುಭವಿಸಿದುದನ್ನು ಅನ್ಯರ ಎದೆಯನ್ನಲ್ಲಾಡಿಸುವಂತೆ ಉಸುರುವುದೇ ನಿಜವಾದ ಕವಿತೆಯ ಕೆಲಸ. ಅದಕ್ಕೆ ವ್ಯಾಕರಣ, ಛಂದಸ್ಸು, ಅಲಂಕಾರ, ಕವಿಸಮಯಗಳ ಕೃತ್ರಿಮ ಬಂಧನಗಳ ಅವಶ್ಯಕತೆಯಿಲ್ಲ. ಕವಿಯು ತನ್ನ ಮನಸ್ಸಿನಲ್ಲಿ ಮೂಡಿದ ಭಾವಗಳನ್ನು ಸಹಜವಾಗಿ ನಿತ್ಯದ ವ್ಯವಹಾರದ ಭಾಷೆಯಲ್ಲುಸುರಿದರೂ ನಡೆಯಬಹುದು. ಮಾತ್ರ ಅದು ಅರ್ಥಪೂರ್ಣವಾದುದೂ ನಾದಮಧುರವಾದುದೂ ಇದ್ದರೆ ಸಾಕು.

**ಸೂಚನೆ:**—ಮೂಲದಲ್ಲಿಯ ೯೩ ಶಬ್ದಗಳ ಸಾರವನ್ನು ಇಲ್ಲಿ ೩೩ ಶಬ್ದಗಳಲ್ಲಿ ಉಸುರಲು ಯತ್ನಮಾಡಿದೆ. ಆದುದರಿಂದ ಇದು ಸುಮಾರಾಗಿ ಮೂಲದ ಒಂದು ಮೂರಾಂಶದಷ್ಟು ಆಗಿರುವುದು.

## ೪. ತ್ಯಾಗದಲ್ಲಿ ಭೋಗ

ಆಕರ್ಷಣವು ಯಾವಾಗಲೂ ಇರಬೇಕಾದರೆ ಪರಸ್ಪರ ತ್ಯಾಗವು ಬೇಕು. ತ್ಯಾಗವಿಲ್ಲದ ಭೋಗವು ಶಾಶ್ವತವಲ್ಲ. ಸಂಪೂರ್ಣ ತ್ಯಾಗವೇ ಸಂಪೂರ್ಣ ಭೋಗ !

ತ್ಯಾಗವು ಭೋಗಕ್ಕೆ ಅನುಕೂಲವಾಗುತ್ತದೆ ಎಂಬುದು ಗಿಡಮರಗಳನ್ನು ಪರಿಶೀಲಿಸಿ ನೋಡಿದರೆ ತಿಳಿಯುವದು. ಬೀಜವು ತನ್ನ ರೂಪವನ್ನು ಮಣ್ಣಿನಲ್ಲಿ ನಾಶಮಾಡಿಕೊಳ್ಳದೆ ಅಂಕುರಿಸುವದಿಲ್ಲ. ಕೆಳಗೆ ಬೇರು ಬಿಟ್ಟು ಎರಡೆಲೆಗಳು ಮೇಲಕ್ಕೆ ಬಂದೊಡನೆಯೇ ಬೇರುಗಳು ಹೀರಿದ ನೀರಲ್ಲಿ ಸ್ವಲ್ಪವನ್ನು ಎಲೆಗಳು ತಮ್ಮ ಸೂಕ್ಷ್ಮ ರಂಧ್ರಗಳಿಂದ ಹೊರಗೆ ಹಾಕಬೇಕು. ಇಂಥ ತ್ಯಾಗವನ್ನು ಮಾಡದೆ ನೀರನ್ನೆಲ್ಲ ತಾನೇ ಇಟ್ಟುಕೊಳ್ಳುತ್ತೇನೆಂದರೆ ಗಿಡವು ಕೊಳೆಯುವದು. ಆದರೆ ಈ ಎಲೆಗಳಿಂದ ಗಿಡಕ್ಕೇನೂ ಉಪಯೋಗವಿಲ್ಲವೋ ಎಂದು ಕೇಳಬಹುದು. ಎಲೆಗಳು ಗಿಡಕ್ಕೆ ಭೂಷಣವಾಗಿರುವದು ಮಾತ್ರವಲ್ಲದೆ, ಗಾಳಿಯಿಂದ ಇಡೀ ಗಿಡಕ್ಕೆ ಬೇಕಾದ ಅಂಶವನ್ನು ಹೀರಿಕೊಂಡು ಮೇಲಿಂದ ಬುಡದವರೆಗೆ ಪ್ರಾಣವಾಯುವನ್ನೇ ಊದುವವು. ಇದರಿಂದ ಗಿಡದ ಜೀವನಕ್ಕೆ ಈ ಎಲೆಗಳ ತ್ಯಾಗವು ಮುಖ್ಯವಾಗಿದೆ ಎಂದು ಸಿದ್ಧವಾಗುವದಿಲ್ಲವೇ ?

ಪ್ರಗತಿಯ ಒಂದು ಮೆಟ್ಟಲನ್ನೇರಿ ನೋಡೋಣ. ಪಶುಪಕ್ಷಿಗಳು ಅಲ್ಲಿ ಕಂಡುಬರುತ್ತವೆ. ಪಶುಗಳು ಎರಡು ವಿಧವಾಗಿವೆ. ಮಾಂಸಾಹಾರಿ ಮತ್ತು ಸಸ್ಯಾಹಾರಿ. ಮಾಂಸಾಹಾರಿ ಪ್ರಾಣಿಗಳಲ್ಲಿ ತ್ಯಾಗವು ಕಡಿಮೆ. ಇದರಿಂದ “ಕುಲಕ್ಕೆ ಕುಲ ವೈರಿ” ಎಂಬಂತೆ ಅವು ಒಕ್ಕಟ್ಟಾಗಿರುವದಿಲ್ಲ. ಒಂದನ್ನು ಕಂಡರೆ ಇನ್ನೊಂದಕ್ಕೆ ಹೊಟ್ಟೇಕಿಚ್ಚು. ಹತ್ತಿರ ಬಂದರೆ ಎರಡೂ ಕಾದಾಡಿ ಪ್ರಾಣಕ್ಕೆ ಹಾನಿಯಾಗುವದೂ ಉಂಟು. ಒಂದೊಂದು ಪ್ರಾಣಿಗೆ ಒಂದೊಂದು ಗವಿ. ಹತ್ತಿರವಿದ್ದರೆ ಅದರ ಜೋಡಿ ಒಂದೇ ! ಸಾಮಾಜಿಕ ಬುದ್ಧಿ ಅವುಗಳಲ್ಲಿ ಕಂಡುಬರುವದಿಲ್ಲ. ಅವುಗಳಿಂದ ಇತರ ಪ್ರಾಣಿಗಳಿಗೆ ಹಾನಿಯೇ ಹೊರತು ಉಪಕಾರವಿಲ್ಲ. ಅದರಿಂದ ಅವುಗಳಿಗೂ ಬರಬರುತ್ತ ಹಾನಿಯೇ ಆಗುತ್ತದೆ. ಶೂರ ವೀರರ ಸತ್ವಪರೀಕ್ಷೆ ಅವುಗಳ ಸಂಹಾರವೇ ! ಈ ಪ್ರಕಾರ ಸ್ವಾರ್ಥದಿಂದ ಇತರರನ್ನು ಕೆಡಿಸಿ ತಾವೂ ಕೆಡುವವು. ಆದರೆ ಸಸ್ಯಾಹಾರಿ ಪ್ರಾಣಿಗಳು ಹಾಗಲ್ಲ. ಅವು ಯಾವಾಗಲೂ ಗುಂಪುಗುಂಪಾಗಿ

ಇರುತ್ತವೆ. ಸ್ವಜಾತೀಯ ಪ್ರಾಣಿಗಳಿಗಾಗಿ ಅವು ಎಷ್ಟೋ ಸುಖತ್ಯಾಗವನ್ನು ಮಾಡುತ್ತವೆ. ಹಿಂಡಿನಲ್ಲಿ ಯಾವುದಾದರೂ ಒಂದು ದನಕ್ಕೆ ಪ್ರಸವವೇದನೆಯಾದರೆ, ಇಡೀ ಹಿಂಡು ಆ ದನವನ್ನು ಎಷ್ಟು ಜಾಗರೂಕತೆಯಿಂದ ಆರೈಕೆ ಮಾಡುತ್ತದೆಂಬುದು ನೋಡಿದವನಿಗೆ ತಿಳಿದ ಮಾತೇ ಆಗಿದೆ. ಕಾಡಿನಲ್ಲಿರುವ ಜಿಂಕೆಗಳು ಮಲಗಿರುವಾಗ ಅವುಗಳಲ್ಲೊಂದು ಜಿಂಕೆಯು ಕಾವಲಾಗಿರುತ್ತದೆ. ಸಮಾಜಕ್ಕಾಗಿ ಮಾಡುವ ಸ್ವಾರ್ಥತ್ಯಾಗವನ್ನು ಈ ಜಾತಿಯಲ್ಲಿಷ್ಟೋ ನೋಡಬಹುದು. ಈ ತ್ಯಾಗದಿಂದ ಅವುಗಳ ಸಂರಕ್ಷಣೆಯೂ ಅಭಿವೃದ್ಧಿಯೂ ಆಗುತ್ತಿರುವದು.

—ತಾರಾನಾಥ.

**ಮುಖ್ಯಾಂಶಗಳು :**

ತ್ಯಾಗವಿದ್ದಷ್ಟು ಭೋಗ—ಗಿಡಮರಗಳು, ಹಿಂಸ್ರ ಪಶುಗಳು, ಸಾಧು ಪಶುಗಳು ಇವುಗಳ ಜೀವನವು ಇದಕ್ಕೆ ಸಾಕ್ಷಿ.

**ಸಾರಸಂಗ್ರಹ :—**

## ತ್ಯಾಗದಲ್ಲಿ ಭೋಗ

ನಾವು ಕೊಟ್ಟಷ್ಟು ನಮಗೆ ದೊರೆಯುವುದೆಂಬುದು ಸನಾತನ ತತ್ವ. ಇದು ಎಲ್ಲ ಕ್ಷೇತ್ರಗಳಲ್ಲಿ ನಿಜವಾದುದು. ವನಸ್ಪತಿಗಳನ್ನು ನೋಡಿ! ಬೀಜವು ಮಣ್ಣಿನಲ್ಲಿ ತನ್ನನ್ನು ಕಳೆದುಕೊಂಡೆ ಅಂದವಾದ ಅಂಕುರವನ್ನು ಪಡೆಯುವುದು. ಬೇರು ನೆಲದಿಂದ ಹೀರಿದ ನೀರಿನ ಕೆಲವಂಶವನ್ನು ಹವೆಯಲ್ಲಿ ಬೀರಿಯೆ ಎಲೆಗಳು ಅದಕ್ಕೆ ಬೇಕಾದ ಅಂಶಗಳನ್ನು ಗಾಳಿಯಿಂದ ದೊರಕಿಸುವವು. ಅದರಿಂದಲೇ ಗಿಡಕ್ಕೆ ಜೀವನ–ಶೋಭೆ.

ಪಶುಗಳ ಜೀವನವೂ ಇದಕ್ಕೊಂದು ಬಲವಾದ ಸಾಕ್ಷಿಯಾಗಿರುವುದು. ಮಾಂಸಾಹಾರಿ ಪಶುಗಳಲ್ಲಿ ತ್ಯಾಗ ಕಡಿಮೆ. ಅದಕ್ಕಾಗಿಯೇ ಅವುಗಳಲ್ಲಿ ಸಾಮಾಜಿಕ ಪ್ರೀತಿ ಜೀವನಕ್ಕೆ ಎಡೆಯಿಲ್ಲ. ಅವುಗಳ ಸ್ವಾರ್ಥಪರತೆಯಿಂದ ಸ್ವ–ಪರ ಸುಖದ ಅಳಿವು. ಅದೇ ಸಸ್ಯಾಹಾರಿ ಪ್ರಾಣಿಗಳ ತ್ಯಾಗಜೀವನವು ಅವುಗಳಿಗೆ ಸಮಾಜ ಜೀವನದ ಸುಖ–ಸಂರಕ್ಷಣವನ್ನು ದಯಪಾಲಿಸುವುದು. ಅವುಗಳ ತ್ಯಾಗವೇ ಅವಕ್ಕೆ ರಕ್ಷಣ ಪೋಷಣವನ್ನು ಒದಗಿಸಿಕೊಡುವುದು.

### ಅಭ್ಯಾಸ ೭

ಮುಂದಿನ ಅವತರಣಗಳ ಸಾರಾಂಶವನ್ನು ನಿಮ್ಮ ಭಾಷೆಯಲ್ಲಿ ಬರೆಯಿರಿ.

## ೧. ಕನ್ನಡದ ಏಳ್ಗೆ

ಕನ್ನಡ ನುಡಿಯು ಏಳಿಗೆ ಅಥವಾ ಇಳಿಗೆಯು ಅದರ ಕೈವಾರಿಗಳ ಕೈಯಲ್ಲಿದೆ. ಕನ್ನಡದ ಈಗಿನ ಬಡತನವನ್ನು ಕಂಡು ಬೆಚ್ಚಿಬೀಳುವ ಕಾರಣವಿಲ್ಲ. ೧೪ನೆಯ ಶತಮಾನಕ್ಕೆ ಮೊದಲು ಇಂಗ್ಲೀಷ್ ಭಾಷೆಯು ಹೇಳಲಾಗದಂತಹ ಕೀಳ್ಮೆಯಲ್ಲಿತ್ತು. ಅನಿತು ಕಿರುಕುಳ ಸ್ಥಿತಿಯಲ್ಲಿದ್ದ ಹುಟ್ಟು-ಬಡವಾದ ಭಾಷೆಯು ಇಷ್ಟೊಂದು ಮೇಲ್ಮೆಗೆ ಬಂದಿದೆ; ಎಷ್ಟೋ ಶತಮಾನಗಳ ವೈಭವವನ್ನು ಅನುಭವಿಸಿದ ಕನ್ನಡಕ್ಕೆ ಮತ್ತೆ ಹೋದಾ ದಿವಸ ಹೆಗ್ಗಳಿಕೆಯ ಕಾಲವು ಬರಲಿಕ್ಕಿಲ್ಲವೆಂದು ಎಣಿಸುವುದು ಸರಿಯಾದೀತೇ? ಆದುದರಿಂದ ಇನ್ನು ಮೇಲೆ ಕನ್ನಡವು ತಲೆಯೆತ್ತಿ ಮೆರೆಯದಿದ್ದರೆ ಅದು ನಮ್ಮ ತಪ್ಪು ಹೊರತು ಕನ್ನಡ ನುಡಿಯದಲ್ಲ. ನಾವು ಇಂಬುಳ್ಳವರಾದರೆ, ನಮ್ಮ ಬಾಳು ಇಂಬುಳ್ಳದ್ದಾದರೆ ಕನ್ನಡವು ಇಂಬುಳ್ಳದ್ದು ಆಗುತ್ತದೆ. ಕನ್ನಡದ ಕಂಪನ್ನು ಸವಿದವರು ಕನ್ನಡದಲ್ಲಿ ನಂಬುಗೆಯುಳ್ಳವರಾಗಿ, ತಮ್ಮ ನಾಡಿನ ಮತ್ತು ನುಡಿಯ ಹೆಚ್ಚಳಕ್ಕಾಗಿ ಕಚ್ಚೆದೆಯಿಂದ ಮುಂದೆ ಬರಬೇಕು. ಅಂಜಿ, ಅಳುಕಿ ನಡೆದು ನಮ್ಮ ಬಾಳು ಕಿರಿದಾಗಿದೆ; ಕಿರಿದಾಗಿರುವ ಬಾಳು ಹಿರಿದಾಗಬೇಕಾಗಿದೆ. ನಾವು ಹಿಗ್ಗಿದರೆ ನಮ್ಮ ನಾಡು ಹಿಗ್ಗುವುದು; ನಾವು ಕುಗ್ಗಿದುದರಿಂದ ನುಡಿ ಕುಗ್ಗಿದೆ. ಕುಣಿಯಲು ಬಾರದವರಿಗೆ ನೆಲ ಡೊಂಕ. ಕನ್ನಡಕ್ಕೆ ಹೆಸರಿಡದೆ ಕನ್ನಡಕ್ಕೆ ಹೆಸರು ತನ್ನಿರಿ. ಕನ್ನಡಕ್ಕೆ ಹೆಸರು ಬರಬೇಕಾಗಿದ್ದರೆ ನೀವು ಹೆಸರಾಗಿರಿ. ಹೆಸರಾದ ಮೇಲೆ ಕನ್ನಡಿಗರೆಂದು ಹೇಳಿಕೊಳ್ಳಲು ನಾಚಿಕೊಳ್ಳುವ ಕೃತಘ್ನತನವನ್ನು ಮಾಡಬೇಡಿರಿ. ಕನ್ನಡ ಕಂದರು ಜಗದ್ವಂದ್ಯ ಮಹಾಪುರುಷರಾದಾಗ, ಕನ್ನಡದ ಒಳ್ಗಂಪಿಗೆ ಮನಸೋಲದ ಮಾನವರಾರು?

—ಶಂ. ಬಾ. ಜೋಶಿ.

## ೨. ವಚನಕಾರರ ವೀರಸಂದೇಶವು

ಬನ್ನಿರಿ, ಎಲ್ಲರೂ ಬನ್ನಿರಿ. ದೊಡ್ಡವರು ಚಿಕ್ಕವರು, ಸ್ತ್ರೀಯರು ಪುರುಷರು, ಹೊಲೆಯರು ಬ್ರಾಹ್ಮಣರು, ಸಮಗಾರರು ಅರ್ಚಕರು, ಆಳುಗಳು ಅರಸರು... ಬನ್ನಿರಿ ಎಲ್ಲರೂ ಬನ್ನಿರಿ. ನಿಮ್ಮೆಲ್ಲರಿಗೆ ಪರಮ ಸುಖವು ಬೇಕಾಗಿದ್ದರೆ ಇತ್ತ ಬನ್ನಿರಿ. ನಿಮ್ಮ ನಿಮ್ಮ ಕ್ಷುದ್ರ ಅಹಂಭಾವಗಳನ್ನು ಮರೆಯಿರಿ. ನಾವು ಆ ಕುಲದವರು, ಈ ಕುಲದವರು...ಎಂಬ ವೃಥಾಭಿಮಾನವನ್ನು ತೊರೆಯಿರಿ. ನಿಮ್ಮಲ್ಲಿರುವ ಶಕ್ತಿಗಳೆಲ್ಲ ವಿಶ್ವಸಂಗೀತದೊಡನೆ ಮೇಳಗೂಡಿಸಲು ಕೊಟ್ಟ ವಿವಿಧ ವಾದ್ಯಗಳಿರುವವು. ಅವುಗಳನ್ನು ತಿದ್ದಿ, ತೀಡಿ, ನೆಟ್ಟಗೆ ಮಾಡಿ, ಸಂಸ್ಕಾರ ಕೊಟ್ಟು, ಸರಿಪಡಿಸಿರಿ. ಅವೆಲ್ಲ ಪರಸ್ಪರ ಪೋಷಕವೆ ಇಲ್ಲವೆ ಪೂರಕವೆ ಇರುವವೆಂಬುದನ್ನು ಮರೆಯಬೇಡಿರಿ. ನೀವು ಒಂದು ಬೇಸೂರು, ಬೇತಾಲ, ಭಯಾನಕ ಬಡಿದಾಟದಲ್ಲಿ ತೊಡಗಿರುವಿರಿ ಎಂಬ ಕಲ್ಪನೆಯನ್ನು ಕಿತ್ತಿಹಾಕಿರಿ. ನೀವು ಕಿವಿಗೊಟ್ಟು ಕೇಳಿರಿ. ಅಕೋ, ಇದು ಶಿವಲೋಕದ ಸುಂದರ ಸಂಗೀತವು. ಭವ್ಯವಾದ ಅನಂತ ಸೂರ್ಯಮಂಡಲಗಳೆಲ್ಲ

ಈ ಸಂಗೀತದೊಡನೆ ತಾಲ ಹಿಡಿದು ಕುಣಿಯುತ್ತಿರುವವು. ಈ ದಿವ್ಯ ಸಂಗೀತದಲ್ಲಿ ನೀವೆಲ್ಲರೂ ಮೇಳಗಾರರಿರುವಿರಿ. ನಿಮ್ಮ ನಿಮ್ಮ ಸ್ವರಗಳನ್ನು ಇದರಲ್ಲಿ ಕೂಡಿಸಿ ಇದನ್ನು ಇನ್ನೂ ಹೆಚ್ಚಿಸುವದನ್ನು ಮಾಡಿರಿ. ಈ ಸಂಗೀತದೊಡನೆ ಹೆಜ್ಜೆಯಿಕ್ಕಿ ಸುಖದಲ್ಲಿ ನಲಿದಾಡುತ್ತ, ಪರಮಸುಖದತ್ತ ಸಾಗಿರಿ. ನೀವು ಹೊರಟಿರುವದು ಶಿವಲೋಕದ ಯಾತ್ರೆಗೆ. ನಿಮ್ಮ ಶಕ್ತಿಗಳ ಪುಷ್ಪಾಂಜಲಿಯು ನಿಮ್ಮ ಕೈಯಲ್ಲಿದೆ. ಅವು ಬಾಡದಂತೆ, ಬತ್ತದಂತೆ, ಅತ್ತಿತ್ತ ಬೀಳದಂತೆ ಆ ಸುಕೋಮಲ ಹೂಗಳನ್ನು ಎಚ್ಚರದಿಂದ ಒಯ್ದು ಅವುಗಳನ್ನು ಶಿವಚರಣದಲ್ಲಿ ಅರ್ಪಿಸುವ ಭಾರವು ನಿಮ್ಮದಿದೆ. ನಿಮ್ಮ ಅಂಜಲಿಯು ಅಲ್ಲಿ ಸಲ್ಲಬೇಕಾಗಿದ್ದರೆ, ನಿಮ್ಮ ಕಾಯವಾಚಮನಗಳು ಶುದ್ಧವಿರಬೇಕು. ನಿಮ್ಮ ಭಾವವು ಅನನ್ಯವಿರಬೇಕು. ನೀವು ನಡೆಯುವ ದಾರಿಯು ಕಠಿಣವಿರಬಹುದು. ಆದರೆ ಜೈತ್ರಯಾತ್ರೆಗೆ ಹೊರಟವರ ವೀರಭಾವವು ನಿಮ್ಮಲ್ಲಿ ನೆಲೆಸಲಿ. ಏಳಿರಿ! ಧೈರ್ಯಗೊಳ್ಳಿರಿ!! ಧರ್ಮಪಥವನ್ನು ಹಿಡಿಯಿರಿ! ಮತ್ತು ಧರ್ಮಸಾಮ್ರಾಜ್ಯದ ನಿವಾಸಿಗಳಾಗಿ ಪರಮ ಸುಖದ ಅಧಿಕಾರಿಗಳಾಗಿರಿ.

—ದಿವಾಕರ.

## ೩. ಮಹಾತ್ಮರು

ಲೋಕಹಿತೇಚ್ಛುಗಳಾದ ಮಹಾತ್ಮರು ಬಹುಶಃ ಲೋಕದ ಅವನತ ಸ್ಥಿತಿಯಲ್ಲಿಯೇ ಕಂಡುಬರುವರು. ಉಚ್ಚಾದರ್ಶಗಳ ಅಭಾವದಿಂದಲೇ ಜನರ ಅವನತಿಯು ಪ್ರಾರಂಭವಾಗುತ್ತದೆ. ನಿರ್ಜೀವ ವಸ್ತುಗಳಾದ ಗ್ರಂಥಗಳಲ್ಲಿ ಅಂಥ ಉಚ್ಚಾದರ್ಶಗಳು ಅಡಗಿದ್ದರೆ ಸಾಲದು. ಅದೇಕೆ! ಅನೇಕ ಬಾಯ್ಬಡಕ ಭಾಷಾಪಂಡಿತರಿಂದ ಅವು ಹೊರಬಿದ್ದರೂ ಸಾಕಾಗದು. ಆ ಆದರ್ಶಗಳು ನಿಸ್ವಾರ್ಥಿಯಾದ ಸಿದ್ಧನಿದ್ದೂ ಸಾಧಕನಾಗಿರುವ ಮಹನೀಯನ ಆಚರಣರೂಪವಾಗಿ, ಸಮಾಜದಲ್ಲಿ ಪಸರಿಸಿದೊಡನೆಯೇ ಜನರು ಅದನ್ನು ಮನ್ನಿಸತೊಡಗುತ್ತಾರೆ. ಸಾರಾಂಶ : ಯಾವ ಸಮಾಜದಲ್ಲಿ, ಆಗಾಗ್ಗೆ, ಅದೇಕೆ! ಸದಾಕಾಲದಲ್ಲಿಯೂ, ಯೋಗ್ಯ ಮಹನೀಯರಿಂದ ಉಚ್ಚಾದರ್ಶಗಳು ಹೊರಬೀಳುವದಿಲ್ಲವೋ ಆ ಸಮಾಜವು ಕೆಳಗಿಳಿಯಲಾರಂಭಿಸಿತೆಂತಲೇ ತಿಳಿಯತಕ್ಕದ್ದು. ಆದರ್ಶದ ಸತತ ಮನನವೇ ಅಜಯ್ಯ ಇಚ್ಛಾಶಕ್ತಿಯು. ಈ ಇಚ್ಛಾಶಕ್ತಿಯನ್ನು ಅಹಿಂಸಾಪರವಾಗಿ ಜನರಲ್ಲಿ ಹಬ್ಬಿಸುವದೇ ಸಾಧುತ್ವವು. ಇಂಥ ಸಾಧುತ್ವವನ್ನು ಹುಟ್ಟಿಸುವದೇ ಮಹಾತ್ಮರ ಕಾರ್ಯ.

—ತಾರಾನಾಥ.

## ೪. ಒಳಗಣ್ಣು

ಪ್ರಪಂಚದಲ್ಲಿ ಸತ್ಯ ಸೌಂದರ್ಯಗಳನ್ನು ಕಾಣುವ ಒಳಗಣ್ಣು, ಕಲಿತವರಿಗೂ ಇರುವುದು, ಕಲಿಯದವರಿಗೂ ಇರುವುದು. ಹೊರಗಣ್ಣಿನಂತೆಯೇ ಒಳಗಣ್ಣಿನ ರೀತಿ. ಓದು ಬರೆಹವನ್ನು ಕಲಿತು, ಕೆಲವು ಪುಸ್ತಕಗಳನ್ನು ನೋಡಿದ ಮಾತ್ರಕ್ಕೆ ನಮ್ಮ ಕಣ್ನೋಟವು ಇನ್ನಿಷ್ಟು ಹೆಚ್ಚಾಗುವುದಿಲ್ಲ. ಕಲಿಯದೆ ಇದ್ದರೆ, ಇದ್ದ ಕಣ್ಣುಗಳು

ಕುರುಡಾಗಿ ಹೋಗುವುದಿಲ್ಲ. ಇವರಂತೆಯೇ ಒಳಗಣ್ಣು. ಮರವೆಯ ತೆರೆಯಿಂದ ಎಲ್ಲರ ಒಳಗಣ್ಣು ಮುಚ್ಚಿಹೋಗಿರುವುದು. ಆ ಮುಚ್ಚಿದ ಕಣ್ಣು ತೆರೆಯಲು ಕೊಂಚ ಕಾಲವು ಬೇಕು, ಕಾರಣಗಳು ಕೆಲವು ಒದಗಬೇಕು. ಓದುಬರೆಹ ಕಲಿತಷ್ಟಕ್ಕೇ ಒಳಗಣ್ಣು ತೆರೆಯದು. ಬಾಳುವೆಯಲ್ಲಿಯ ಹಲವು ಜೀವಗಳ, ಸುಖ ದುಃಖಗಳ ಅನುಭವದ ಏಟುಗಳು ಬಿದ್ದಂತೆಲ್ಲ ಅದು ತೆರೆಯುತ್ತ ಬರುವುದು. ಹೆಚ್ಚು ಹೆಚ್ಚು ಅನುಭವಸ್ಥನಾದಂತೆ ಮನುಷ್ಯನು ಹೆಚ್ಚು ಹೆಚ್ಚಾಗಿ ಒಳನೋಟವನ್ನು ಪಡೆಯುವನು. ಆ ಒಳನೋಟವು ತಾನೆ ತಾನಾಗಿ ಮನುಷ್ಯನಿಂದ ಮಾತನಾಡಿಸುವ ಕೆಲಸವನ್ನು ಮಾಡಿಸತೊಡಗಿತೆಂದರೆ ಆ ಕೆಲಸವೇ ಕವಿತೆಯೆನಿಸುವುದು.

—ಆನಂದಕಂದ.

## ೫. ಗೃಹಿಣೀ–ಧರ್ಮ

ಗೃಹಿಣಿಯಿಲ್ಲದೆ ಗೃಹವಿಲ್ಲ; ನಿಜ. ಆದರೆ ಗೃಹಿಣಿಯೆಂದರೇನೆಂಬುದನ್ನು ತಿಳಿಯಬೇಕಾಗಿದೆ. ಗೃಹಿಣಿಯೆಂದರೆ ಜಾತೀಯ ಗೃಹದ, ಧರ್ಮ ಸಭ್ಯತೆಯ ಅಧಿದೇವತೆ. ಗೃಹಿಣಿಯೆಂದರೆ ಹೆಂಡತಿಯೆಂದೇ ಇಂದಿನವರ ಭಾವನೆ. ಗೃಹಿಣೀಧರ್ಮವೆಂದರೆ ಪತ್ನೀಧರ್ಮವೆಂದೇ ಅವರ ಅಭಿಪ್ರಾಯ. ಆದರೆ ಹೆಂಗಸಿನ ಪೂರ್ಣ ವಿಕಾಸವು ಹೆಂಡತಿತನವಲ್ಲ; ತಾಯ್ತನವೇ. ಅದೇ ನಮ್ಮ ಸರ್ವಸ್ವ; ಅದೇ ನಮ್ಮ ಯೋಗ; ಅದೇ ನಮ್ಮ ಜ್ಯೋತಿ, ಧರ್ಮ.

ಕಲ್ಲಿನ ಮಣ್ಣಿನ ಕಟ್ಟಡ ಮನೆಯೆ
ಜನನಿಯ ಪ್ರೇಮದ ಬಾಹುಗಳಲ್ಲಿದೆ.

ಎಂದು ಸೌಂದರ್ಯ-ಸತ್ಯ-ಗಾಯಕನಾದ ಕಾವ್ಯಯೋಗಿಯು ಹಾಡಿಲ್ಲವೇ? ಗೃಹದ ದೇವಿ ಗೃಹಿಣಿ ಎಂದ ಮೇಲೆ ನಮ್ಮ ಧ್ಯೇಯವು, ಕರ್ತವ್ಯವು ತಾಯ್ತನವಲ್ಲದೇ ಮತ್ತೇನಾದೀತು? 'ಮಾತೃದೇವೋ ಭವ.।' ಹೇ! ಮಾತೃದೇವಿ! ನಿನಗೆ ನನ್ನ ಅನಂತ ನಮಸ್ಕಾರಗಳಿರಲಿ!

ಕಿರಿಯ.

## ೬. ತಾಯ್ತನ

ಹೆಂಗಸಿನ ಆದರ್ಶ ಹೆಂಗಸೇ; ಅವಳ ತಾಯ್ತನ. ತಾಯ್ತನವೆಂದರೆ ಬೇಕೆಂಬ ಬಯಕೆಯಿಲ್ಲ; ಏನು ಬೇಕೆಂದು ಮಕ್ಕಳನ್ನು ಕೇಳುವ ವಾತ್ಸಲ್ಯ; ಮಕ್ಕಳಲ್ಲಿ ಸತ್ಯ-ನಿತ್ಯದ ಮಹಿಮೆಯನ್ನು ಪರಿಯಿಸಲು, ಅವರಿಗಾಗಿ ಸರ್ವಸ್ವವನ್ನು ತ್ಯಾಗ ಮಾಡುವುದು. ತಾಯಿಯೆಂದರೆ ಪ್ರೇಮಮಯ ಮೂರ್ತಿಯೆಂದು ಹಿರಿಯರ ನುಡಿ. ಪ್ರೇಮವು ಅನಾದಿಯಿಂದ ಹೆಂಗಸಿನ ಕೀರ್ತಿಧ್ವಜವಾಗಿದೆ. ವಿವೇಕಾನಂದರೊಮ್ಮೆ ಹೇಳಿದರು: ಹುಲಿ ಎದುರಿಗೆ ಬಂದರೆ, ತಾಯ್ತಲೆ ಮೊದಲು ಹುಲಿಯ ಬಾಯಿ ಸೇರೀತಲ್ಲದೆ, ಕೂಸಿನದಲ್ಲ. ತಾಯ ಪ್ರೇಮಕ್ಕೆ ಎಲ್ಲಿಯ ಸಾಟಿ? ಪ್ರೇಮ ಚಿಹ್ನೆಯು ಸೇವೆ ಸಮರ್ಪಣೆ

ಯಲ್ಲಿದೆ. ಆ ದಿವ್ಯತರ ಆದರ್ಶವನ್ನು ಮರೆಯಬೇಕೆ ? ಅಲೌಕಿಕ ದಿವ್ಯ ಮಾತೃತ್ವವು ನಮ್ಮ ಜನ್ಮಸಿದ್ಧ ಹಕ್ಕಾಗಿರಲು ಈ ಪತ್ನೀತ್ವಕ್ಕಾಗಿ ಬಡಿದಾಟವೇಕೆ ?

— ಕಿರಿಯ.

## ೭. ಜಗತ್‌–ಸ್ವಪ್ನ

ಈ ಜಗತ್ತೆಂಬ ವಿಚಿತ್ರ ಸ್ವಪ್ನದಲ್ಲಿ ನೆರಳು ತೆರೆಯೆಂದು ತೋರುವದು ನಮಗೆ. ಗಡದ್ದು ನಿದ್ರೆಯಲ್ಲಿ ಒಳ್ಳೆ ಎಚ್ಚರಿಕೆಯ ಭ್ರಮವು ಈ ಲೋಕಕ್ಕೆ. ....ಎಲ್ಲಿದ್ದಾನೆ ಆ ಮ್ಯಾಸಿಡೋನದ ಆ ಅಲೆಕ್ಝಾಂಡರನು ? ಆ ನೆಪೋಲಿಯನ್ನನಾದರೂ ಎಲ್ಲಿ ? ಅವನಾ ಮಾಸ್ಕೋದ ಪಲಾಯನ, ಅವನಾ ಆಸ್ಟರಲಿಟ್ಝಿನ ಸಂಗ್ರಾಮ ಸಮಯ, ಅದೆಲ್ಲ ಕೊಳ್ಳಿ ದೆವ್ವಿನ ಬೇಟೆಯಲ್ಲದೆ ಮತ್ತೇನು ? . ..ಅಗೋ ಆ ತೇಜಿಯನ್ನೇರಿದ ತರುಣ ವೀರ. ಕಣ್ಣುಗಳು ಕಿಡಿಯುಗುಳುತ್ತಿವೆ, ಬಲವು ಎದೆಯನ್ನೂ ತೋಳನ್ನೂ ತುಂಬಿಕೊಂಡಿದೆ ..ಅಯ್ಯೋ ಆ ತೇಜಿಯೂ ತೇಜಸ್ವಿಯೂ ಎರಡೂ ತೋರಿಕೆಗಳು ! ವ್ಯಕ್ತವಾದ ಶಕ್ತಿಯ ರೂಪಮಾತ್ರ. ಸ್ಥಿರವೆಂದು ತಿಳಿದ ನೆಲದಮೇಲೆ ಹೇಗೆ ಬಿಡಗಿನ ನಡಿಗೆಯಿಂದ ಸಾಗಿರುವರೆಲ್ಲರು ! ಛಚ್ಚೇ, ಪೃಥ್ವಿಯೆಂಬುದೊಂದು ಪರೆ ಮಾತ್ರ. ಯಾವಾಗ್ಗೆ ಇದ್ದಾಗವಾಗಿ ಹರಿದೀತೋ, ಆ ತೇಜಿ ತೇಜಸ್ವಿ ಈರ್ವರು ನೆಲೆಯಿಲ್ಲದ ನೂಲಿಗೂ ಸಿಲುಕದಂತೆ ಗಳಂಗಟ್ಟಾಗಿ ಯಾವಾಗ ಹೋಗುವರೋ ಯಾರು ಬಲ್ಲರು ! ಚೀ ಎಲ್ಲಿಯ ನೆಲೆ ! ಎಲ್ಲಿಯ ಸುಖ ! ಮನೋರಥವೂ ಅದನ್ನು ಬೆಂಬತ್ತಿ ಹೋಗ ಲರಿಯದು. ಗಳಿಗೆಯ ಮೊದಲು ಅವರಿರಲಿಲ್ಲ, ಗಳಿಗೆಯ ಮೇಲೆ ಅವರಿರರು. ಅವರ ಬೂದಿಯೂ ದೊರೆಯದು....ಇಂತು ಈಶನಿರ್ಮಿತ ಪ್ರತಾಪವಿಸ್ಫುರಿತ, ಚೈತನ್ಯ ಪುಂಜಗಳಂತೆ, ನಾವು ಶೂನ್ಯದಿಂದುದಯಿಸಿ, ವಿಸ್ಮಯ-ವಿಸ್ಫಾರಿತ ನೇತ್ರೆಯಾದ ವಸುಂಧರೆಯು ನೋಡನೋಡುವಷ್ಟರಲ್ಲಿ ಝಂಝಾವಾತದ ವೇಗದಿಂದ ಮುಂದೆ ಸಾಗಿ ಮತ್ತೆ ಶೂನ್ಯದಲ್ಲಿ ದುಮ್ಮಿಕ್ಕುವೆವು.

ಆದರೆ ಎಲ್ಲಿಂದ ? ಅಯ್ಯೊ ಮಹಾದೇವ, ಎಲ್ಲಿಗೆ ? ಬುದ್ಧಿಗೆ ತಿಳಿಯದು. ಶ್ರದ್ಧೆಗೂ ಹೊಳೆಯದು. ಗೂಢದಿಂದ ಅತಿಗೂಢಕ್ಕೆ, ದೇವನಿಂದ ದೇವನಲ್ಲಿಗೆ, ಇಷ್ಟೇ ತಿಳಿಯುವದು, ಇಷ್ಟೇ ಹೊಳೆಯುವದು.

—ಕಾರ್ಲಾಯಿಲ.

## ೮. ಬಾಳಿನಲ್ಲಿಯ ಕಹಿ

ಬಾಳಿನಲ್ಲಿ ಸಿಹಿಗಿಂತ ಕಹಿಯೇ ಹೆಚ್ಚೆಂದು ನಿರಾಶಾವಾದಿಗಳು ನಂಬುವರು. ಕಹಿಗಿಂತ ಸಿಹಿಯೇ ಹೆಚ್ಚೆಂದು ಆಶಾವಾದಿಗಳ ಮತ. ಆಗಲಿ, ಯಾರೂ ಕಹಿಯು ಇಲ್ಲವೇ ಇಲ್ಲವೆಂದು ಹೇಳಲಾರರು. ನಮ್ಮ ಬಾಳಿನ ಬಾನಿನಲ್ಲಿ ಆಗಾಗ ದುಃಖದ ಮೋಡಗಳು ಕವಿಯುತ್ತಲೇ ಇರುತ್ತವೆ. ಅವಕ್ಕೆ ಅಸ್ತಿತ್ವವೇ ಇಲ್ಲವೆಂದರೆ ಯಾರೂ ನಂಬಲಾರರು. ಹಾಗೆನ್ನುವವನು ವಿಚಿತ್ರಬುದ್ಧಿಯವನೆಂದು ಅನ್ನಲ್ಪಡುವನು ; ಅವನ ಮಾತು ಅವಿಶ್ವಸನೀಯವಾಗುವದು. ಏಕೆ ? ಸಾಧಾರಣವಾಗಿ ಎಲ್ಲರಿಗೂ

ಬಾಳಿನ ಕಹಿಯು ಚೆನ್ನಾಗಿ ಅನುಭವವಾಗುತ್ತದೆ. ಲೆಕ್ಕವಿಲ್ಲದ ಪ್ರಮಾದಗಳು, ಎಣೆಯಿಲ್ಲದ ಅಗೌರವ, ಪರಿಸ್ಥಿತಿಯಲ್ಲಿ ಪ್ರವಾಹದೊಡನೆ ಹಿತವಾದ ಹೊಂದದ ಅನೇಕ ಅಪಜಯಗಳು, ಇವುಗಳ ನಡುವೆ ಜೀವನವು ವಿಧವಿಧದ ಕಷ್ಟಾನುಭವಗಳೊಡನೆ ಎಸಗುವ ಯುದ್ಧಗಳ ದೊಡ್ಡ ಹೋರಾಟವೇ ಸೈ! ಸಿರಿಯು ಸೇರಿದರೂ, ನೆರೆಹೊರೆಯು ಮನಸ್ಸಿಗೊಪ್ಪಿದರೂ ಹೃದಯದಿಂದ ಅತೃಪ್ತಿ, ಅಶಾಂತಿಗಳು ಅಳಿಯುವದಿಲ್ಲ.

ಪ್ರಾಪಂಚಿಕರ ಪರಿಯನ್ನು ಪರಿಶೀಲಿಸಿ. ಸುಖಕ್ಕೆ ಹಂಬಲಿಸಿ, ಅವರು ಹೊಸ ವಸ್ತುಗಳನ್ನು ಹುಡುಕಿ ಪಡೆಯುವರು. ಪರಿಪರಿಯ ಅನುಕೂಲತೆಗಳನ್ನು ಕಲ್ಪಿಸಿಕೊಳ್ಳುವರು. ಆದರೇನು ಫಲ? ಬಯಸಿದ್ದು ಬಂತೇನು? ಐಶ್ವರ್ಯ, ಗೌರವ, ಸುಖದ ಸಂಸಾರ, ದೃಢಸ್ನೇಹ, ಇನ್ನೂ ಏನೇನೋ ಸಂಗತಿಗಳನ್ನವರು ಬಯಸುವರು. ಇವೆಲ್ಲ ಲಭಿಸಿದರೂ ಮನಃ ಸುಖ ಸಿಕ್ಕಿತೇ? ಆತ್ಮದ ಅಶಾಂತಿಯು ನಂದಿತೇ? ಐಶ್ವರ್ಯ ದೇವತೆಯು ಸ್ವರ್ಣಪಾತ್ರಗಳಲ್ಲಿ ಆಟವಾಡುವ ಧನಿಕಾಗ್ರೇಸರನು ಹೇಳಬಲ್ಲನೇನು ತನಗೆ ಅಶಾಂತಿಯಿಲ್ಲವೆಂದು? ತನ್ನ ಜೀವನವು ಸೌಭಾಗ್ಯ-ವೇದನೆಗಳಿಂದ ಶ್ರುತಿ ಕೆಡದ ಮಧುರ ಗಾನ ಪ್ರವಾಹವೆಂದು? ಪ್ರಾಪಂಚಿಕ ವಿಷಯಗಳ ಲಾಭದಿಂದ ಮಾನವೀ ಸ್ವಭಾವಕ್ಕೆಂದೂ ಸಂಪೂರ್ಣ ಸುಖವಿಲ್ಲ. ಇವು ಹೆಚ್ಚಿದಂತೆಲ್ಲ ಅಶಾಂತಿಯೂ ಆಶೆಯೂ ಹೆಚ್ಚುತ್ತದೆ. ಬಯಕೆಗಳು ಪೂರ್ಣವಾಗುತ್ತಲೇ ಅದರ ಬೆಂಕಿಯು ಮತ್ತಷ್ಟು ಭುಗುಭುಗನೆ ಉರಿಯುತ್ತದೆ. ಹಾಗಾದರೆ ಜಗದ ಜಾತ್ರೆಯಲ್ಲಿ ಕಹಿಯಿಲ್ಲದ ಬರಿಯ ಬೆಲ್ಲವಿಲ್ಲವೆ? ಎಲ್ಲ ಸಿಹಿಯ ಸಕ್ಕರೆಯ ಅಡಿಯಲ್ಲಿ ಕಹಿಯು ಹುದುಗಿ ಇದ್ದೇ ಇದೆ.

—ಮುಕ್ತಿಮಾರ್ಗ.

## ೯. ನಿಸ್ವಾರ್ಥ ಸ್ವಾರ್ಥ

ಎಲ್ಲರಿಗೆ ಒಳಿತನ್ನು ಮಾಡುವುದು ವ್ಯಕ್ತಿಗೆ ಒಳ್ಳೆಯದು, ಮಾಡದಿರುವುದು ವ್ಯಕ್ತಿಗೆ ಕೆಟ್ಟದು. ಇದು ಎಲ್ಲ ಮತದ ನೆಲೆಯಲ್ಲಿ ನಿಲ್ಲುವ ಒಂದು ನಂಬಿಕೆ. ಮತ ಬಲ್ಲವನನ್ನು ಕೇಳಿದರೆ ಈ ಪ್ರಶ್ನೆಗೆ ಅವನು ಕೊಡಬಹುದಾದ ಉತ್ತರ ಕೊನೆಯವರೆಗೆ ತಡೆಯುವುದಿಲ್ಲ. ನಿನ್ನ ಕರ್ಮ ನಿನ್ನನ್ನು ಹಿಂಬಾಲಿಸಿ ಬರುತ್ತದೆ ಎನ್ನುವ ಮಾತು 'ಲೌಕಿಕ' (Secular) ಮನೋಧರ್ಮದಲ್ಲಿ ಸಾಧ್ಯವಿಲ್ಲ. ಬಹು ಜನದ ಮನಸ್ಸು ಸ್ವಾರ್ಥಕ್ಕೆ ಮಾತ್ರ ಸೋಲಬಲ್ಲದು. ಅದು ನೀತಿಗೆ 'ನಾನದೇತಕ್ಕೆ ಅನ್ಯರಿಗಾಗಿ ಹೆಣಗಬೇಕು? ಹೇಳು!' ಎನ್ನುವುದು. ಉದಾತ್ತ ಜೀವನದ ಮೂಲ ನಿಸ್ವಾರ್ಥ ಎಂದರೆ ಅದು ಒಪ್ಪಲಾರದು. ಬೇರೆ ಯಾವ ಕಾರಣದಿಂದ ಅಲ್ಲದಿದ್ದರೂ ಈ ಕಾರಣದಿಂದ ನೀತಿಯು ಮೂಲದಲ್ಲಿ ಸ್ವಾರ್ಥವಿರಬೇಕಾಗಿದೆ. ಆ ಸ್ವಾರ್ಥದ ಸ್ವರೂಪ ಮಾತ್ರ ಬೇರೆಯಾಗುತ್ತದೆ. 'ತಾನು' ಎಂಬುದು ವಿಸ್ತಾರವಾಗಿ, ಆ ವಿಸ್ತಾರದ 'ತಾನು' ವಿನಲ್ಲಿ ಈ ಅಲ್ಪವಾದ 'ತಾನು' ಅಡಗುತ್ತದೆ. ಆ ವಿಸ್ತಾರ ತಕ್ಕಷ್ಟು

ದೊಡ್ಡದಾಗಿ, ಈ ಆದಕ ತಕ್ಕಷ್ಟು ಸಾಧಿಸಿದಾಗ, ಸ್ವಾರ್ಥ ನಿಸ್ವಾರ್ಥ ರೂಪವನ್ನೇ ಪಡೆಯುತ್ತದೆ. ಸ್ವಾರ್ಥದ ವೇಷದಲ್ಲಿ ನಿಸ್ವಾರ್ಥವನ್ನು ಬೆಳಕಿಗೆ ತರುವುದೇ ಧರ್ಮಗಳ ಉದ್ದೇಶ.

—ಶ್ರೀನಿವಾಸ.

### ೧೦. ಚತುರ್ವರ್ಣಗಳು

ಸಮಾಜದಲ್ಲಿ ನಾಲ್ಕು ವರ್ಣಗಳು ಮುಖ್ಯ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬುವೇ ಅವುಗಳ ಹೆಸರುಗಳು. ಆರ್ಯಾವರ್ತದಲ್ಲಿ ವಾಸಮಾಡುವ ಸಮಾಜದಲ್ಲಿ ಈ ಹೆಸರುಗಳು ರೂಢವಿರುವವು. ಜಗತ್ತಿನಲ್ಲಿಯ ಅನ್ಯ ದೇಶಗಳಲ್ಲಿ ಇವು ರೂಢವಿಲ್ಲ. ಆದರೆ ಈ ಹೆಸರುಗಳಿಂದ ನಿರ್ದಿಷ್ಟವಾದ ವಸ್ತುವು ಆಯಾ ಸಮಾಜಗಳಲ್ಲಿ ಇರುವದೆಂಬಲ್ಲಿ ಸಂಶಯವಿಲ್ಲ. ಬ್ರಾಹ್ಮಣ್ಯ, ಕ್ಷಾತ್ರವೃತ್ತಿ, ವೈಶ್ಯವೃತ್ತಿ ಮತ್ತು ಶೂದ್ರವೃತ್ತಿ ಇವು ಎಲ್ಲ ಸಮಾಜಗಳಲ್ಲಿ ಇದ್ದೇ ಇರುವವು. ಇವುಗಳಲ್ಲಿ ಒಂದು ಇಲ್ಲದಿದ್ದರೂ ಸಮಾಜವು ನಡೆಯದು. ಇವೆಲ್ಲ ಸಮನಾಗಿ ಅನ್ಯೋನ್ಯ ಸಂಬಂಧಗಳನ್ನು ಇಟ್ಟುಕೊಳ್ಳುವ ತನಕ ಆಯಾ ಸಮಾಜವು ಉತ್ತಮಸ್ಥಿತಿಯಲ್ಲಿರುವದು. ಇವುಗಳಲ್ಲಿ ಯಾವದೇ ಒಂದು ಪ್ರಮಾಣದ ಹೊರಗೆ ಅಳತೆಗೆಟ್ಟು ಹೆಚ್ಚು ಕಡಿಮೆಯಾದರೂ ಸಮಾಜದ ಸಮತೆಯು ಕೆಟ್ಟುಹೋಗುವದು. ಇವುಗಳಲ್ಲಿ ಬ್ರಾಹ್ಮಣ್ಯವು ಜ್ಞಾನಪ್ರಧಾನವು. ಕ್ಷಾತ್ರವೃತ್ತಿಯು ಶೌರ್ಯಪ್ರಧಾನವು. ವೈಶ್ಯವೃತ್ತಿಯು ಸಂಚಯ ಅಥವಾ ಸಂಗ್ರಹ ಗುಣವುಳ್ಳದ್ದು. ಮತ್ತು ಶೂದ್ರವೃತ್ತಿಯು ಸೇವಾಭಾವದಿಂದ ಪರಿಪೂರ್ಣವು. ಸತ್ಯಾಸತ್ಯ ವಿವೇಕಕ್ಕಾಗಿ ಜ್ಞಾನವು ಬೇಕು, ಸಂರಕ್ಷಣಕ್ಕಾಗಿ ಶೌರ್ಯವು ಅವಶ್ಯ, ಅಸ್ತಿತ್ವಕ್ಕಾಗಿ ಪದಾರ್ಥ ಸಂಗ್ರಹವು ಅಪರಿಹಾರ್ಯವು, ಮತ್ತು ಎಲ್ಲರ ಪೋಷಣೆಗಾಗಿ ದುಡಿಮೆಯು ಬಿಡದ ಕರ್ಮವು. ಈ ನಾಲ್ಕು ಯೋಗ್ಯ ಪ್ರಮಾಣದಲ್ಲಿರುವದು ಅವಶ್ಯವು. ಬರಿಯ ಜ್ಞಾನವು ಕರ್ಮವಿಹೀನವಿದ್ದರೆ ವ್ಯರ್ಥವು. ಬರಿಯ ಶೌರ್ಯವು ಜ್ಞಾನ ಬಿಟ್ಟು ನಡೆದರೆ ಅದು ಕ್ರೌರ್ಯದಲ್ಲಿ ಪರಿಣಮಿಸುವದು. ಶೌರ್ಯ ಸಾಹಸಗಳ ಸಹಾಯವಿಲ್ಲದ ಸಂಗ್ರಹವು ತನ್ನನ್ನು ತಾನು ಸಂರಕ್ಷಿಸಿಕೊಳ್ಳಲಾರದೆ ಸೂರೆಕೊಳ್ಳುವವರ ಪಾಲಾಗುವದು. ಇವುಗಳಿಗೆ ಪೋಷಕವಾದ ಸೇವೆ ಅಥವಾ ದುಡಿಮೆ ಇಲ್ಲದಿದ್ದರೆ ಇವಾವೂ ಬದುಕಲಾರವು. ಈ ರೀತಿ ಇವೆಲ್ಲ ಪರಸ್ಪರ ಸಹಾಯಕವೂ ಪೋಷಕವೂ ಇರುವವು. ಇವೆಲ್ಲ ಕೂಡಿ ಸಮಾಜವೆಂಬ ವಸ್ತುವು ಸಿದ್ಧವಾಗುವದು.

—ಉಪನಿಷತ್ ಕಥಾವಳಿ.

## ೫. ವಿರಾಮ ಚಿಹ್ನಗಳು.

### ೧. ಅಂದರೇನು ?

ನಾವು ಮಾತಾಡುವಾಗ ಅಲ್ಲಲ್ಲಿ ನಿಲ್ಲುವುದುಂಟು. ಅದರಂತೆ ಬರೆಯುವಾಗಲೂ ನಿಲ್ಲಬೇಕಾಗುವುದು. ಅರ್ಥವು ಸುಲಭವಾಗಬೇಕೆಂದುದೇ ಇವರ

ಉದ್ದೇಶ. ಈ ನಿಲ್ಲುವ ಸ್ಥಳವನ್ನು ಸೂಚಿಸುವ ಚಿಹ್ನೆಗಳೇ ವಿರಾಮ ಚಿಹ್ನೆಗಳು.

## ೨. ಏಕೆ ಬೇಕು ?

(೧) ಅರ್ಥಸ್ಪಷ್ಟತೆಯು ಅವುಗಳ ಕಾರ್ಯದಲ್ಲಿ ಒಂದು. ಅವುಗಳನ್ನು ಉಪಯೋಗಿಸುವುದರಿಂದ ಬರಹದಲ್ಲಿ ಸಂದಿಗ್ಧತೆಯು ಉಳಿಯುವುದಿಲ್ಲ. ವಾಕ್ಯದಲ್ಲಿಯ ಬೇರೆ ಬೇರೆ ಶಬ್ದಗಳ ಹಾಗೂ ಶಬ್ದ ಸಮೂಹಗಳ ಪರಸ್ಪರ ಸಂಬಂಧವು ಸ್ಪಷ್ಟವಾಗುವುದು.

(೨) ನಾವು ಮಾತಾಡುವಾಗ ನಮ್ಮ ಭಾವವನ್ನು ಧ್ವನಿಯ ವಿಶಿಷ್ಟ ಏರಿಳಿತಗಳಿಂದ ಸೂಚಿಸುವೆವು. ಬರಹದಲ್ಲಿ ಅದೇ ಕೆಲಸವು ಈ ಚಿಹ್ನೆಗಳಿಂದ ನೆರವೇರುವುದು.

## ೩. ಉಪಯೋಗವು :—

### (೧) ಪೂರ್ಣವಿರಾಮ (.) :—

ವಾಕ್ಯವು ಮುಗಿದೊಡನೆಯೂ, ಶಬ್ದಗಳ ಸಂಕ್ಷಿಪ್ತ ರೂಪಗಳಲ್ಲಿಯೂ ಇದು ಬರುವುದು.

ಉ :—ಇಂದು ವೀ. ಸಿ. ಯವರ ಸುಶ್ರಾವ್ಯವಾದ ಕಾವ್ಯಗಾಯನವಾಯಿತು.

ಕೆ. ಪಿ. ಸಿ. ಸಿ. (ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿ)

### (೨) ಅರ್ಧವಿರಾಮ (;) :—

ಇದು ಒಂದಕ್ಕೊಂದು ಸಂಬಂಧವಿದ್ದ ಚಿಕ್ಕ ಚಿಕ್ಕ ವಾಕ್ಯಗಳ ನಡುವೆ ಬರುವುದು.

ಉ :—ನೀನು ಕಲಿಯಬೇಕು; ಕಲಿಸಬೇಕು.

ಬೆಳೆಯಬೇಕು ; ಬೆಳಸಬೇಕು.

ಮಾತು ಮಾಣಿಕ ; ಮೌನ ಮಲ್ಲಿಗೆ.

ಮತಿಯಂತೆ ಮಾತಿಲ್ಲ ; ಮಾತಿನಂತೆ ಕೃತಿಯಿಲ್ಲ.

### (೩) ಸ್ವಲ್ಪವಿರಾಮ (,) :—ಇದಕ್ಕೆ ಅಲ್ಪವಿರಾಮವೆಂದೂ ಹೇಳುವುದುಂಟು.

ಇದನ್ನು ಕೆಳಗೆ ಕಾಣಿಸಿದ ಸ್ಥಳಗಳಲ್ಲಿ ಉಪಯೋಗಿಸುವರು.

(೧) ವಾಕ್ಯದಲ್ಲಿಯ ಶಬ್ದಮಾಲಿಯನ್ನು ಬಿಡಿಸಲು :—

ಉ :—ನಾನು ತನುವನ್ನು, ಮನವನ್ನು, ಧನವನ್ನು, ರಾಷ್ಟ್ರಕಾರ್ಯಕ್ಕೆ ಧಾರೆ

ಬರೆಯಬಹುದು. ಸತ್ಯವೂ, ಪ್ರೇಮವೂ, ಸಂಯಮವೂ, ಧರ್ಮದ ತಳಹದಿಯು.

ನಾವಲ್ಲಿಗೆ ತೆರಳಿ, ಕೆಲಸವನ್ನೆಲ್ಲ ತೀರಿಸಿ, ಮರಳಿ ಬಂದ.

(೨) ವಾಕ್ಯದಲ್ಲಿಯ ಶಬ್ದಯುಗಳನ್ನು ಬಿಡಿಸಲು :—

ಉ :—ಉಚ್ಚ-ನೀಚರೂ, ಬಡವ-ಬಲ್ಲಿದರೂ, ಜಾಣ-ಕೋಣರೂ, ಎಲ್ಲರೂ ಮಾನವರೇ ಅಲ್ಲವೇ ?

ನಾವು ಭಕ್ತ-ಮುಕ್ತರೂ, ದಾಂತ-ಶಾಂತರೂ ಆಗಬೇಕು.

(೩) ಸಂಬೋಧನ ಪದದ ತರುವಾಯ.

ಉ :—ಮಗು, ಮಂಗನಂತೆ ಆಡಬೇಡ. ದೇವ, ಕಾಪಾಡು ಈ ಪಾತಕಿಯನ್ನು.

**ಸೂಚನೆ** :—ಸಂಬೋಧನವು ತೀರ ಪ್ರಬಲವಾಗಿದ್ದರೆ ಅಲ್ಲಿ ಭಾವಬೋಧಕ ಚಿಹ್ನವನ್ನಿಡಬೇಕು.

ಉ :—ರಕ್ಷಿಸಿರೋ ! ನುಂಗಿದೆಯಾ ಈ ಕೂಸನ್ನು ?

(೪) ಒಂದು ಶಬ್ದವು ಅಧ್ಯಾಹಾರವಾದಾಗ-ಗುಪ್ತವಾಗಿರುವಲ್ಲಿ :—

ಉ :—ನಾನು ಪಡೆದುದು ಹೊಸ ಕಣ್ಣನ್ನು ; ಅವನು, ಮಣ್ಣನ್ನು.

### (೪) ಪ್ರಶ್ನ ಚಿಹ್ನ (?) :—

ಪ್ರಶ್ನೆಗಳ ಕೊನೆಯಲ್ಲಿಯೂ ನಡುವೆ ಸಂದೇಹವನ್ನು ಸೂಚಿಸುವಾಗಲೂ, ಇದನ್ನು ಉಪಯೋಗಿಸುವರು.

ಉ :—ನಿನಗೆ ನಗಲು ಬರುವದಿಲ್ಲವೇ ?

### (೫) ಭಾವಚಿಹ್ನ (!) :—

ಅತಿಯಾದ ಸುಖ—ದುಃಖ, ಆಶ್ಚರ್ಯ—ನಿಂದೆ ಇತ್ಯಾದಿ ಭಾವಗಳನ್ನು ಸೂಚಿಸುವ ಪದಗಳ ಕೊನೆಯಲ್ಲಿ ಇದು ಬರುವುದು.

ಉ :—ಭಲೆ ! ಎಂಥ ಸೋಲ್ತರದ ಗೆಲವಿದು !

ಅಬ್ಬ ! ಏನು ಆರ್ಭಟೆ ಈ ದುಂಬನದು !

ಅಯ್ಯೋ ! ಕೆಟ್ಟೆನು ! ಇನ್ನೆನ್ನ ಕಾಯುವವರಾರು !

ಛೀ ! ನೀಚಾ ! ನೀನೆತ್ತ ? ಶಿವನೆತ್ತ ? ಹೋಗತ್ತ ಮರುಳೆ !

### (೬) ವಿವರಣ ಚಿಹ್ನ (:) :—

ವಾಕ್ಯದ ಅರ್ಥವನ್ನು ವಿವರಿಸುವಲ್ಲಿ ಇದು ಬರುವುದು.

ಉ :—ನುಡಿದಂತೆ ನಡೆ : ಮಾತಿಗೂ ಕೃತಿಗೂ ಸಂಬಂಧವಿರಲಿ.

### (೭) ಗೀಟು (—) :—

(೧) ವಿಚಾರದ ಪ್ರವಾಹವು ಒಮ್ಮೆಲೆ ನಿಂತುದನ್ನು—ಅದರಲ್ಲಿ ಒಮ್ಮೆಲೆ ಆದ ಬದಲನ್ನು ಇದು ಸೂಚಿಸುವುದು.

ಉ :—ನಾನಿಂದು ಪ್ರತಿಕೀರ್ತಿಯಾಗಿದ್ದರೆ—ಇರಲಿ, ಅದರ ಆಲೋಚನೆ ಈಗೇಕೆ ?

### (೮) ವಿವರಣ ಚಿಹ್ನೆ ಮತ್ತು ಗೀಟು (:—) :—

ಇದು ಉದಾಹರಣೆ—ವಿವರಣೆಗಳನ್ನು ಕೊಡುವಾಗ ಬರುವುದು.

ಉ :—ಪುರುಷಾರ್ಥಗಳು ನಾಲ್ಕು. ಅವು ಯಾವವೆಂದರೆ:—ಧರ್ಮ, ಅರ್ಥ, ಕಾಮ, ಮೋಕ್ಷ.

ಸುಭಾಷಿತ ಕೇಳದವರಾರೆಂದರೆ :—ಮುಕ್ತರು, ಪಶುಗಳು.

### (೯) ಅವತರಣ ಚಿಹ್ನೆ (" ") :—

ಅವತರಣಗಳನ್ನು ಬರೆಯುವಾಗಲೂ, ಪ್ರತ್ಯಕ್ಷ ಕಥನದಲ್ಲಿ ಪ್ರತ್ಯಕ್ಷ ಆಡಿದ ಮಾತುಗಳನ್ನು ಬರೆಯುವಾಗಲೂ, ಇದನ್ನು ಉಪಯೋಗಿಸುವರು.

ಉ :—" ಕುಲಂ ಕುಲಮಲ್ತು; ಛಲಂ ಕುಲಂ " ಎಂದುಸುರಿದನಾ ಕರ್ಣರಾಯ.

ನಮ್ಮ ಸಮಾಜವು ಒಂದು " ಶಿಸ್ತಿಲ್ಲದ ಸಂತೆ."

### ಅಭ್ಯಾಸ ೮.

ಮುಂದಿನ ಅವತರಣಗಳಲ್ಲಿ (Extracts) ಸರಿಯಾದ ವಿರಾಮ ಚಿಹ್ನೆಗಳನ್ನು ಸೇರಿಸಿ ಬರೆಯಿರಿ.

(೧) ಈಗ ನಮ್ಮ ದೇಶದವರೆಲ್ಲ ವಿದ್ಯಾರ್ಥಿಗಳೂ ಅಧಿಕಾರಸ್ಥರೂ ಎಲ್ಲ ಪ್ರಭಾವಶಾಲಿಗಳೂ ಒಂದು ತತ್ವವನ್ನು ಮನಸ್ಸಿನಲ್ಲಿ ಸ್ಫುಟವಾಗಿ ಧರಿಸಬೇಕಾಗಿದೆ ನಮ್ಮ ಕನ್ನಡದ ಉತ್ಸಾಹ ಕೇವಲ ಭಾವಗಪ್ಪದವಲ್ಲ (Sentiment) ಅದು ವಿಚಾರಪೂರ್ವಕವಾದ ತತ್ವಸಿದ್ಧಾಂತ ಮತ್ತು ಸದ್ಯಃಪ್ರಯೋಜನ ದೃಷ್ಟಿಯುಳ್ಳ ನೀತಿ ನಿರ್ಣಯ ಈ ವಿಚಾರದಲ್ಲಿ ಮೊಟ್ಟ ಮೊದಲನೆಯ ಸಂಗತಿಯೇನೆಂದರೆ ಕನ್ನಡ ಈ ಹೊತ್ತು ಸರಿ ಸುಮಾರು ಎರಡು ಕೋಟಿ ಪ್ರಜೆಗಳಲ್ಲಿ ಜೀವಂತವಾಗಿರುವ ಭಾಷೆ ಅವರ ದಿನಚರಿಯ ಬದುಕಿನ ಭಾಷೆ ಇಷ್ಟು ಬಹುತೆಯ ಜನರ ನಿತ್ಯ ವ್ಯವಹಾರ ಅವರ ಜ್ಞಾನಾರ್ಜನೆ ಅವರ ಸುಖಸಂಪತ್ಸಾಧನೆ ಅವರ ಸಾಹಸ ಶೌರ್ಯಗಳು ಅವರ ಲೋಕಯಾತ್ರೆ ಅವರ ಬಂಧವಿಮೋಚನೆ ಅವರ ಜನ್ಮ ಸಾರ್ಥಕ್ಯ ಇದೆಲ್ಲ ಕನ್ನಡದ ಮೂಲಕವೇ ಆಗಬೇಕಾಗಿದೆ ಮನುಷ್ಯ ಪ್ರಪಂಚದ ಇಷ್ಟೊಂದು ದೊಡ್ಡ ಪಂಗಡಕ್ಕೆ ಕನ್ನಡವೇ ಇರುವ ಜೀವನೋತ್ಕೃಷ್ಟತಾ ಸಾಧನ ನಾವು ಕನ್ನಡಕ್ಕೆ ಬೆಲೆ ಕೊಡತಕ್ಕದ್ದು ಈ ಗಟ್ಟಿ ಕಾರಣದಿಂದ ಅವಿಚಾರ ಮೋಹದಿಂದಲ್ಲ ಪ್ರತ್ಯಕ್ಷ ಫಲದ (Practical) ಯೋಚನೆ ಕನ್ನಡದ ಕೂಗನ್ನು ಮೋಹ ಭ್ರಾಂತಿಯೆಂದು ತಾತ್ಸಾರ ಮಾಡುವ ಪದವೀಗರ್ವಿಷ್ಠರು ಈ ತತ್ವವನ್ನು ಗ್ರಹಿಸಬೇಕು ನೂರಾರು ಲಕ್ಷ ಸಂಖ್ಯೆಯ ಜನರ ಉದ್ಧಾರಕ್ಕೆ ಕನ್ನಡದ ಹೊರತು ಬೇರೆ ಸಾಧಕವಾವುದೂ ಇಲ್ಲ ಕನ್ನಡ ಭಾಷೆಯ ಶ್ರೇಯಸ್ಸು ಎಂದರೆ ಕನ್ನಡ ಜನತೆಯ ಶ್ರೇಯಸ್ಸು ಕನ್ನಡ ಜನರ ಶ್ರೇಯಸ್ಸಿಗಾಗಿ ಕನ್ನಡ ಭಾಷೆಯ ಶ್ರೇಯಸ್ಸು

(೩) ಮುಚ್ಚಿ ಬಾಯಿ ಸಾಕು ಬೇಕಾದರೆ ತಗೊಂಡು ಹೋಗು ಇಲ್ಲದಿದ್ದರೆ ಬಿಟ್ಟು ಹೋಗು ಅಪ್ಪಾ ಒಂದು ದಿನ ಕೈಲಾಗದೆ ಬರದಿದ್ದಕ್ಕೆ ಒಂದು ವಾರದ ಸಂಬಳ ಹಿಡಿದುಬಿಟ್ಟರೆ ಹ್ಯಾಗಪ್ಪಾ ಮಾಡೋದು ನೋಡಿದರೆ ಕೂಲಿ ಮಜೂರರು ನೋಡಿದರೆ ದಿವಾನರಿಗಿಂತಲೂ ಹೆಚ್ಚು ಅಂಥಾ ದರ್ಬಾರೇನು ಮಾಡಿದೆನಪ್ಪಾ ನಾನು. ದರ್ಬಾರ ರಲ್ಲಿದೆ ಮತ್ತೇನು ನಿನಗೆ ಕೆಲಸಕ್ಕೆ ಬರೋದಕ್ಕೆ ಕೈಲಾಗದಿದ್ದರೆ ಬಿಡು. ನಮಗೆ ತಿಳಿಸ ಬೇಕಾಗಿತ್ತು.

(೪) ಈ ಗ್ರಂಥವನ್ನು ಓದಬೇಕೆಂದು ಇದನ್ನು ಬರೆದವನು ಯಾರನ್ನೂ ಆಗ್ರಹ ಪಡಿಸುವದಿಲ್ಲ. ಓದದಿರಲು ಸ್ವಾತಂತ್ರ್ಯವಿರಲು ಓದಿ ಬಿಟ್ಟಾಗುವದು ತರವಲ್ಲ. ಒಮ್ಮೆ ಯಾವರೂ ಈ ಗ್ರಂಥವನ್ನು ಬೆಲೆಗೆ ಕೊಂಡರೆ ಅದನ್ನು ಖಾಲಿ ಉಕ್ಕಿನ ಟ್ರಂಕಿನೊಳಗಾಗಲಿ ಅದರಂತೆ ಭದ್ರ ಬೀರುವಿನಲ್ಲಾಗಲಿ ಇರಿಸಿ ನಿತ್ಯವೂ ಪೂಜಿಸಿದಲ್ಲಿ ಮಹಾ ಪುಣ್ಯವಿದೆಯೆಂದೂ ಮುಂದಿನ ಜನ್ಮದಲ್ಲಿ ಅವರಿಗೆ ಮಿದುಳೆಂಬ ಕಟ್ಟು ಹೊರೆಯು ತಪ್ಪೀತೆಂದೂ ಇಲ್ಲಿ ಸೂಚಿಸುತ್ತೇವೆ.

---

# ೬. ಕತೆಗಳು

## ೧. ಎಂದರೇನು ?

**ಕತೆಯನ್ನ**ರಿಯದ ಮಾನವರಿಲ್ಲ. ಮಾನವನ ಜೀವನದೊಡನೆ ಬೆಳೆದು ಬಂದ ವಿಷಯವದು. ಬಾಲ್ಯದಲ್ಲಿಯ ಅಜ್ಜಿಯ **ಕಟ್ಟುಕತೆಗಳು**, ಸ್ವಲ್ಪ ತಿಳಿವು ಮೈದಾಳಿದೊಡನೆ ಕೇಳಿದ ಹಿರಿಯರ **ನೀತಿಕತೆಗಳು**, ಮುಂದೆ ಪ್ರೌಢಾವಸ್ಥೆಯಲ್ಲಿ ಓದಿದ ಸಾಹಿತಿಗಳ **ಸಣ್ಣಕತೆಗಳು**, ಕಥೆಯ ಮೂರು ಪ್ರಧಾನ ಅವಸ್ಥಾಂತರಗಳು. ಮೊದಲನೆಯದರ ಉದ್ದೇಶವು ಬರೀ **ರಂಜನೆ**; ಎರಡನೆಯದರ ಗುರಿಯು ಬರೀ **ಬೋಧನೆ**; ಮೂರನೆಯದರಲ್ಲಿ ಇವೆರಡರ **ಮಧುರ ಮಿಲನ**ವಾಗಿರುವುದು.

## ೨. ಬರೆಯುವುದೇತಕ್ಕೆ ?

ಕತೆಗಳಿಂದ ರಂಜನವಾಗುವುದಲ್ಲದೆ ತಿಳಿವೂ ದೊರೆಯುವುದು. ನಮ್ಮ ಕಂಗಳಲ್ಲಿ ಸರಿಯಾದ ಅಂಜನವು ಬಿದ್ದು ಅವು ಚೆನ್ನಾಗಿ ತೆರೆಯುವವು. ಈ ಮೇರೆಗೆ **ಪ್ರಮೋದ ಪ್ರಬೋಧ**ಗಳೆರಡೂ, ಆನಂದ ಬೋಧೆಗಳೆರಡೂ, ಇವುಗಳಿಂದ ಸಾಧ್ಯವಾಗುವ ಕಾರಣ ಇವುಗಳ ಮಹತ್ವವು ಅಷ್ಟಿಷ್ಟೆಂದಲ್ಲ. ಮೇಲಾಗಿ '**ಸಣ್ಣ ಕತೆಯು**' **ಮುಂದಿನ ಯುಗದ ಒಂದು ಪ್ರಧಾನ ಕಲಾಕೃತಿಯು**. ಆದುದರಿಂದ ಅದರ ಪರಿಚಯವನ್ನು ಚೆನ್ನಾಗಿ ಮಾಡಿಕೊಳ್ಳುವುದು ಅತ್ಯವಶ್ಯ.

'**ಸಣ್ಣ ಕತೆಯು ಅಲ್ಪ ಜೀವಿಗಳ ಮಹಾಕಾವ್ಯ.**' ಅದು ಸಾಮಾನ್ಯರ ಜೀವನದಲ್ಲಿಯ ಕೆಲವು ಉಜ್ವಲ ಪ್ರಸಂಗಗಳನ್ನೂ ಕೆಲವು ಅಕಲ್ಪಿತ ಅಧಃಪತನದ ಪ್ರಸಂಗಗಳನ್ನೂ ಚಿತ್ರಿಸುವುದು. ಹೀನ-ದೀನರ ಚಾರಿತ್ರ್ಯವನ್ನು ಚಿತ್ರಿಸುವ ಹಿರಿದಾದ ಸಾಧನವಿದು. ಆದುದರಿಂದ ಇಂಥ ಸಾಧನವನ್ನು ಸರಿಯಾಗಿ ಉಪಯೋಗಿಸುವ ಕೌಶಲವನ್ನು ಮೊದಲಿನಿಂದಲೇ ಪಡೆಯುವುದುಚಿತವಲ್ಲವೇ !

ಕತೆಯ ಸ್ಥಾನವು ವಾಕ್ಯವೃಂದ ನಿಬಂಧಗಳ ಮಧ್ಯದಲ್ಲಿದೆ. ಅದು ವಾಕ್ಯವೃಂದಗಳ ಸಾಲೆಯು. ಅದನ್ನು ಬರೆಯಬಲ್ಲವನು, ನಿಬಂಧವನ್ನು ಬರೆಯಲು ಬೇಕಾದ ಕೆಲವು ಸಂಗತಿಗಳನ್ನು ಸಹಜವಾಗಿ ಅರಿತುಕೊಳ್ಳುವನು.

**೩. ಬರೆಯುವುದೆಂತು ?**

ಕತೆಗಳ ಬರಹದಲ್ಲಿ ಮೂರು ಮೆಟ್ಟಲುಗಳನ್ನು ಕಲ್ಪಿಸಬಹುದು. ಅವನ್ನು ಕ್ರಮದಿಂದ ಏರಿದವನು ಕತೆಗಳನ್ನು ಚೆನ್ನಾಗಿ ಬರೆಯಬಲ್ಲನು.

**೧ನೆಯ ಮೆಟ್ಟಲು :—**

(೧) ಮಾದರಿಯ ಕತೆಯೊಂದನ್ನು ಚೆನ್ನಾಗಿ ಓದಿ ಅದರ ಮುಖ್ಯಾಂಶಗಳನ್ನು ಬರೆದಿಡಬೇಕು.

(೨) ತರುವಾಯ ಪುಸ್ತಕವನ್ನು ಮುಚ್ಚಿಟ್ಟು ಆ ಕತೆಯನ್ನು ಬರೆಯಲು ಯತ್ನಿಸಬೇಕು.

(೩) ಕೊನೆಗೆ ಮೂಲಕತೆಯೊಡನೆ ಅದನ್ನು ಸರಿಹೋಲಿಸಿ ಅದರಲ್ಲಿ ಅವಶ್ಯವಿದ್ದ ತಿದ್ದುಪಡಿಯನ್ನು ಮಾಡಬೇಕು.

(೪) ಬರಬರುತ್ತ ಕತೆಯನ್ನು ಓದಿದ ಕೂಡಲೆ ಈ ರೀತಿ ಬರೆಯದೆ ಕೆಲಕಾಲ ಕಳೆದ ಮೇಲೆ ಬರೆಯಬೇಕು.

**೨ನೆಯ ಮೆಟ್ಟಲು :—**

(೧) ಕತೆಯ ಕೊಟ್ಟ ಕೆಲವು ಅಂಶಗಳನ್ನು ಚೆನ್ನಾಗಿ ಪರಿಶೀಲಿಸಿ ಅವುಗಳ ಸಹಾಯದಿಂದ ಮನಸ್ಸಿನಲ್ಲಿಯ ಕತೆಯೊಂದನ್ನು ಕಟ್ಟಬೇಕು. ಈ ಅಂಶಗಳ ಅಸ್ಥಿಪಂಜರದಲ್ಲಿ ಜೀವಕಳೆಯನ್ನು ತುಂಬಬೇಕು.

(೨) **ವರ್ಣನೆಗಳೂ-ಸಂಭಾಷಣೆಗಳೂ** ಕತೆಯ ಸ್ನಾಯು, ಚರ್ಮಗಳು; **ಭಾವವು** ಅದರ ಜೀವ. ಇವನ್ನೆಲ್ಲ ಉಚಿತ ಸ್ಥಲದಲ್ಲಿ ಸೇರಿಸಿ ಕತೆಗೆ

ಸಜೀವ ವಸ್ತುವಿನ ಸೌಂದರ್ಯವನ್ನು ನೀಡಬೇಕು. ವರ್ಣನೆಯಲ್ಲಿ ಸುಸಂಗತಿಯನ್ನು ಕಾಯ್ದು, ಸಂಭಾಷಣೆಯಲ್ಲಿ ಪಾತ್ರೋಚಿತ ಮಾತುಗಳನ್ನು ಉಪಯೋಗಿಸಬೇಕು.

(೩) ಅಂದರೆ ಕತೆಯು ಅಂದವಾಗಿ ಓದುಗರಿಗೆ ಆನಂದವನ್ನು ಕೊಡುವುದು.

**೩ನೆಯ ಮೆಟ್ಟಲು :—**

(೧) ಕೊಟ್ಟ ವಿಷಯವನ್ನು ಕುರಿತು ಹೊಸ ಕತೆಯನ್ನು ಕಲ್ಪಿಸುವುದು. ಇದಕ್ಕೆ ಕಲ್ಪನಾಶಕ್ತಿಯು ನಾಕಾಗುವಷ್ಟು ಬಲಿಯಬೇಕು. ವಿಷಯಕ್ಕೆ ತಕ್ಕ ಸನ್ನಿವೇಶಗಳನ್ನೂ ಅವಕ್ಕೆ ತಕ್ಕ ಪಾತ್ರಗಳನ್ನೂ ನಿರ್ಮಿಸುವ ಶಕ್ತಿ ಬೇಕು.

(೨) ಮೇಲಿನ ಎರಡು ಮೆಟ್ಟಲುಗಳನ್ನೇರಿದವನು ಮುಂದಿನದನ್ನು ಏರಲು ಸಮರ್ಥನಾಗುವನು.

**೪. ಮಾದರಿಗಳು :—**

## ೧. ಮೂರ್ಖ ಶಿಷ್ಯರು

ಒರ್ವ ಜಾಣ ಗುರುಗಳಿಗೆ ಹಲವು ಮರುಳ ಶಿಷ್ಯರಿದ್ದರು. ಇಂಥ ಗುರುಗಳಿಗೆ ಇಂಥ ಶಿಷ್ಯರು ಹೇಗೆ ಎಂಬುದೊಂದು ಬಿಡಿಸಲಾಗದ ಒಗಟು. ಬೆಳಕಿನ ಅಡಿಯಲ್ಲಿ ಕತ್ತಲಿರುವುದಿಲ್ಲವೇ ! ಇದೇ ಅದರ ಉತ್ತರ.

ಗುರುಗಳೊಮ್ಮೆ ಬೇರೊಂದು ಹಳ್ಳಿಗೆ ನಡೆದಿದ್ದರು. ಶಿಷ್ಯರು ಅವರನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ, ಅದನ್ನು ಹೊತ್ತುಕೊಂಡಿದ್ದರು. ದಾರಿಯಲ್ಲಿ ಪಲ್ಲಕ್ಕಿಯು ಒಮ್ಮೆ ಬಾಗಿದ್ದರಿಂದ ಒಳಗಿನ ನೀರಿನ ಕಮಂಡಲು ಕೆಳಗೆ ಬಿದ್ದಿತು. ಧ್ಯಾನಮಗ್ನರಾದ ಗುರುಗಳಿಗೆ ಅದು ಕಾಣಲಿಲ್ಲ. ಇಳಿದುಕೊಳ್ಳುವ ಸ್ಥಳಕ್ಕೆ ಬಂದು ನೋಡುವಷ್ಟರಲ್ಲಿ ಕಮಂಡಲು ಇರಲಿಲ್ಲ.

ಆಗ ಗುರುಗಳು ಆ ಮರುಳರನ್ನು ಕರೆಯಿಸಿದರು. ಶಿಷ್ಯರು ಅವರೆದುರು ಕೈಮುಗಿದು ನಿಂತರು. ಗುರುಗಳು ಸಿಟ್ಟಿನಿಂದ ಗದ್ದರಿಸಿದರು :

“ ಕಮಂಡಲುವೆಲ್ಲಿ ? ”

“ ದಾರಿಯಲ್ಲಿ ! ಮಹಾಸ್ವಾಮಿ ! ”

“ ನೀವದನ್ನು ತರಲಿಲ್ಲೇಕೆ ? ”

“ ನಮಗೆ ಹಾಗೆ ತಾವು ತಿಳಿಸಿರಲಿಲ್ಲ, ಪ್ರಭೋ ! ”

"ಮಹಾಮೂರ್ಖರೇ! ದಾರಿಯಲ್ಲಿ ಬಿದ್ದ ಒಡವೆಗಳನ್ನು ತರಬೇಕೆಂದು ಬೇರೆ ಹೇಳಬೇಕೇ? ಇಷ್ಟು ತಿಳಿಯಬಾರದೇ ನಿಮಗೆ?"

ಗುರುಗಳು ಕೋಪದಿಂದ ಕೆಂಡದಂತಾದರು.

"ಇನ್ನು ಮುಂದೆ ಎಚ್ಚರ! ಪಲ್ಲಕ್ಕಿಯಿಂದೇನಾದರೂ ಬಿದ್ದರೆ ಅದನ್ನು ತಪ್ಪದೆ ತರಬೇಕು. ತಿಳಿಯಿತೇ!" ಹೀಗೆ ಹೇಳಿ ಪಲ್ಲಕ್ಕಿಯಲ್ಲಿಯ ವಸ್ತುಗಳ ಪಟ್ಟಿಯೊಂದನ್ನು ಶಿಷ್ಯರ ಕೈಯಲ್ಲಿ ಕೊಟ್ಟರು.

ಕೆಲವು ದಿನಗಳ ತರುವಾಯ ಅವರು ಹಳ್ಳ ಒಂದನ್ನು ದಾಟಿ ಹೋಗಬೇಕಾಗಿ ಬಂತು. ಹಳ್ಳವು ನೆರೆ ಬಂದುದರಿಂದ ತುಂಬಿ ಸೂಸುತ್ತಿತ್ತು. ಆದರೆ ಅದರೊಳಗಿಂದ ಶಿಷ್ಯರು ಧೈರ್ಯದಿಂದ ಹಾದು ನಡೆದರು. ಒಂದೆರಡು ಹೆಜ್ಜೆಯಲ್ಲಿಯೇ ಆಚೆಯ ದಂಡೆಯನ್ನು ಮುಟ್ಟುವವರು. ಅಷ್ಟರಲ್ಲಿಯೇ ಒಬ್ಬನ ಕಾಲು ಜಾರಿದ್ದರಿಂದ ಪಲ್ಲಕ್ಕಿಯು ಹೊರಳಿತು. ಗುರುಗಳು ಪ್ರವಾಹದಲ್ಲಿ ಉರುಳಿದರು.

ಶಿಷ್ಯರು ಅಂತೂ ಇಂತೂ ಮಾಡಿ ದಂಡೆಯನ್ನೇರಿದರು. "ಎಲೇ! ಗುರುಗಳನ್ನು ತೆಗೆಯೋಣಯ್ಯಾ!" ಎಂದನೊಬ್ಬ. "ಪಟ್ಟಿಯಲ್ಲಿಯ ಒಡವೆಗಳನ್ನು ಮೊದಲು ನೋಡಿ!" ಎಂದರುಳಿದವರು. ಪಟ್ಟಿಯನ್ನು ತೆಗೆದರು. ಜಾಗ್ರತೆಯಾಗಿ ಓದಿದರು. ಅದರಲ್ಲಿ ಬರೆದಿದ್ದ ಒಡವೆಗಳನ್ನೆಲ್ಲ ಹೊರತೆಗೆದರು. ಗುರುಗಳನ್ನು ಮಾತ್ರ ಬಿಟ್ಟುಬಿಟ್ಟರು.

ಯಾಕಂದರೆ ಅವರ ಹೆಸರು ಪಟ್ಟಿಯಲ್ಲಿರಲಿಲ್ಲ.

**ಕಥೆಯ ರೂಪರೇಷೆಯು** (Outline):— ಈ ಕಥೆಯಲ್ಲಿಯ ಮುಖ್ಯಾಂಶಗಳನ್ನು ಕೆಳಗೆ ಕಾಣಬಹುದು.

೧. **ಉಪಕ್ರಮ**:—ಜಾಣ ಗುರುಗಳು—ಮೂರ್ಖ ಶಿಷ್ಯರು. ಒಂದು ಬಿಡಿಸಲಾಗದ ಒಗಟು.

೨. **ಕಥಾವಸ್ತು**:— (೧) ಗುರುಗಳ ಸಂಚಾರ—ದಾರಿಯಲ್ಲಿ ಕಮಂಡಲು ಪಲ್ಲಕ್ಕಿಯಿಂದ ಬೀಳುವುದು—ಧ್ಯಾನಸ್ಥ ಗುರುಗಳು—ಶಿಷ್ಯರದನ್ನು ಎತ್ತುವುದಿಲ್ಲ—ಊರನ್ನು ಮುಟ್ಟಿದಾಗ ಗುರುಗಳು ಅದಕ್ಕಾಗಿ ಶಿಷ್ಯರನ್ನು ಬಯ್ಯುವರು—ಎಲ್ಲ ಒಡವೆಗಳ ಪಟ್ಟಿಯನ್ನು ಮಾಡಿಕೊಟ್ಟು ಅವೆಲ್ಲವನ್ನೂ ತರಹೇಳುವರು.

(೨) ಇನ್ನೊಮ್ಮೆ ತುಂಬಿದ ಹಳ್ಳವನ್ನು ದಾಟುವ ಪ್ರಸಂಗ:—ಶಿಷ್ಯರ

ಕಾಲು ಜಾರಿ ಪಲ್ಲಕ್ಕಿಯಿಂದ ಗುರುಗಳೂ ಅನ್ಯವಸ್ತುಗಳೂ ನೀರಿನಲ್ಲಿ ಮುಳುಗಿದವು—ಪಟ್ಟಿಯಲ್ಲಿಯ ಒಡವೆಗಳನ್ನೆಲ್ಲ ತೆಗೆದರು—ಗುರುಗಳನ್ನು ಬಿಟ್ಟರು.

೩. **ಉಪಸಂಹಾರ**:—ಅವರ ಹೆಸರು ಪಟ್ಟಿಯಲ್ಲಿರಲಿಲ್ಲ.

## ೨. ಎಡಬಿಡಂಗಿ

ಜರಿರುಮಾಲ ರಾಮರಾಯರು ಪತ್ನೀಪುತ್ರಸಮೇತರಾಗಿ ರೈಲಿನಲ್ಲಿ ಬಿಜಯಮಾಡಿಸಿದ್ದರು. ಅವರು ಕುಳಿತಿದ್ದ ಗಾಡಿಯ ಬಳಿ ಕುರುಡನೊಬ್ಬನು ಬಂದು 'ಧರಮ ಸೋಮಿ!' ಎಂದ. ರಾಯರು ಪಂಚೆಯ ಜರಿಯನ್ನು ತೀಡುತ್ತ "ಸೂ—ಮಗನೆ! ಧರ್ಮವಂತೆ ಧರ್ಮ! ನಾವು ಧರ್ಮ ಎಂದು ಕೊಡುವುದು, ಈ ಸೂ—ಮಗ ಬೀಡಿ ಹೊಡೆಯುವುದು! ಏನೂ ಇಲ್ಲ ಹೋಗು!" ಎಂದು ಗದರಿಸಿದರು.

'ಒಂದು ಕಾಸು ಸೋಮಿ'

'ಒಂದು ಕಾಸು ಇಲ್ಲ, ಅರಕಾಸು ಇಲ್ಲ; ತೊಲಗು!'

ಭಿಕ್ಷುಕನು ತೊಲಗಿದನು. ರೈಲೂ ತೊಲಗಿತು.

'ಈ ಸೂ—ಮಕ್ಕಳಿಗೆ ಕೊಡುವುದಕ್ಕೆ ನಾವು ಕಷ್ಟಪಟ್ಟು ಸಂಪಾದಿಸುವುದು!' ಎಂದರು ರಾಯರು.

* * * *

'ಅಣ್ಣ, ಕಾವೇರಿ ಬಂತು. ಕಾವೇರಿ!' ಎಂದು ರಾಯರ ಮಕ್ಕಳೆಲ್ಲ ಕೂಗಿದರು.

'ಕಾವೇರಿಗೆ ಹಾಕುವುದಕ್ಕೆ ಕಾಸು ಎಲ್ಲಾ ಇಟ್ಟುಕೊಂಡಿದ್ದೀರೋ ಇಲ್ಲವೋ?' ಎಂದು ರಾಯರು ಕೇಳಿದರು. **ಕಾವೇರಿಗೆ ಕಾಸೆಸೆಯುವುದು ಕೈವಲ್ಯಕ್ಕೆ ಕಾಲುಮಣೆ** ಎಂದು ಅವರು ಕಲಿತಿದ್ದರು. ಮಕ್ಕಳಿಗೂ ಕಲಿಸುತ್ತಿದ್ದರು.

'ಅಣ್ಣ! ನನ್ನ ಕಾಸೆಲ್ಲೋ ಕಾಣೆ ಅಣ್ಣ!' ಎಂದು ರಾಮರಾಯರ ಎರಡನೆಯ ಮಗಳು ಅಳತೊಡಗಿದಳು.

'ಪರವಾ ಇಲ್ಲಮ್ಮಾ, ಇನ್ನೊಂದು ಕಾಸು ಕೊಡುತ್ತೇನೆ. ಅಳಬೇಡ' ಎಂದು ರಾಯರು ನದಿ ಎಲ್ಲಿ ಕಳೆದು ಹೋಗುತ್ತದೋ ಎಂಬ ಅವಸರದಿಂದ ಗಣೇಶನ ಹೊಟ್ಟೆಯಂತಿದ್ದ ತಮ್ಮ ಹಣದ ಚೀಲವನ್ನು ಮಡಿಲಿಗೆ ಬಗ್ಗಿಸಿಕೊಂಡು ಬಿದಕಿದರು. ಅವರಲ್ಲಿ ಬೆಳ್ಳಿಯ ಎಂಟಾಣೆಗಿಂತ ಚಿಕ್ಕ ನಾಣ್ಯವು

ಕಣ್ಣಿಗೆ ಕಾಣಿಸಲಿಲ್ಲ. ರಾಯರು, 'ತಗೊ! ತಗೊ! ಇದನ್ನೇ ಹಾಕು!' ಎಂದು ಅವಸರದಲ್ಲಿ ಎಂಟಾಣೆಯ ನಾಣ್ಯವನ್ನೇ ಕಾವೇರಿಗೆ ಬಿಸಾಡಿಸಿ, ಜಿಟ್ಟೆ ಕಡಿವವರಂತೆ ನಿಟ್ಟುಸಿರಿಟ್ಟರು.

ಆ ಚೀಲಕ್ಕೆ ಪುನಃ ಹಣವನ್ನು ತುಂಬಿಕೊಳ್ಳುವಾಗ ರೂಪಾಯಿಗಳ ಮರೆಯಿಂದ ಒಂದು ಬಿಡಿ ಕಾಸು ಇಣಿಕಿ ನೋಡಿ, 'ನೋಡಿದೆಯೋ! ಕೊಟ್ಟೆ ನಿನಗೆ ಗಸ್ತು!' ಎಂದು ಕಣ್ಣು ಹಾರಿಸಿತು.

ರಾಯರವನ್ನು ನೋಡಿದರು. ಬೆಪ್ಪಾದರು. ಗೋಳೋ ಎಂದು ಅತ್ತರು.

—ಜಿ. ಪಿ. ರಾ.

## ೩. ಅಸಂತೋಷ

ಕಮಲಕೆರೆಯು ಬಲು ಕಮನೀಯವಾದುದು. ಸುತ್ತಲಿನ ಮರ ಬಳ್ಳಿಗಳ ಹಸಿರು ಚೌಕಟ್ಟಿನಲ್ಲಿ ಹೊಳೆಯುವ ತಿಳಿಯಾದ ನೀರಿನ ವಿಸ್ತಾರವು ಅದಕ್ಕೆ ಅದ್ಭುತವಾದ ಕನ್ನಡಿಯ ಸೊಬಗನ್ನು ದಯೆಪಾಲಿಸಿತ್ತು. ಭೂದೇವಿಯ ಸೌಂದರ್ಯವನ್ನು ಪ್ರತಿಬಿಂಬಿಸುವ ಪ್ರಚಂಡ ಕನ್ನಡಿಯೋ ಅದು.

ಕೆರೆಯಲ್ಲಿ ಮೀನುಗಳ ಜಲಕೇಳಿ, ದಡದ ಗಿಡಗಳಲ್ಲಿ ಹಕ್ಕಿಗಳ ಹಾರಾಟ—ಚೀರಾಟ, ಸಂತತವಾಗಿ ಸಾಗುವವು. ಸಂತಸದ ವಾತಾವರಣವನ್ನು ಪಸರಿಸುವವು.

ಹೀಗಿರಲು ಅದೊಂದು ದಿನ ಹಕ್ಕಿಯೊಂದು ಮೀನಿನೊಡನೆ ಗೆಳೆತನವನ್ನು ಬೆಳೆಯಿಸಿತು. ಒಮ್ಮೆ ಹಕ್ಕಿಯು ಮೀನನ್ನು ಕೇಳಿತು: 'ಇಂಥ ನಿರ್ಮಲ ಜಲದಲ್ಲಲೆಯುವುದು ಅತಿ ಸೋಜಿಗದ ಸಂಗತಿಯಲ್ಲವೇ! ಎಂಥ ಪುಣ್ಯಾತ್ಮನಯ್ಯ ನೀನು!' ಆಯಿತು—ಮೀನಮಹಾಶಯರು ಅಷ್ಟರಿಂದ ಉಬ್ಬಿದರು. ತನ್ನ ಜಲವಿಹಾರವನ್ನು ಬಾಯ್ತುಂಬ ಹೊಗಳಿದರು. ಅಲ್ಲಿಯ ಸುಖಾನುಭವವನ್ನು ಅತಿಯಾಗಿ ವರ್ಣಿಸಿದರು. ಕೊನೆಗೆ ಅದು ಕೇಳಿತು: 'ಏನಯ್ಯಾ! ಬಾನ ಬಯಲಲ್ಲಿಯ ನಿನ್ನ ಸ್ವೈರ್ಯ ಸಂಚಾರವು ನಿಜವಾಗಿ ಒಳ್ಳೆ ಹೆಮ್ಮೆಯ ವಿಷಯ—ಆನಂದದ ಆಗರ. ಅಲ್ಲವೇ? ನೀನೇ ಧನ್ಯನಯ್ಯಾ! ಎಂಥ ಅದ್ಭುತ ಸಾಮರ್ಥ್ಯ ನಿನ್ನದು!'

ಇಷ್ಟರಿಂದ ಹಕ್ಕಿಯ ಅಹಂಕಾರವೂ ತಲೆಗೇರಿತು. ಅದು ಬಾನಿನ ಬಣ್ಣನೆಯನ್ನು ಯಥೇಚ್ಛವಾಗಿ ಮಾಡಿತು. ಪರಸ್ಪರರ ಬಣ್ಣನೆಯಿಂದ

ಇಬ್ಬರ ಬಾಯಿಗೂ ನೀರು. ತನ್ನ ಅವಸ್ಥೆಯ ಬಗ್ಗೆ ಇಬ್ಬರಿಗೂ ಅಸಮಾಧಾನ–ಕಸಿವಿಸಿ.

ಈ ಅಸಂತೋಷವು ಹೆಚ್ಚಾಗಿ, ಒಂದು ದಿನ, ಮೀನವು ನೀರನ್ನು ತೊರೆಯಿತು. ಹಕ್ಕಿಯು ಅದನ್ನೈದಿ ಸೇರಿತು. ಮರವನ್ನೇರಿ ಗಗನದಲ್ಲಿ ಹಾರಲು ಹವಣಿಸಿದರು ಮೀನಮಹಾಶಯರು. ನೀರನ್ನು ಸೇರಿ ಅದರ ನೆಲೆಯನ್ನರಿಯಲು ಹೊರಟರು ಪಕ್ಷಿಪಂಡಿತರು. ಆದರೆ ಮೀನವು ಮರವನ್ನು ಮುಟ್ಟುವ ಮೊದಲೇ ಮರಣದ ದಾರಿಯನ್ನು ಹಿಡಿಯಿತು. ನೀರಿನ ನೆಲೆಯನ್ನರಿಯುವ ಪೂರ್ವದಲ್ಲಿಯೆ ಕಮಲದ ಬಳ್ಳಿಯಲ್ಲಿ ಸಿಲುಕಿ ಹಕ್ಕಿಯು ಹರಣಕ್ಕೆರವಾಯಿತು.

ಅಂದು ಉಳಿದ ಹಕ್ಕಿಗಳೆಂದವು : ‘ಎಂಥ ಉಪಕಾರ ಕೆರೆಯದು ? ನಮಗೆ ಆಗಾಗ ಅದು ಮೀನಿನ ಸವಿಯನ್ನವನ್ನು ನೀಡುವದು.’

ಉಳಿದ ಮೀನುಗಳುಸುರಿದವು : ‘ಎಂಥ ಉಪಕಾರ ಈ ಮರ–ಬಳ್ಳಿಗಳದು ? ನಮಗವು ಆಗಾಗ ಹಕ್ಕಿಗಳ ಸವಿಯೂಟವನ್ನು ದಯಪಾಲಿಸುವವು !’

—ಶ್ರೀ. ಗೋ. ಕು.

## ೪. ನಿರ್ಣಯದ ನೈಪುಣ್ಯ

ಒಂದು ಕೂಸಿಗಾಗಿ ತಾಯಂದಿರಿಬ್ಬರ ಕಲಹ. ಕಲಹವು ಅರಸನೆಡೆಗೆ ಹೋಯಿತು. ಅರಸನಿಗೆ ನಿರ್ಣಯ ಕೊಡುವ ಬಿಗಿಯಾದ ಕೆಲಸವನ್ನು ಮಾಡಬೇಕಾಯಿತು.

“ಕೂಸು ನನ್ನದು” ಎಂದಳೊಬ್ಬಳು. “ಅಲ್ಲ! ಅದು ನನ್ನದು” ಒದರಿದಳಿನ್ನೊಬ್ಬಳು. ಚಿಕ್ಕ ಮಗುವಿಗೆ ತಾಯಿಯನ್ನು ಗುರುತಿಸುವುದು ಸಾಧ್ಯವಿರಲಿಲ್ಲ. ಗುರುತಿಸಲು ಸಾಕ್ಷಿದಾರರೂ ಇರಲಿಲ್ಲ.

ಇಂಥ ಸಂದರ್ಭದಲ್ಲಿ ಅರಸನ ಹಿರಿದಾದ ಜಾಣ್ಮೆಯೂ ಹಿಂಜರಿಯಬೇಕಾಯಿತು. ಅವನವರನ್ನು ಮರುದಿನ ಬರಲು ಆಜ್ಞಾಪಿಸಿದನು.

ಮಾರನೆಯ ದಿನ ಅವರು ಬಂದರು. ಇಬ್ಬರೂ ಆ ಕೂಸು ತನ್ನದಿದ್ದ ಬಗ್ಗೆ ಆಣೆಯನ್ನು ಮಾಡಿದರು. ಅವರ ಅಭಿಪ್ರಾಯವನ್ನು ಕೆಲಕಾಲ ಕೇಳಿ ಅರಸನು ನುಡಿದನು :

“ಅಮ್ಮಾ! ನೀವಿಬ್ಬರೂ ಕೂಸನ್ನು ಬೇಡುತ್ತೀರಿ. ನಿಮ್ಮಿಬ್ಬರಿಗೂ ಇದು ದೊರೆಯಲಿ!”

ತರುವಾಯ ತನ್ನ ಸೇವಕನೆಡೆಗೆ ತಿರುಗಿ "ಚೆನ್ನಾ! ಕಡಿ ಈ ಕೂಸನ್ನು! ಒಂದೊಂದು ಭಾಗವನ್ನು ಒಬ್ಬೊಬ್ಬಳಿಗೆ ಕೊಡು!" ಎಂದವ ನನ್ನು ಆಜ್ಞಾಪಿಸಿದನು.

"ನ್ಯಾಯನಿಪುಣ ದೊರೆಯೆ! ನಿನ್ನ ನಿರ್ಣಯವು ಸರಿಯಾಗಿದೆ. ದೇವರು ನಿನ್ನನ್ನು ಹರಸಲಿ!" ಎಂದಳು ಚಿಕ್ಕವಳು. ಹಿರಿಯಳು ಮೌನ ವಾಗಿದ್ದಳು.

"ಯಾಕೆ? ನೀನೇಕೆ ಮಾತಾಡಲೊಲ್ಲೆ?" ಎಂದು ಅರಸನವಳಿಗೆ ಕೇಳಿದನು.

ಕಂಗಳಿಂದ ಕಂಬನಿಗಳು ಸುರಿದವು. ಎದೆಯು ಹಾರತೊಡಗಿತು. ಉಸಿರು ಸರಿಯಾಗಿ ಆಡದಾಯಿತು. ಧ್ವನಿಯು ಗದ್ಗದವಾಯಿತು. ಆಕೆ ನುಡಿದಳು:

"ಚಾಣ್ಮೆಗಾಗಿ ಹೆಸರಾದ ದೊರೆಯೆ! ಇದೇ ನಿನ್ನ ನ್ಯಾಯವೆ? ನಿನ್ನ ನ್ಯಾಯವು ಇಂತಹದಿದ್ದರೆ, ನನಗೇನು ದೂರು ಹೇಳತಕ್ಕದ್ದಿಲ್ಲ! ಈ ಮಗುವನ್ನು ಆಕೆಗೆ ಕೊಡಿ! ನನಗೆ ಬೇಡ! ಎಲ್ಲಿಯಾದರೂ ನನ್ನ ಮುದ್ದು ಮಗುವು ಜೀವಿಸಲಿ!"

ಒಬ್ಬಳಲ್ಲಿಯ ಪ್ರೀತಿ—ಇನ್ನೊಬ್ಬಳಲ್ಲಿಯ ಅಸೂಯೆ ಇವು ನಿಜವಾದ ತಾಯಿಯನ್ನು ಗುರುತಿಸಿದವು. ಅರಸನು ಆ ಕೂಸನ್ನು ಸರಿಯಾದ ತಾಯಿಗೆ ಒಪ್ಪಿಸಿದನು.

## ೫. ಗುಡ್ಡವನ್ನೆತ್ತುವ ಹೆಡ್ಡಪ್ಪ

ಒಂದು ಎತ್ತರವಾದ ಗುಡ್ಡದ ಆಚೆಯಡಿಯಲ್ಲಿ ಅಂದವಾದ ಹಳ್ಳಿ ಯೊಂದು ನೆಲೆಸಿದ್ದಿತು. ನೆರೆಯಲ್ಲಿಯ ಪಟ್ಟಣಕ್ಕೆ ಸಂತೆಗಾಗಿ ಹೋಗಬೇ ಕಾದಾಗೆಲ್ಲ ಆ ಹಳ್ಳಿಗರಿಗೆ ಆ ಎತ್ತರವಾದ ಬೆಟ್ಟವನ್ನು ಏರಿ ಇಳಿಯಬೇಕಾ ಗುತ್ತಿತ್ತು. ಹಗಲು ಕಠಿನವಾದ ಆ ದಾರಿಯು ಇರುಳು ತೀರ ಭಯಂಕರ ವಾಗಿ ಪರಿಣಮಿಸುತ್ತಿತ್ತು. ನುಣುಪಾದ ಬಂಡೆಗಳ ಮೇಲಿಂದ ಕಾಲು ಜಾರುವುದುಂಟು. ಅಂಕಡೊಂಕಾದ ದಾರಿಗಳು ತಪ್ಪಿ ದಾರಿಕಾರರು ಕೊಳ್ಳ ದಲ್ಲಿ ಬೀಳುವ ಸಂಭವ ಬಹಳ. ಕಾಡಿನಲ್ಲಿ ಹಿಂಸ್ರಪಶುಗಳ ಹಾವಳಿಯೂ ಹೆಚ್ಚಾಗಿಯೇ ಇದ್ದಿತು.

"ಈ ತೊಂದರೆಯನ್ನೆಂತು ಹೋಗಲಾಡಿಸಬೇಕು?" ಎಂದು ಹಳ್ಳಿ

ಗರೆಲ್ಲರು ಆಲೋಚನೆಯನ್ನು ಮಾಡಿಯೆ ಮಾಡಿದರು. ಆದರೆ ನಿರ್ಣಯ ವೇನೂ ಆಗಲಿಲ್ಲ. ಒಂದು ದಿನ ಅಲ್ಲಿ ಪರದೇಶಿಯೊರ್ವನು ಬಂದನು. ಅವನ ಕಂಗಳಲ್ಲಿ ಆಶೆಯು ಮಿಂಚಿತ್ತು—ಮುಗುಳ್ನಗೆಯಲ್ಲಿ ಮುಕ್ತಿಯು ಸಂಭವವಿತ್ತು.

"ಒಂದು ವರ್ಷದ ಅವಧಿಯನ್ನು ಕೊಡಿ! ಈ ಬೆಟ್ಟವು ಇಲ್ಲಿ ಇಲ್ಲದಂತೆ ಮಾಡುವೆ!" ಎಂಬುದವನ ಆಶ್ವಾಸನ.

"ಅಲ್ಲಿಯವರೆಗೆ ನಾನೀ ಮಹಾಕಾರ್ಯವನ್ನು ನೆರವೇರಿಸಲು ಬಲಶಾಲಿಯಾಗಬೇಕೆಂದು ನನಗೆ ದಿನಾಲು ಚೆನ್ನಾಗಿ ಉಣಿಸಿರಿ!" ಎಂಬುದು ಅವನ ನಮ್ರ ಪ್ರಾರ್ಥನೆ ಅವರಿಗೆ.

ಹಳ್ಳಿಗರಿಗೆ ಹಿಡಿಸಲಾರದ ಹಿಗ್ಗು. ಅವರೆಲ್ಲರು ತಮ್ಮಲ್ಲಿದ್ದ ಅತ್ಯುತ್ತಮ ಸತ್ವಪೂರ್ಣ ಆಹಾರವನ್ನೆಲ್ಲ ಅವನಿಗೆ ದಿನಾಲು ಒಪ್ಪಿಸಹತ್ತಿದರು. ಇಂಥ ರಕ್ಷಕನನ್ನು ಉಣಿಸುವುದು ಒಂದು ಅಭಿಮಾನದ—ಮರ್ಯಾದೆಯ ಮಾತಾಯಿತು.

ಒಬ್ಬಿಬ್ಬ ವೃದ್ಧರು ಮಾತ್ರ ತಮ್ಮ ಬುದ್ಧಿಯನ್ನು ಕಳೆದುಕೊಳ್ಳಲಿಲ್ಲ. ಮನುಷ್ಯನೆಂತು ಬೆಟ್ಟವನ್ನೆತ್ತುವ ಎಂದವರು ಈ ಕಲ್ಪನೆಯನ್ನು ಅಲ್ಲಗಳೆದರು.

ವರುಷವಾಯಿತು.—ಅದರ ಮೇಲೆ ಒಂದು ದಿನವೂ ಆಯಿತು. ಈ ಅದ್ಭುತ ಪವಾಡವನ್ನು ನಿರೀಕ್ಷಿಸಲು ಜನರೆಲ್ಲ ಅತೀವ ಆತುರರಾದರು.

ಮುಂಜಾವಿನ ಬೆಳಕು ಹರಿಯಿತು. ಹಳ್ಳಿಯ ಹೆಣ್ಣು ಗಂಡೆಲ್ಲ ಆ ಪವಾಡ-ಪುರುಷನನ್ನು ಸುತ್ತುಗಟ್ಟಿದರು. ಉತ್ಸಾಹ—ಆಶೆಗಳು—ನಂಬಿಗೆ ಆದರಗಳು—ಪ್ರಶ್ನೋತ್ತರಗಳು—ಸಂದೇಹ ಕಿವಿ ಮಾತುಗಳು—ಆತುರ ಅಪನಂಬಿಕೆಗಳು ಇವೇ ಅಲ್ಲಿ ನೆರೆದ ಜನರ ಮನಸ್ಸಿನಲ್ಲಿ ಮೂಡಿ ಮಾಯುವಾಗುತ್ತಿದ್ದವು. ಆ ರಕ್ಷಕ-ಪುರುಷನು ಬರೀ ನೋಡುತ್ತಲೇ ನಿಂತನು—ನುಡಿಯುತ್ತಲೆ ನಿಂತನು.

ಆತುರರಾದ ಜನರು ಸಭ್ಯತೆಯನ್ನು ಬದಿಗಿರಿಸಿ ಕೇಳಿದರು. "ಏನಯ್ಯಾ! ವರ್ಷವಂತೂ ಆಯಿತು. ಬೆಟ್ಟವು ಇದ್ದಲ್ಲಿಯೇ ಇದೆಯಲ್ಲ?"

"ಆಃ ಅದರಲ್ಲೇನಿದೆ, ಅದನ್ನು ಇದೇ ಈಗ ಮಾಡಿಯೆ ಬಿಡುವೆನು." ಎಂದು ಅವನು ಒಳ್ಳೆ ಗಾಂಭೀರ್ಯದಿಂದ ತನ್ನ ತೋಳುಗಳನ್ನು ಮೇಲಕ್ಕೇರಿಸಿ, ಸ್ನಾಯುಗಳನ್ನು ಗಟ್ಟಿಯಾಗಿ ಬಿಗಿಹಿಡಿದು, ಕಾಲನ್ನು ಸೆಟಿಸಿ, ಎದೆ

ಯನ್ನು ಮುಂದಕ್ಕೆ ದೂಡಿ, ಆ ಬೆಟ್ಟದೆಡೆಗೆ ಹೋಗಿ ಅದನ್ನು ದಿಟ್ಟಿಸ ಹತ್ತಿದನು.

“ಈ ಬೆಟ್ಟವನ್ನು ಸರಿಸಬೇಕೆ?” ಕೇಳಿದನಾ ಮಾರಾಯ.

“ಅಹುದು!” ಜನರು ಒಮ್ಮೆಲೆ ಉತ್ತರಸನ್ನಿತ್ತರು.

“ಇದು ನೋಡಿ! ನೀವೆಲ್ಲ ಬೆಟ್ಟದ ಸುತ್ತಲು ನಿಲ್ಲಿರಿ. ಮತ್ತು ಇದ ನ್ನೆತ್ತಲು ನೆರವಾಗಿ, ಅದನ್ನು ನನ್ನ ತಲೆಯ ಮೇಲೆ ಹೊರಿಸಿರಿ. ಅಂದರೆ ನಾನದನ್ನೊಯ್ದು ಕಡಲಿನಲ್ಲಿ ಎಸೆಯುವೆ. ನಿಮ್ಮ ದಾರಿಯು ನಿಷ್ಕಂಟಕವಾ ಗುವುದು. ತಿಳಿಯಿತೇ?”

ಹಿರಿಯರು ನಕ್ಕರು. ಪವಾಡಗಳಿಂದ ಬೆಟ್ಟಗಳು ಸರಿಯುವುದಿಲ್ಲ. ಅವನ್ನು ಕಡಿದೇ ದಾರಿಯನ್ನು ಮಾಡಬೇಕೆಂಬುದು ಅಂದು ಜನರಿಗೆ ಮನ ದಟ್ಟಾಯಿತು.

## ೬. ತಂದೆಗಿಂತ ಮಗನೆ ಮೇಲು

ನಮ್ಮ ನಾಡಿನಲ್ಲಿ ಸುಪ್ರಸಿದ್ಧ ಶಿಲ್ಪಶಾಸ್ತ್ರಜ್ಞರಾದ ಜಕಣಾಚಾರ್ಯರು ಪ್ರಸಿದ್ಧ ಜ್ಯೋತಿಷ್ಯರೂ ಇದ್ದರು. ಅವರಿಗೆ ಮಗನು ಹುಟ್ಟಿದಾಗ ಅವರು ಅವನ ಕುಂಡಲಿಯನ್ನು ಪರೀಕ್ಷಿಸಲು, ಆತನು ವ್ಯಭಿಚಾರಕ್ಕೆ ಹುಟ್ಟಿದವ ನೆಂದು ಅವರಿಗೆ ತಿಳಿದುಬಂದಿತು. ಕೂಡಲೆ ಅವರು ವೈರಾಗ್ಯವನ್ನು ತಾಳಿ ಮನೆ ಬಿಟ್ಟು ಹೊರಟರು.

ಅವರು ಶಿಲ್ಪಕಲಾಪ್ರವೀಣರಾದುದರಿಂದ, ಹೋದಹೋದಲ್ಲಿ ಗುಡಿ ಗಳನ್ನು ಕಟ್ಟುತ್ತ ಕೊನೆಗೆ ಬೇಲೂರಿಗೆ ಬರಲು, ಅಲ್ಲಿಯ ಅರಸನಾದ ವಿಷ್ಣು ವರ್ಧನನು ಅವರಿಂದ ಚೆನ್ನಕೇಶವನ ದೇವಾಲಯವೊಂದನ್ನು ಕಟ್ಟಿಸಿದನು. ಆ ಗುಡಿಯಲ್ಲಿ ಚೆನ್ನಕೇಶವನ ಸುಂದರವಾದ ಮೂರ್ತಿಯ ಪ್ರಾಣ ಪ್ರತಿಷ್ಠೆ ಯನ್ನು ಮಾಡಬೇಕೆನ್ನುವಷ್ಟರಲ್ಲಿ ಹದಿನಾರು ವರುಷದ ಹುಡುಗನೊಬ್ಬನು ಅಲ್ಲಿಗೆ ಬಂದು, ಆ ಚೆನ್ನಕೇಶವಮೂರ್ತಿಯು ಅಶುದ್ಧವಾದ ಕಲ್ಲಿನಿಂದ ಮಾಡಲ್ಪಟ್ಟಿರುವುದೆಂದೂ ಅದು ಪ್ರಾಣಪ್ರತಿಷ್ಠಾಪನೆಗೆ ಯೋಗ್ಯವಿಲ್ಲವೆಂದೂ ಪ್ರತಿಪಾದಿಸಿದನು.

ಆಗ ಅವರಿಬ್ಬರಲ್ಲಿ ವಾದ ನಡೆಯಿತು. ಅದು ಅಶುದ್ಧವೆಂದು ತೋರಿಸಿ ಕೊಟ್ಟರೆ ತಮ್ಮ ಬಲಗೈಯನ್ನೇ ಕಡಿದುಕೊಂಡುಬಿಡುವೆವೆಂದು ಜಕಣಾ ಚಾರ್ಯರು ಹೇಳಿದರು. ಆಗ ಹುಡುಗನು ಆ ಮೂರ್ತಿಯ ನಾಭಿಕಮಲದ

ಹತ್ತಿರ ತುಸು ಮಳಲೂ, ನೀರೂ, ಒಂದು ಕಪ್ಪೆಯೂ ಇರುವ್ರವೆಂದೂ, ಆದ ಕಾರಣ ಅದು ಅಶುದ್ಧವೆಂದೂ, ಆ ಮೂರ್ತಿಯನ್ನು ಒಡೆದು ಪರೀಕ್ಷಿಸ ಬೇಕೆಂದೂ ಹೇಳಿದನು.

ಆ ಹುಡುಗನ ಮಾತನ್ನು ನಂಬಿ ಆ ಸುಂದರ ಮೂರ್ತಿಯನ್ನು ಒಡೆ ಯುವುದು ಹೇಗೆ? ಆದುದರಿಂದ ಅವನ ಮಾತನ್ನು ಯಾರೂ ಆಲಿಸಲಿಲ್ಲ. ಆ ಮೂರ್ತಿಯಲ್ಲಿ ಅವನು ತಾನು ಹೇಳುವಂತೆ ನೀರು ಮುಂತಾದವು ಇರು ವವೆಂಬ ಬಗ್ಗೆ ತಮಗೆ ವಿಶ್ವಾಸ ಹುಟ್ಟಿಸಿದರೆ ಮಾತ್ರ, ತಾವು ಅದನ್ನು ಒಡೆಯ ಬಹುದೆಂದು ಜನರು ಆ ಹುಡುಗನಿಗೆ ಹೇಳಿದರು. ಆಗ ಬಾಲಕನು ತುಸ ವಿಚಾರ ಮಾಡಿ "ನೀವು ಈ ಮೂರ್ತಿಯ ಶರೀರಕ್ಕೆಲ್ಲ ಗಂಧವನ್ನು ತೊಡೆದು ನೋಡಿರಿ. ಅಂದರೆ ನಾಭಿಕಮಲದ ಹತ್ತಿರ ಒಳಗೆ ನೀರು ಇರು ವುದರಿಂದ ಗಂಧವು ಹಸಿಯುಳಿದು ಮಿಕ್ಕೆಡೆಗೆ ಒಣಗುವುದು. ಅಲ್ಲಿ ನೀರಿರು ವುದಕ್ಕೆ ಅದೇ ಗುರುತು." ಎಂದು ಉತ್ತರವನ್ನಿತ್ತನು. ನೆರೆದ ಜನರಿಗೆ ಆ ಮಾತು ಸರಿದೋರಿ ಅವನು ಹೇಳಿದಂತೆ ಮಾಡಿದರು. ನಾಭಿಕಮಲದ ಹತ್ತಿರ ತೊಡೆದ ಗಂಧವು ಆರಲಿಲ್ಲ. ಆಗ ಅವನು ಶಿಲಾಶಾಸ್ತ್ರದಲ್ಲಿ ನಿಪುಣನಿರುವ ನೆಂಬ ಭರವಸೆಯುಂಟಾಗಿ ಅವರು ಆ ಮೂರ್ತಿಯ ನಾಭಿ ಕಮಲವನ್ನು ಒಡೆದು ನೋಡಲಾಗಿ ಅವನು ಹೇಳಿದಂತೆ ಒಳಗೆ ಕಪ್ಪೆ, ನೀರು ಮುಂತಾದವು ಗಳು ಕಂಡುಬಂದವು.

ಅಲ್ಲಿಯ ಮಹಾಜನರಿಗೆಲ್ಲ ಅತ್ಯಂತ ವಿಸ್ಮಯವುಂಟಾಗಿ ಆ ಬಾಲಕನ ಕುಲಗೋತ್ರಗಳನ್ನು ಕೇಳಿದರು. ಅವನು, ತಾನು ಅದೇ ಜಕಣಾಚಾರ್ಯರ ಮಗನಾದ ಡಂಕಣಾಚಾರ್ಯನೆಂದೂ, ತಮ್ಮ ತಂದೆಯು ಒಂದು ಕಡೆ ಜ್ಯೋತಿಷ ಗಣನದಲ್ಲಿ ತಪ್ಪಿ, ನಿಷ್ಕಾರಣವಾಗಿ ತನ್ನ ತಾಯಿಯ ಮೇಲೆ ವ್ಯಭಿಚಾರವನ್ನು ಆರೋಪಿಸಿದನೆಂದೂ ಹೇಳಿದನು.

ಆಗ ತಂದೆ ಮಕ್ಕಳಿಬ್ಬರನ್ನೂ ಅರಸನು ಸನ್ಮಾನಿಸಿ, ಇಬ್ಬರೂ ಕೂಡಿ ತಮ್ಮ ಉಭಯ ಚಾತುರ್ಯದಿಂದ ಹೊಸದೊಂದು ಅತ್ಯಂತ ಸುಂದರವಾದ ಗುಡಿಯನ್ನು ನಿರ್ಮಾಣ ಮಾಡಬೇಕೆಂದು ಆಜ್ಞಾಪಿಸಿದನು.

—ಆಲೂರರವರು.

**ಸೂಚನೆ:**— (i) ಈ ಕಥೆಗೆ ಆಧುನಿಕ ಸ್ವರೂಪವನ್ನು ಕೊಡಿರಿ.

(ii) ಇದನ್ನು ಮಗನು ಹೇಳುವನೆಂದು ಭಾವಿಸಿ, ಅದಕ್ಕೆ ತಕ್ಕ ಮಾರ್ಪಾಟುಗ ಳನ್ನು ಮಾಡಿ ಬರೆಯಿರಿ.

## ಅಭ್ಯಾಸ ೯.

ಕೆಳಗೆ ಕೊಟ್ಟ ರೂಪರೇಷೆಯ ಸಹಾಯದಿಂದ ಕತೆಯನ್ನು ಬರೆಯಿರಿ. ಮುಂಬಯಿ ವಿಶ್ವವಿದ್ಯಾಲಯದ ಮ್ಯಾಟ್ರಿಕ್ ಪರೀಕ್ಷೆಯಲ್ಲಿಯ ಪ್ರಶ್ನೆ ಪತ್ರಿಕೆಗಳಿಂದ ಇವುಗಳಲ್ಲಿ ಕೆಲವನ್ನು ಆಯ್ದುಕೊಳ್ಳಲಾಗಿದೆ. ಮಗ್ಗುಲಿಗೆ ಕಾಣಿಸಿದ ಅಂಕಿಗಳು ವರ್ಷವನ್ನು ಸೂಚಿಸುವವು.

೧. ಮೊಲವು ಆನೆಯನ್ನು ಅಣಕಿಸುವದು-ಆನೆಯು ಆಹ್ವಾನ-ಓಡುವ ಸ್ಪರ್ಧೆ-ನರಿಯು ಪಂಚ-ಸ್ಪರ್ಧೆಗೆ ಪ್ರಾರಂಭ-ಮೊಲವು ಕೂಡಲೆ ಬಹಳ ಮುಂದೆ ಓಡಿತು-ಮಲಗಿತು-ದೀರ್ಘನಿದ್ರೆ-ಎಚ್ಚರ-ಆನೆಯನ್ನು ಕರೆಯುವುದು-ಆನೆಯು ಗೆಲವಿನ ಕಂಬದಾಚೆ ನಿಂತಿರುವುದು.

೨. ಬೇಸಗೆಯ ಉರಿಬಿಸಿಲು-ನರಿಯು ನೀರಡಿಸಿತು-ತೋಟದ ಗೋಡೆಯ ಮೇಲೆ ದ್ರಾಕ್ಷದ ಗೊಂಚಲುಗಳು-ಅನೇಕ ಸಲ ಜಿಗಿದರೂ ಅವು ಅದಕ್ಕೆ ನಿಲುಕಲಿಲ್ಲ-'ದ್ರಾಕ್ಷಗಳು ಹುಳಿಯಿವೆ'.

೩. ನರಿಯೂ ಬಕಪಕ್ಷಿಯೂ ಗೆಳೆಯರು-ನರಿಯು ಬಕಪಕ್ಷಿಯನ್ನು ಊಟಕ್ಕೆ ಕರೆಯುವುದು-ಒಂದು ಪರಿವಾಣ-ಪಾಯಸ-ಬಕಪಕ್ಷಿಗೆ ಉಣಲು ಬರಲಿಲ್ಲ-ನರಿಯು ಎಲ್ಲವನ್ನೂ ನೆಕ್ಕಿ ನಕ್ಕಿತು-ಬಕನ ಮೌನ.-ಮರುದಿನ ಬಕನ ಔತಣ-ನರಿಯು ಬರುವುದು-ಉದ್ದಾದ ಹೂಜೆಯಲ್ಲಿ ಸೀಕರಣೆ-ನರಿಯು ಮುಖವನ್ನು ಒಣಗಿಸಿಕೊಂಡು ಮನೆಗೆ ಹೋಯಿತು. ಮುಯ್ಯಕ್ಕೆ ಮುಯ್ಯ.

೪. ಮರುತ್ ಸೂರ್ಯರು-ಪರಸ್ಪರರ ಸಾಮರ್ಥ್ಯದ ಬಗ್ಗೆ ಕಲಹ-ಕಂಬಳಿಯನ್ನು ಹೊದ್ದುಕೊಂಡು ಸಾಗಿದ ಒಬ್ಬ ಮನುಷ್ಯ-ಅವನ ಕಂಬಳಿಯನ್ನು ಸೆಳೆವವನು ಸಮರ್ಥ ಎಂಬ ಸ್ಪರ್ಧೆ-ಗಾಳಿಯ ಪ್ರಯತ್ನ-ಸೋಲು-ಸೂರ್ಯನ ಪ್ರಯತ್ನ-ಅವನಿಗೆ ಗೆಲವು-ಮರುತ್ತನ ಒಪ್ಪಿಗೆ.

೫. ಸಾವನ್ನಪ್ಪಲಿರುವ ಒಕ್ಕಲಿಗ-ಮಕ್ಕಳಿಗೆ ಬುದ್ಧಿ ಕಲಿಸುವ ಬಯಕೆ-ನನ್ನ ಹಣವೆಲ್ಲ ದ್ರಾಕ್ಷದ ತೋಟದಲ್ಲಿ ನಿಮಗೆ ದೊರೆಯುವುದು ಎಂದು ಹೇಳಿ ಮಡಿದ-ಅವರಾ ತೋಟವನ್ನೆಲ್ಲ ಅಗಿದರು.-ನಿಧಿಯು ದೊರೆಯಲಿಲ್ಲ-ಮರುವರುಷ ಉತ್ತಮ ಬೆಳೆ-ಉದ್ಯೋಗವುಳ್ಳವನ ಹೊದ್ದುವುದು ಸಿರಿ ಬಂದು.

೬. ಒಕ್ಕಲಿಗನ ಮನೆ-ಅಂಗಳದಲ್ಲಿ ಒಂದು ಗಡಿಗೆ-ಆಡ ಮರಿಯು ಅದರಲ್ಲಿ ಬಾಯಿ ಹಾಕುವುದು-ಅದರ ತಲೆಯು ಒಳಗೆ ಸಿಗುವುದು-ಹೊರಗಿನಿಂದ ಬಂದ ಒಕ್ಕಲಿಗನು ಅದನ್ನು ತೆಗೆಯಲು ಯತ್ನಿಸುವ-ಸಾಧ್ಯವಾಗಲಿಲ್ಲ-ಗೌಡನನ್ನು ಕರೆಯಿಸುವ-ಒಂಟಿಯ ಮೇಲೆ ಕುಳಿತು ಗೌಡನು ಬರುವ-ತಲೆಬಾಗಿಲನ್ನು ಕೆಡಹಲು ಹೇಳುವ-ಒಳಗೆ ಬಂದು ಕತ್ತಿಯಿಂದ ಮರಿಯ ರುಂಡವನ್ನು ಹಾರಿಸುವ-ಕಲ್ಲಿನಿಂದ ಗಡಿಗೆಯನ್ನೊಡೆಯುವ.-'ಎಂಥ ಜಾಣ ನಮ್ಮ ಗೌಡ.'

೭. ಒಂದು ನರಿಯು-ಬೇಸಗೆದಿನಗಳು-ಹಸಿವೆಯಿಂದ ಬಳಲುವುದು-ಬೆಕ್ಕಿನಮರಿಯನ್ನು ಕಾಣುವುದು-ಅದನ್ನು ತಿನ್ನಲು ಯತ್ನ-ಬೆಣ್ಣೆಯ ಮುದ್ದೆಯನ್ನು ಕೊಡಲು ಮರಿಯು ಒಪ್ಪುವುದು-ಇಬ್ಬರೂ ಒಂದು ಬಾವಿಯೆಡೆಗೆ ಬರುವರು-ಅಲ್ಲಿ ಗಾಲಿಯ ಮೇಲಿಂದ ಎರಡು ಬಕೆಟುಗಳು ತೂಗಾಡುವುವು-ನೀರಿನಲ್ಲಿ ಚಂದ್ರನ ಪ್ರತಿಬಿಂಬ-ಮರಿಯು ಅದನ್ನು ತೋರಿಸುವುದು-ಒಂದು ಬಕೆಟಿನಲ್ಲಿ ಜಿಗಿದು ಕೂಡುವುದು-ಅದು ಕೆಳಗೆ ಹೋಗುವುದು-ಎರಡನೆಯದು ಮೇಲೆ ಬರುವುದು-ಅದರಲ್ಲಿ ಕುಳಿತುಕೊಳ್ಳಲು ಮರಿಯು ನರಿಗೆ ಹೇಳುವುದು-ನರಿಯು ಕೂಡುವುದು-ನರಿಯು ನೀರಲ್ಲಿ ಮರಿಯು ಮೇಲೆ.

೮. ಉಸುಬಿನ ಬಯಲು-ಪ್ರವಾಸಿಯೊಬ್ಬನು-ಅತಿಯಾದ ಹಸಿವು-ಬಾಯಾರಿಕೆ-ಮುತ್ತು ಹವಳಗಳ ಚೀಲ ಸಿಗುವುದು-ನಿರಾಶೆ. (ಮು. ವಿ. ಪತ್ರಿಕೆ) ೧೯೩೭.

೯. ಕೃಪಣ-ಬಂಗಾರದ ನಾಣ್ಯಗಳಿಂದ ತುಂಬಿದ ಪೆಟ್ಟಿಗೆ-ಹೊರಗೆ ಹೋಗುವನು-ಕಿಡಿಕಿಯು ತೆರೆದದ್ದು-ಮಂಗವು ಒಳಸೇರುವುದು-ನಾಣ್ಯಗಳನ್ನು ಹೊರಗೆ ಎಸೆಯುವುದು-ಜನಸಮುದಾಯ ನೆರೆಯುವುದು-ಕೃಪಣನು ತಿರುಗಿ ಬರುವ-ಆಶ್ಚರ್ಯ-ಕ್ರೋಧ- "ಸರಿಯಾದ ಪ್ರಾಯಶ್ಚಿತ್ತ" (ಮು. ವಿ. ಮ.) ೧೯೩೮

೧೦. ಅಂದವಾದ ಮಾವಿನ ತೋಪು-ತುಂಟ ಹುಡುಗ-ಮೋಹ-ಹಣ್ಣುಗಳನ್ನು ತಿನ್ನುವ-ಯಜಮಾನ-ಹೆದರುವ-ಓಡುವ-ಬೆನ್ನಟ್ಟುವ-ದಾರಿಯಲ್ಲಿ ಒಂದು ಗುಡಿಸಲು-ಅಡಗುವ-ಯಜಮಾನನು ಅಲ್ಲಿಗೆ ಬರುವ-ಕೇಳುವ-ಗುಡಿಸಲಿನ ಒಡೆಯನು ಬಾಯಿಯಿಂದ 'ಇಲ್ಲ' ಎಂದು ಹೇಳಿ ಕೈಯಿಂದ ಗುಡಿಸಲನ್ನು ತೋರಿಸುವ-ಹುಡುಗನು ಇದನ್ನು ನೋಡುವನು-ಯಜಮಾನನು ನೋಡದೆ ತೆರಳುವನು-ಹುಡುಗನು ಉಪಕಾರವನ್ನು ಮನ್ನಿಸದೆ ಹೊರಡುವ-ಒಡೆಯನು ನಿಂದಿಸುವ-ಹುಡುಗನ ಕಟು ಉತ್ತರ. —೧೯೩೯

೧೧. ಹುಡುಗರಿಬ್ಬರು-ಚಿಕ್ಕ ದೋಣಿಯನ್ನು ನೂಕುತ್ತಿರುವರು-ಬಿರುಗಾಳಿ-ಸಮುದ್ರಕ್ಕೆ ಸೆಳೆಯಲ್ಪಟ್ಟರು-ಮರಳುವುದು ಅಸಾಧ್ಯವಾಯಿತು-ಅಸಹಾಯರು-ನಿರಾಶರು-ಒಂದು ಹಡಗ-ತಮ್ಮ ಕೋಟನ್ನು ಹಾರಿಸುವರು-ಅವರ ಸಹಾಯ-ತಂದೆ ತಾಯಂದಿರು. —೧೯೪೦

೧೨. ರಾಧೆ, ಸಿರಿವಂತರ ಮಗಳು-ಗೋವಿಂದ, ಬಡವರ ಮಗ-ಆ ಮಕ್ಕಳು ಕೂಡಿಯೆ ಆಡುವರು-ರಾಧೆಯು ಕೆರೆಯಲ್ಲಿ ಜಾರಿ ಬೀಳುವಳು-ಗೋವಿಂದನು ಆಕೆಯನ್ನು ತೆಗೆಯುವನು-ಆಕೆಯ ತಂದೆಯು ಅತೀವ ಕೃತಜ್ಞನಾಗುವನು-ಗೋವಿಂದನ ಶಿಕ್ಷಣಕ್ಕೆ ಸಹಾಯ-ಬಿ. ಏ.-ಆಕೆಯ ತಂದೆಯ ವ್ಯಾಪಾರದಲ್ಲಿ ಪಾಲುಗಾರನಾಗುವ-ರಾಧೆಯೊಡನೆ ಮದುವೆ. —೧೯೪೧.

೧೩. ಓರ್ವ ವೀರ ಯುವಕ-ಕಾಳಗದಲ್ಲಿ ಓರ್ವ ಕಾಡು ಜನರ ನಾಯಕರ ಸೆರೆಯಾಳಾಗುವ-ಶೂರನಾದರೂ ದುಃಖಿತ-ಅವನ ತಾಯಿಯ ಮರಣ ಉನ್ಮ

ಖಿಳು-ಮುರಿ ಬರುವ ಪಚಕ-ಹೋಗಲು ಅಪ್ಪಣೆ—ಬರುವ-ನಾಯಕನಿಂದ ಅಧಿಕಾರ ಸ್ಥಲವು ದೊರೆಯುವುದು-ಅವನ ಮಗಳೊಡನೆ ವಿವಾಹ-ಅವನ ತರುವಾಯ ನಾಯಕ ನಾದ. —೧೯೩೨.

೧೪. ಒಂದು ಪಡಗವು ಒಡೆದಿದೆ—ಗೆಳೆಯರಿಬ್ಬರು ಒಂದು ಫಳಿಯನ್ನು ಹಿಡಿದು ತೇಲುತ್ತಿರುವರು-ಅದು ಒಬ್ಬನನ್ನೇ ತೇಲಿಸುವಂತಹದಿತ್ತು-ಒಬ್ಬನು ಮದುವೆಯಾದವನು-ಇನ್ನೊಬ್ಬನು ಬ್ರಹ್ಮಚಾರಿ—ಬ್ರಹ್ಮಚಾರಿಯು ಅದನ್ನು ಬಿಡುವ-ಮುಳುಗುವ-ಎರಡನೆಯವನು ಬದುಕಿದ-ಅವನು ಮುಳುಗಿದ ಗೆಳೆಯನ ತಾಯಿಯನ್ನು ಪೋಷಿಸುವ. —೧೯೩೩.

೧೫. ಒಂದು ದಿನ್ನೆಯ ಮೇಲೆ ಒಂದು ಮೋಟಾರು ನಿಂತಿದೆ-ಒಬ್ಬ ಚಿಕ್ಕ ಹುಡುಗನು ಅಲ್ಲಿ ಬರುವ-ಅದರಲ್ಲಿ ಏರಿ ಕುಳಿತುಕೊಳ್ಳುವ-ಹಿಡಿಕೆಯನ್ನು ಜಗ್ಗುವ—ಗಾಡಿಯು ನಡೆಯುವುದು—ದಿನ್ನೆಯ ಕೆಳಗೆ ಭರದಿಂದ ಸಾಗುವುದು-ಹುಡುಗನು ಚೀರುವನು—ಜನರು ಒದರುವರು. (ಈ ಕತೆಯನ್ನು ಪೂರ್ಣ ಮಾಡಿರಿ.) —೧೯೩೪.

೧೬. ಒಬ್ಬ ಹುಡುಗನು ಉಗಿಬಂಡಿಯಲ್ಲಿ ಒಂಟಿಗನಾಗಿ ಪ್ರವಾಸ ಮಾಡುತ್ತಿರುವ—ಒಂದು ಚಿತ್ತಾಕರ್ಷಕವಾದ ಪುಸ್ತಕವನ್ನು ಓದುತ್ತಿರುವ—ಇಳಿಯಬೇಕಾದ ನಿಲ್ದಾಣವು ಬಂದು ಹೋಯಿತು. ಮುಂದೆ ೨೦ ಮೈಲು ಸಾಗಿದ ಮೇಲೆ ಅವನಿಗದು ತಿಳಿಯಿತು. ಜೇಬಿನಲ್ಲಿ ಒಂದು ಕಾಸೂ ಇರಲಿಲ್ಲ. (ಅವನು ಮುಂದೆ ಯಾವ ರೀತಿಯಿಂದ ಮನೆಗೆ ಬಂದು ತಲುಪಿರಬಹುದು ?) —೧೯೩೫·

(ಆ) ಕೆಳಗಿನ ವಿಷಯವನ್ನು ಕುರಿತು ಕತೆಗಳನ್ನು ರಚಿಸಿ ಬರೆಯಿರಿ !

೧. ಮುಯ್ಯಕ್ಕೆ ಮುಯ್ಯ. ೨. ಸತ್ಯಕ್ಕೆ ಸೋಲಿಲ್ಲ. ೩. ಪ್ರಾಪ್ತಿಯ ಅರ್ಧ ಪಾಲು. ೪. ಪ್ರಸಂಗಾವಧಾನ. ೫. ಇಬ್ಬರ ಕಲಹದಲ್ಲಿ ಮೂರನೆಯವನಿಗೆ ಲಾಭ ೬. ಮುಹೂರ್ತಂ ಜ್ವಲಿತಂ ಶ್ರೇಯಃ (ಅರಗಳಿಗೆ ಹೊಳೆವುದು ಮೇಲು). ೭. ಮನೆ ಗೆದ್ದು ಮಾರು ಗೆಲ್ಲು.

(ಇ) ಹಿಂದಣ ಕತೆಗಳ ರೂಪರೇಷೆಗಳನ್ನು ಬರೆಯಿರಿ.

# ಮೂರನೆಯ ಭಾಗ – ನಿಬಂಧಗಳು (Essays)

## ೧. ಪೀಠಿಕೆ

### ೧. ನಿಬಂಧವೆಂದರೇನು ?

ನಿಬಂಧವೆಂದರೆ ಕಟ್ಟುಳ್ಳ ಬರಹ. ನಮ್ಮ ಮನಸ್ಸಿನಲ್ಲಿ ಮೂಡಿದ ವಿಚಾರಗಳು ಒಂದು ವಿಶೇಷವಾದ ರೀತಿಯಲ್ಲಿ ವ್ಯಕ್ತವಾದರೆ ಅದು **ನಿಬಂಧ**

ವೆನಿಸುವುದು. ಆಂಗ್ಲ ಭಾಷೆಯಲ್ಲಿದಕ್ಕೆ ಆಲೋಚನೆಗಳನ್ನು ಪೈಲಿಗೆಳೆಯುವ '**ಪ್ರಯತ್ನ**' ಎಂದೆನ್ನುವರು. ಮೊದಮೊದಲು ಆಲೋಚನೆಗಳು ತೋಚಿದ ಕ್ರಮದಲ್ಲಿಯೆ ಹೊರಬಿದ್ದು ನಿಬಂಧದ ರೂಪವನ್ನು ತಾಳುತ್ತಿದ್ದವು ನಿಜ. ಆದರೆ ಬರಬರುತ್ತ ಅದರ ರಚನೆಯಲ್ಲಿ ಒಂದು ಬಗೆಯ ಸುಸಂಬದ್ಧ ಕ್ರಮವು ಉಂಟಾಗಿ, ಈಗದು **ಕೌಶಲ್ಯದಿಂದ ಹೆಣೆಯಲ್ಪಟ್ಟ ಆಲೋಚನೆಗಳ ಮಾಲೆಯಾಗಿರುವುದು.**

**೨. ಅದರ ಮಹತ್ವ :—**

ಇಂದು ನಿಬಂಧವು ಒಂದು ಅತ್ಯುತ್ತಮ ಕಲಾಕೃತಿ. **ಮಾಂಟೇನ ಬೇಕನರಲ್ಲಿ** ಮೊಳೆತು, **ಅಡಿಸನ್, ಮೆಕಾಲೆ, ಲ್ಯಾಂಬರವರಲ್ಲಿ** ಬೆಳೆದು ಈ ಬಳ್ಳಿಯು ಇಂದು **ಗಾರ್ಡಿನರ, ವೆಲ್ಸ, ಕೂಚ** (i) ಇವರಲ್ಲಿ ಹೂ-ಕಾಯಿ-ಹಣ್ಣುಗಳ ವೈಭವವನ್ನು ತಳೆದು, ಮೆರೆಯುತ್ತಿರುವುದು.

ಇಂದಿನ, ಮುಂದಿನ ಯುಗದಲ್ಲಿ ಅದು ಜನಜಾಗೃತಿಯ ಮಹಾ ಕಾರ್ಯವನ್ನು ಮಾಡಿದೆ, ಮಾಡಲಿದೆ. ವಾರ್ತಾಪತ್ರಿಕೆಗಳೂ, ಮಾಸ ಪತ್ರಿಕೆಗಳೂ ಇದರ ಸೇವೆಯನ್ನು ಮಾಡಲು ಯಾವಾಗಲೂ ಸಿದ್ಧವಿರುವವು. '**ವೈಯಕ್ತಿಕ ನಿಬಂಧ**' (Personal Essays) ಗಳುಳ್ಳ ಅನೇಕ ಗ್ರಂಥಗಳು ಜನರ ಅಭಿರುಚಿಯನ್ನು ತಿದ್ದಲು ಯತ್ನಿಸುತ್ತಲಿವೆ. ಆದುದರಿಂದ **ಚಿಕ್ಕ ಕತೆ, ಭಾವಗೀತಗಳ** ಜತೆಯಲ್ಲಿ ಈ ಕಲಾಕೃತಿಯು ಜನತೆಯಲ್ಲಿ ವಿಚಾರಕ್ರಾಂತಿಯನ್ನುಂಟುಮಾಡುವ ಮಹತ್ವದ ಸಾಧನವಾಗಲಿದೆ.

ಮೇಲಾಗಿ ಬಾಲಕರ ವಿಚಾರವ್ಯಕ್ತಿಗೆ ಇದೊಂದು ಸುಲಭವಾದ ಸಾಧನ. ಬಾಲಕರಿದನ್ನು ಸರಿಯಾಗಿ ಉಪಯೋಗಿಸಲು ಕಲಿತರೆ, ಅವರ ನಿರೀಕ್ಷಣ ಶಕ್ತಿಯು ಬೆಳೆದು ಪ್ರಪಂಚದ ಬಗ್ಗೆ ಅವರಲ್ಲಿದ್ದ ಸಹಜ ಕುತೂಹಲವು ಹೆಚ್ಚಾಗುವುದು. ಇದರ ಜೊತೆಯಲ್ಲಿ ಅವರ ಭಾವ-ಬುದ್ಧಿ-ಕಲ್ಪನಾ ಶಕ್ತಿಗಳು ವಿಕಸಿತವಾಗಿ, ಅದನ್ನು ತಿಳಿಯಾದ ಸರಿಯಾದ ಭಾಷೆಯಲ್ಲಿ ಉಸುರುವ ಕೌಶಲ್ಯವು ಕೂಡ ಬೆಳೆಯದಿರದು. ಈ ದೃಷ್ಟಿಯಿಂದ ನಿಬಂಧವು ಅತಿ ಮಹತ್ವದ ಕಲಾಕೃತಿಯೆನ್ನಲು ಅಡ್ಡಿಯಿಲ್ಲ.

**೩. ವಿವರಣ ಕ್ರಮ :—**

ಆದುದರಿಂದ ಪ್ರಬಂಧಗಳಲ್ಲಿಯ ಈ ಪ್ರಧಾನ ವಿಷಯವನ್ನು ಇಲ್ಲಿ

(i) ಇವರೆಲ್ಲ ಪಾಶ್ಚಾತ್ಯ ನಿಬಂಧಕಾರರು.

ವಿಸ್ತಾರವಾಗಿ ವಿವೇಚಿಸಲಾಗುವುದು. ಮೊದಲು ಅದರ ರಚನೆಯ ವಿಷಯ ವಾಗಿ ಸಾಮಾನ್ಯ ಸೂಚನೆಗಳನ್ನು ಕೊಟ್ಟು ತರುವಾಯ ಅದರ ಮುಖ್ಯ ಪ್ರಭೇದಗಳಾದ **ವರ್ಣನ, ಕಥನ, ಚಿಂತನ, ಕಲ್ಪನಪರ** ನಿಬಂಧಗಳ ಸವಿವರ ವಿವೇಚನೆಯನ್ನು ಮಾಡಲಾಗುವುದು. ಕೆಲವು ಸುಪ್ರಸಿದ್ಧ ಸಾಹಿತಿಗಳ ಮಾದರಿಯ ನಿಬಂಧಗಳನ್ನು ಅಲ್ಲಲ್ಲಿ ಕೊಟ್ಟು, **ವಿಷಯ ವಿವೇಚನೆ, ರಚನ ಕೌಶಲ್ಯ, ಶೈಲಿಯ ಚಮತ್ಕೃತಿ** ಇತ್ಯಾದಿಗಳ ಆದರ್ಶಗಳನ್ನು ಬಾಲಕರೆದುರು ಇಡಲಾಗುವುದು.

## ೨. ನಿಬಂಧರಚನೆ.

### ೧. ಪ್ರಮುಖ ಗುಣಗಳು :—

ವಾಕ್ಯವೃಂದದಂತೆ ನಿಬಂಧವೂ **ಸೌಂದರ್ಯ–ಸಾಮರ್ಥ್ಯಗಳನ್ನು** ಪಡೆಯಬೇಕಾದರೆ ಅದರಲ್ಲಿಯೂ ಕೆಳಗಿನ ಕೆಲವು ಮುಖ್ಯ ಗುಣಗಳು ಇರಲೇ ಬೇಕು. ಅವನ್ನು ತರಲು ಸಾಧ್ಯವಿದ್ದಷ್ಟು ಯತ್ನವನ್ನು ಮಾಡಲೇ ಬೇಕು. ಅವು ಪ್ರತಿಯೊಂದು ನಿಬಂಧದ ಜೀವಾಳದಂತಿರುವವು.

(ಅ) **ಕಿರಿಮೆ :—**ಬಾಲಕರ ನಿಬಂಧವು ಚಿಕ್ಕದಿರಬೇಕು–ಚೊಕ್ಕವಿರಬೇಕು. **ಕಿರಿದರಲ್ಲಿ ಹಿರಿದನ್ನು ಉಸುರುವ ಅಭ್ಯಾಸವು ಮೇಲು.** ಅದರಿಂದ ವಿಷಯವು ಹಿಡಿತಕ್ಕೆ ಬರುವುದು. ವಿವೇಚನೆಯಲ್ಲಿ ಬಿಗುವು ಉಂಟಾಗುವುದು. ಸುಮ್ಮನೆ ಮಾತು ಬೆಳೆಯಿತೆಂದರೆ ನಿಬಂಧದಲ್ಲಿ ಅನವಶ್ಯಕ–ಅಸಂಬದ್ಧ ಸಂಗತಿಗಳು ಸೇರಿ ಅವು ಅದರ ಸೊಬಗನ್ನು ಕೆಡಿಸುವವು.

(ಆ) **ಐಕ್ಯ :—**ನಿಬಂಧದಲ್ಲಿ ಒಂದೇ ವಿಷಯದ ವಿವೇಚನೆಯಿರತಕ್ಕದ್ದು. ಸಲ್ಲದ ವಿಷಯಗಳನ್ನು ಸೇರಿಸಿ ವಿಷಯಾಂತರ ಮಾಡುವುದರಿಂದ ಅದರ 'ಐಕ್ಯ'ಕ್ಕೆ ಭಂಗ ಬರುವುದು. ಆದರೆ **ಈ ಐಕ್ಯವು ವೈವಿಧ್ಯವನ್ನು ಅಲ್ಲಗಳೆಯುವಂತಿರಬಾರದು.** ವಿಷಯವನ್ನು ವಿವಿಧ ದೃಷ್ಟಿಯಿಂದ ಬಣ್ಣಿಸಿದರೂ ಪರಿಣಾಮವು ಮಾತ್ರ ಒಂದೇ ಆಗಬೇಕು.

(ಇ) **ಕ್ರಮ :—**ವಿವರಿಸಲಾದ ಆಲೋಚನೆಗಳಲ್ಲಿ ಒಂದು ತರ್ಕಬದ್ಧವಾದ ಕ್ರಮವಿರಲಿ. ಅದರಲ್ಲಿ ಗೊಂದಲವಿರಕೂಡದು. ತಿಳಿಯಾದ ತರ್ಕಯುತವಾದ ವಿಚಾರಪ್ರವಾಹ ಸರಿಯಾದ ಕ್ರಮದಿಂದ ಮುಂದುವರಿಯಬೇಕು. **ಒಂದರೊಳಗಿಂದ ಇನ್ನೊಂದು ವಿಚಾರವು ಸಹಜವಾಗಿ ಅರಳಬೇಕು.** ವಾಕ್ಯವೃಂದಗಳಲ್ಲಿಯೂ ತಕ್ಕ ಕ್ರಮಬದ್ಧತೆಯಿರಲಿ.

ಆಲೋಚನೆಗಳ ಮಹತ್ವಕ್ಕನುಗುಣವಾಗಿ ಅವುಗಳ ವಿವೇಚನೆಯು ವಿಸ್ತಾರದಲ್ಲಿ ಸರಿಯಾದ ಪ್ರಮಾಣವಿರಲಿ.

(ಈ) **ಶೈಲಿ**:—ಶೈಲಿಯಲ್ಲಿ ಎರಡು ಮಾತುಗಳು ಅಡಕವಾಗಿವೆ; (೧) **ಭಾಷೆ**; (೨) **ವ್ಯಕ್ತಿತ್ವ**.

(೧) **ಭಾಷೆ**:—ಭಾಷೆಯು ಶುದ್ಧವಾದುದೂ ಸುಲಭವಾದುದೂ ಲಲಿತವಾದುದೂ, ಪರಿಣಾಮಕಾರಿಯಾದುದೂ ಇರಬೇಕು. " **ಅದು ಸುಸಂಸ್ಕೃತ ಜನರು ಉಸುರುವ ಸಹಜ ನುಡಿಯ ಮಾದರಿಯೂ, ಅತ್ಯುತ್ತಮ ಸಂಭಾಷಣೆಯನ್ನು ಪ್ರತಿಬಿಂಬಿಸುವ ಕನ್ನಡಿಯೂ** " ಆಗಿರಲಿ !

(೨) **ವ್ಯಕ್ತಿತ್ವ**:—ನಿಮ್ಮ ನಿಬಂಧದಲ್ಲಿ, **ಸ್ವಂತ ಭಾವನೆ, ಆಲೋಚನೆ, ಅಭಿಪ್ರಾಯ–ಅನುಭವಗಳೇ** ಅಡಕವಾಗಿರಲಿ. ಒಡನೆ ಅನ್ಯರ ವಿಚಾರಗಳೂ ಬರಬಹುದು. ಆದರೆ ತನ್ನ ಮತ್ತು ಅನ್ಯರ ವಿಚಾರಗಳ ಬೆರಕೆಯಲ್ಲಿ ಒಂದು ತೂಕವಿರಲಿ, ' **ಅನ್ಯರದನ್ನು ತನ್ನದನ್ನಾಗಿ ಮಾಡಿ ಬರೆಯುವ ಯತ್ನವೇ ಒಳ್ಳೆಯ ನಿಬಂಧದ ಹಿರಿಯ ಕುರುಹು.**'

೨. **ಪೂರ್ವಸಿದ್ಧತೆ**:—

ಯಾವದೇ ಕಲೆಯಲ್ಲಿ ಪ್ರಾವೀಣ್ಯವನ್ನು ಪಡೆಯಬೇಕಾದರೆ **ನಾಗವರ್ಮನು** ಉಸುರಿದ ಕೆಳಗಿನ ನಾಲ್ಕು ಸಂಗತಿಗಳು ಅವಶ್ಯವಾದವುಗಳು. (೧) **ಪ್ರತಿಭಾನ**, (೨) **ಕಾವ್ಯಪರಿಚಯ**, (೩) **ವೃದ್ಧಸೇವೆ**, (೪) **ಅಭ್ಯಾಸ**. ಇದರಲ್ಲಿ ಎರಡನೆಯ ವಿಷಯವಾದ ' **ಕಾವ್ಯಪರಿಚಯ** 'ದ ಸ್ಥಲದಲ್ಲಿ ' **ಪೂರ್ವಕೃತಿ ಪರಿಚಯ** 'ಎಂಬುದನ್ನು ಇಟ್ಟರೆ ಈ ಪಟ್ಟಿಯು ಎಲ್ಲ ಕಲೆಗಳಿಗೆ ಸಮನಾಗಿ ಅನ್ವಯಿಸುವುದು. **ನಾಗವರ್ಮನು** ಕಾವ್ಯದ ವಿಷಯವಾಗಿ ಬರೆಯುತ್ತಿದ್ದುದರಿಂದ ಅವನು ' ಕಾವ್ಯಪರಿಚಯ ' ಎಂದು ಹೇಳಿರುವ.

ಈ ದೃಷ್ಟಿಯಿಂದ ನಿಬಂಧ ಬರಹದಲ್ಲಿ ನೈಪುಣ್ಯವನ್ನು ಪಡೆಯಬಯಸುವವರು ಏನು ಮಾಡಬೇಕೆಂಬುದನ್ನು ವಿಚಾರಿಸೋಣ.

(೧) **ಪ್ರತಿಭೆ** (Genius):—ಇದು ಬರಹಗಾರರಲ್ಲಿರುವ ಮೂಲ ಶಕ್ತಿ. ಅದಿಲ್ಲದವನು ಬರಹಗಾರನಾಗುವುದೇ ಸಾಧ್ಯವಿಲ್ಲ. ಇದೇ ನೃಪತುಂಗನು ಹೇಳುವ ' **ಅಕೃತ್ರಿಮ ಕೌಶಲ್ಯ** '. ಈ ಸಹಜ ಶಕ್ತಿಯು

ಸಾಮಾನ್ಯವಾಗಿ ಪ್ರತಿಯೊಬ್ಬರಲ್ಲಿ ಇದ್ದೇ ಇರುವುದು. ಕೆಲವರಲ್ಲಿದು ಬಲಿತಿರುವುದು, ಕೆಲವರಲ್ಲಿ ಬಲಿತಿರುವುದಿಲ್ಲ. ಅದನ್ನು ಮುಂದಿನ ಅಭ್ಯಾಸದಿಂದ ಬಲಿಸುವುದು ಎಲ್ಲರ ಮೊದಲ ಕರ್ತವ್ಯ.

(೨) **ಪೂರ್ವ-ಕೃತಿ-ಪರಿಚಯ :—** ಪೂರ್ವದ ಮಹನೀಯರು ಬರೆದ ಗ್ರಂಥಗಳ ಪರಿಶೀಲನವೇ 'ಕೃತಿ ಪರಿಚಯವು'. **ಹಿಂದಿನವರಿಂದ ಕಲಿಯದವನು ಮುಂದಿನವರಿಗೆ ಕಲಿಸಲರಿಯನು.** ಹಿಂದಿನ ಹಿರಿಯರು ತಮ್ಮ ಬೆಲೆಯುಳ್ಳ ವಿಚಾರಗಳನ್ನು ನಮಗಾಗಿ ಕಾದಿಟ್ಟಿರುವರು. ಅವನ್ನು ಪ್ರಯೋಗಿಸಿ, ಜೀರ್ಣಿಸಿ ನಮ್ಮ ಬಲವನ್ನು ಮೊದಲು ಬೆಳೆಯಿಸಬೇಕು.

ಓದುವುದರಲ್ಲಿ ಮೂರು ವಿಧ ಉದ್ದೇಶಗಳಿರಲಿ! **(೧) ವಿಷಯ ಸಂಗ್ರಹ, (೨) ಭಾಷಾಪ್ರಭುತ್ವ, (೩) ರಚನಾಕೌಶಲ್ಯ.** ಬಾಲಕರು ತಮ್ಮ ಜ್ಞಾನ ಭಂಡಾರವನ್ನು ಮೊದಲು ಪೂರ್ವಪಂಡಿತರ ಆಲೋಚನೆಗಳಿಂದ ತುಂಬಿಕೊಳ್ಳಬೇಕು. ಅದರ ಜೊತೆಯಲ್ಲಿ ಶಬ್ದ ಸಂಗ್ರಹವೂ ಹೆಚ್ಚಾಗುವಂತೆ ಎಚ್ಚರದಿಂದ ಓದಿಕೊಳ್ಳಬೇಕು. ಇಷ್ಟಾದ ಮೇಲೆ ಪ್ರತ್ಯಕ್ಷವಾಗಿ ತನ್ನ ಮತ್ತು ಅನ್ಯ ಭಾಷೆಗಳಲ್ಲಿಯ ಕೆಲವು ಮಾದರಿಯ ನಿಬಂಧ ಗ್ರಂಥಗಳನ್ನು ಪರಿಶೀಲಿಸಿ, ಈ ಕಲಾಕೃತಿಯ ರಹಸ್ಯವನ್ನರಿತುಕೊಳ್ಳಬೇಕು.

ಈ ಗ್ರಂಥಗಳನ್ನು ಓದುವಾಗ ಒಂದು ಟಿಪ್ಪಣಿಯ ಪುಸ್ತಕದಲ್ಲಿ ಸ್ಫೂರ್ತಿಯುತವಾದ **ಹೊಸ ವಿಚಾರಗಳನ್ನೂ, ಅಂದವಾದ ರಚನಾ ವಿಶೇಷಗಳನ್ನೂ** ಸುಂದರವಾದ **ಒಳ್ನುಡಿ-ನಾಣ್ಣುಡಿಗಳನ್ನೂ** ಆಯ್ದಿಡಬೇಕು. ಅವನ್ನು ಮರಳಿ ಮರಳಿ ಓದಿ ಮಿದುಳಿನಲ್ಲಿ ಕಾಯ್ದಿಡಲು ಯತ್ನಿಸಬೇಕು

(೩) **ವೃದ್ಧಸೇವೆ:—**ಹಿಂದಿನ ಹಿರಿಯರಂತೆ ಇಂದಿನ ಹಿರಿಯರ ಹತ್ತಿರ ನಿಂತು ಅವರಿಂದಲೂ ಈ ಬರಹದ ಗುಟ್ಟನ್ನು ಅರಿತುಕೊಳ್ಳಬೇಕು. ಅವರ ಸಹವಾಸದಲ್ಲಿದ್ದು, ಅವರ ಬರಹವನ್ನು ನಿರೀಕ್ಷಿಸಿ, ಅವರೊಡನೆ ವಿಚಾರವಿನಿಮಯ ಮಾಡಿ, ತಾನು ಬರೆದದ್ದನ್ನು ಅವರಿಂದ ತಿದ್ದಿಸಿಕೊಂಡು, ನಿಬಂಧ-ನೈಪುಣ್ಯವನ್ನು ಪಡೆಯತಕ್ಕದ್ದು. ಇದೇ ಎಲ್ಲಕ್ಕೂ ಪ್ರಭಾವಶಾಲಿಯಾದ ಸಾಧನ. ಎಲ್ಲ ಹಿರಿಯರೂ ಇದನ್ನೆಯೆ ಉಪಯೋಗಿಸಿದರು. ಇದನ್ನೇ ಉಪದೇಶಿಸಿರುವರು. ಆದರೆ **ಹುಡ್** ಕವಿಯು ಉಸುರುವಂತೆ 'Seek instruction with an humble mind' ವಿನೀತನಾಗಿ ಅವರಿಂದ ಕಲಿಯಬೇಕು.

(೪) **ಅಭ್ಯಾಸ:** — ‘ **ಸತತಾಭ್ಯಾಸಪ್ರಯತ್ನಃ** ’ ಎಂದು ಉಸುರುವ **ನಾಗವರ್ಮ.** ಅಭ್ಯಾಸವು ಸತತವಾದುದಿರಬೇಕು. ಈ ಅಭ್ಯಾಸದ ಸ್ವರೂಪವೇನು ?

(೧) **ವಿಶಾಲವಾದ ಸೂಕ್ಷ್ಮ ನಿರೀಕ್ಷಣವೂ ಆಳವಾದ ಆಲೋಚನೆಯೂ** ಇವರ ಒಂದಂಗ. ಕಂಗಳನ್ನು ಯಾವಾಗಲೂ ತೆರೆದಿಡಿರಿ ! ಮನಸ್ಸನ್ನು ಮುಚ್ಚದಿರಿ ! ನಿಮ್ಮ ಸುತ್ತಲಿನ ಸ್ಥಿತಿಗತಿಗಳನ್ನು ನಿರೀಕ್ಷಿಸಿರಿ.(i) ಪ್ರಾಕೃತಿಕ ಪರಿಸರವೂ ಸಾಮಾಜಿಕ ಪರಿಸರವೂ ತಮ್ಮ ಗುಟ್ಟುಗಳನ್ನು ನಿಮಗೆ ಅರುಹಲಿ ! ಏಕೆಂದರೆ **ಅರಿಯದೆ ಬರೆಯುವುದೇನನ್ನು ?** ಈ ನಿರೀಕ್ಷಣೆಯ ಜೊತೆಯಲ್ಲಿ ಆಲೋಚನೆಯೂ ಬೇಕು. ಅದು ನಿರೀಕ್ಷಣದಿಂದ ದೊರೆತ ಸಂಗತಿಗಳ ಸತ್ಯಾಸತ್ಯತೆಯನ್ನು ಪರೀಕ್ಷಿಸುವುದು. ಅದು ನಮ್ಮ ಮಿದುಳಿನಲ್ಲಿ ಸರಿಯಾಗಿ ಸ್ಥಿರವಾಗಿ ನಿಲ್ಲುವಂತೆ ಮಾಡುವುದು. ಅದೇ ಕಾಲಕ್ಕೆ ತಮಗೆ ಹೊಳೆದ ಹೊಸ ಕಲ್ಪನೆಗಳನ್ನು ಬರೆದಿಡಲು ಮರೆಯಬಾರದು.

(೨) **ಪ್ರತ್ಯಕ್ಷ ಬರಹವು** ಅಭ್ಯಾಸದ ಇನ್ನೊಂದು ವಿಷಯ. ಬರೆಯಲು ಚೆನ್ನಾಗಿ ಬರಲು, ಏನು ಮಾಡಬೇಕೆಂದು ಓರ್ವ ವಿದ್ಯಾರ್ಥಿಯು ನುರಿತ ಬರಹಗಾರನೋರ್ವನನ್ನು ಕೇಳಿದನಂತೆ. ಆಗವನು –‘ **ಬರೆಯುವುದೇ ಬರೆಯಲು ಕಲಿಯುವ ಮೊದಲನೆಯ ಸಾಧನ** ’ ಎಂದುಸುರಿದನಂತೆ. ‘ ಎರಡನೆಯದು ? ’ ವಿದ್ಯಾರ್ಥಿ ಕೇಳಿದನು. ‘ ಮರಳಿ ಬರೆಯುವುದು ’ ಇದು ಅವನ ಉತ್ತರ. ‘ ಮತ್ತೇನಾದರೂ ಇದೆಯೆ ? ’ ಮರಳಿ ಕೇಳಿದನಾ ಬಾಲಕನು. ‘ ಇನ್ನೊಮ್ಮೆ ಬರೆಯಿರಿ ! ’ ಎಂದವನ ಗಟ್ಟಿಯಾದ ಉತ್ತರವದಕ್ಕೆ. ಇದರ ತಾತ್ಪರ್ಯವಿಷ್ಟು–**ಸತತ ಬರೆಯುವ ಅಭ್ಯಾಸವು** ನಿಬಂಧವನ್ನು, ಅದೇಕೆ ಯಾವದೇ ಬಗೆಯ ಬರಹವನ್ನು ಬರೆಯಲು ಕಲಿಯುವ ಅತ್ಯುತ್ತಮವಾದ ಸಾಧನ.

### ೩. ಬರೆಯಲು ಪ್ರಾರಂಭ :—

ಇಷ್ಟು ಪೂರ್ವಸಿದ್ಧತೆಯಾಯಿತೆಂದರೆ ಕೊಟ್ಟ ವಿಷಯವನ್ನು ಕುರಿತು ಬರೆಯಲು ಹೇಗೆ ಪ್ರಾರಂಭ ಮಾಡಬೇಕೆಂಬುದನ್ನು ಇನ್ನು ಮುಂದೆ ವಿವರಿಸಿದೆ.

(i) ನಿಮ್ಮ ಸುತ್ತಲಿನ ನಿಸರ್ಗವೂ ಸಮಾಜವೂ.

(೧) **ವಿಷಯದ ಅರಿಕೆ:**— ಮೊದಲು ವಿಷಯವನ್ನು ಚೆನ್ನಾಗಿ ಅರಿತುಕೊಳ್ಳಬೇಕು. ಅದರ ಸ್ಪಷ್ಟವಾದ ಅರ್ಥವೇನು? ಅದರ ಮೇರೆ ಗಳಾವವು? ಇತ್ಯಾದಿಗಳನ್ನು ತಿಳಿದುಕೊಂಡು ಬರೆದಿಡಬೇಕು. ಒಂದೇ ವಿಷಯವನ್ನು ಕುರಿತು ಬೇರೆ ಬೇರೆ ದೃಷ್ಟಿಯಿಂದ ಬರೆಯಬಹುದು. '**ಪ್ರವಾಸ**' ಎಂಬ ವಿಷಯವನ್ನು ಕುರಿತು ನಿಬಂಧವನ್ನು ಬರೆಯುವ ಹಾಗಿದ್ದರೆ, ಒಂದು ಪ್ರವಾಸದ ವರ್ಣನೆಯನ್ನು ಕೊಡಬಹುದು; ಇಲ್ಲವೆ ಅದರ ರೀತಿಯನ್ನೂ ಅದರಿಂದುಂಟಾಗುವ ಹಿತಾಹಿತಗಳನ್ನೂ ಉಸುರ ಬಹುದು. ಇವುಗಳಲ್ಲಿಯ ಯಾವ ಪದ್ಧತಿಯನ್ನು ಸ್ವೀಕರಿಸಬೇಕೆಂಬುದನ್ನು ಮೊದಲೇ ಗೊತ್ತುಮಾಡುವುದೊಳಿತು.

(೨) **ವಿಚಾರಸಂಗ್ರಹ:**—ತರುವಾಯ ಆ ವಿಷಯವನ್ನು ಕುರಿತು ತನ್ನ ಹಾಗೂ ಅನ್ಯರ ವಿಚಾರಗಳನ್ನು ಕೂಡಿಹಾಕಬೇಕು. ತನಗೆ ತಾನೇ ಅದರ ವಿಷಯವಾಗಿ ಪ್ರಶ್ನೆಗಳನ್ನು ಕೇಳುವುದು ಇದಕ್ಕೊಂದು ಉತ್ತಮವಾದ ಸಾಧನ. ಏಕೆಂದರೆ ನಾವು ಆಲೋಚಿಸುವಾಗ ಇದನ್ನೇಯೆ ಮಾಡುವುದಿ ಲ್ಲವೇ? ಪ್ರಶ್ನೆಗಳನ್ನು ವಿವಿಧ ರೀತಿಯಿಂದಲೂ ದೃಷ್ಟಿಯಿಂದಲೂ ಕೇಳ ಬೇಕು. ಅವನ್ನೆಲ್ಲ ಬರೆದಿಡಬೇಕು. ತರುವಾಯ ಒಂದೇ ಉತ್ತರವನ್ನು ಪಡೆವ ಪ್ರಶ್ನೆಗಳಲ್ಲಿ ಒಂದನ್ನುಳಿದು ಮಿಕ್ಕವುಗಳನ್ನು ಬಿಟ್ಟುಬಿಡಬೇಕು. ಅವು ಗಳ ಉತ್ತರಗಳನ್ನು ಒಂದೊಂದೆ ಸಾಲಿನಲ್ಲಿ ಬರೆದಿಡಬೇಕು. ಅವೇ ವಿಚಾರ ಗಳ ಅಂಶಗಳು. (Points)

(೩) **ಅಂಶಗಳ ಆಯ್ಕೆ :**—ಮುಂದೆ ಈ ಅಂಶಗಳಲ್ಲಿ ಮುಖ್ಯವಾದ ವುಗಳನ್ನು ಆಯ್ದು ಉಳಿದವುಗಳನ್ನು ತೊರೆಯಬೇಕು. ಏಕೆಂದರೆ ನಿಬಂಧ ದಲ್ಲಿ ಆ ವಿಷಯದ ಪೂರ್ಣ ವಿವೇಚನೆಯು ಇಷ್ಟವೂ ಅಲ್ಲ; ಅವಶ್ಯವೂ ಅಲ್ಲ. ಅದೊಂದು ನಮಗೆ ಆ ಕಾಲಕ್ಕೆ ಹೊಳೆದ ಆಲೋಚನೆಗಳ ಪ್ರತಿ ಬಿಂಬ; ಅದನ್ನು ಕುರಿತು ಸಾಂಗೋಪಾಂಗ ಪರಿಚಯವನ್ನು ಮಾಡಿಕೊಡುವ ಶಾಸ್ತ್ರೀಯ ಗ್ರಂಥವಲ್ಲ. 'ಆದುದರಿಂದ ಕಲೆಹಾಕಿದ ಅಂಶಗಳಲ್ಲಿ ಮೂರು- ನಾಲ್ಕು ಅಂಶಗಳನ್ನು ಆಯ್ದರೆ ಸಾಕು. ಕೊಟ್ಟ ಸ್ಥಲ ಕಾಲಗಳಲ್ಲಿ ಅವನ್ನಷ್ಟು ಅರಳಿಸಿದರೆ ಕೆಲಸ ತೀರಿತು.

(೪) **ಅಂಶಗಳ ಕ್ರಮ :**—ಕೊನೆಗೆ ಈ ಅಂಶಗಳನ್ನು ಒಂದು ನಿರ್ದಿಷ್ಟವಾದ ಕ್ರಮದಿಂದ ಹಿಂದು ಮುಂದಿಡಬೇಕು. ಮತ್ತು ನಿಬಂಧದ

**ರೂಪರೇಖೆಯನ್ನು** ಸಿದ್ಧಪಡಿಸಬೇಕು. ರೂಪರೇಷೆಯಲ್ಲಿ ಆಯಾ ಅಂಶ ಗಳಿಗೆ ಅವುಗಳ ಮಹತ್ವಕ್ಕನುಗುಣವಾದ ಸ್ಥಲವನ್ನು ಕೊಡಬೇಕು. ಅದ ರಿಂದ ಇಡಿಯ **ನಿಬಂಧವು ಒಂದು ಸುಂದರ ಸುಸಂಬದ್ಧ ಆಕೃತಿ ಯಾಗಬೇಕು.**

**೪. ಅಂಗರಚನೆ :—**

ಪ್ರತಿಯೊಂದು ನಿಬಂಧಕ್ಕೂ ಅಂಗಗಳು ಮೂರು. (೧) **ಉಪಕ್ರಮ,** (೨) **ಪ್ರಧಾನಭಾಗ,** (೩) **ಉಪಸಂಹಾರ.** ನಿಬಂಧದ ಈ ಮೂರು ಅಂಗಗಳು ಸರಿಯಾದ ರೀತಿಯಲ್ಲಿ, ಸರಿಯಾದ ಪ್ರಮಾಣದಲ್ಲಿ ಪರಿಪೋಷಿತ ವಾದರೆ ಅದಕ್ಕೆ ಆಕರ್ಷಕತೆ ಬರುವುದುಂಟು. ಅದರ ಸಲುವಾಗಿ ಮುಂದೆ ಕೆಲವು ಸೂಚನೆಗಳನ್ನು ಮಾಡಿರುವೆವು. ಆದರೆ ಅವನ್ನು ತಿಳುಳಿರಿತು ಉಪಯೋಗಿಸಬೇಕೇ ಹೊರತು ಯಾಂತ್ರಿಕವಾಗಿ ಅಲ್ಲ.

(೧) **ಉಪಕ್ರಮ :—**ಉಪಕ್ರಮದಲ್ಲಿ ಸಾಮಾನ್ಯವಾಗಿ ವಿಷಯ ವಿವೇಚನೆಯ ಪರಿಚಯ ಮಾಡಿಕೊಡುವ ರೂಢಿಯುಂಟು. ಅದು ಓದುಗರ ಮನಸ್ಸನ್ನು ಸೆಳೆಯುವಂತಹದಿರಬೇಕು. ಹಾಗಿದ್ದರೆ ಮಾತ್ರ ಅವರು ನಿಬಂಧ ದೆಡೆಗೆ ಗಮನ ಕೊಡುವರು. ಉಪಕ್ರಮದಲ್ಲಿಯೇ ನಿಬಂಧದಲ್ಲಿಯ ನಿಮ್ಮ ವ್ಯಕ್ತಿತ್ವವು ಕಾಣಬೇಕು. ಹೊಸ ವಿಚಾರವನ್ನು ಹೊಸ ರೀತಿಯಿಂದ ನಿಬಂಧ ದಲ್ಲಿ ಇಡಲಾಗಿದೆ ಎಂಬುದು ಓದುಗರಿಗೆ ಹೊಳೆಯಲಿ !

ನಿಬಂಧವನ್ನು ಇದೇ ರೀತಿಯಿಂದ ಪ್ರಾರಂಭಿಸಬೇಕೆಂದು ಹೇಳಲು ಬರುವಂತಿಲ್ಲ. ಆದರೂ ಆಯ್ದ ವಿಷಯಕ್ಕೆ ಸಂಬಂಧಿಸಿದ—

(೧) ಸಾಮಾನ್ಯ ಸಿದ್ಧಾಂತದಿಂದಲೂ

(೨) ಹಿರಿಯರ ನುಡಿಯಿಂದಲೂ

(೩) ನಾಣ್ಣುಡಿಯಿಂದಲೂ, ಪದ್ಯದ ಸಾಲಿನಿಂದಲೂ

(೪) ಪ್ರಸಂಗ–ಚಿಕ್ಕ ಕತೆಗಳಿಂದಲೂ

ಅದನ್ನು ಆರಂಭಿಸಬಹುದು. ಒಮ್ಮೊಮ್ಮೆ ಪ್ರಾರಂಭಕ್ಕೆ ಕೆಲವು ಪ್ರಶ್ನೆಗ ಳನ್ನು ಕೇಳುವುದುಂಟು.

ಉಪಕ್ರಮವು ಒಂದು ಚಿಕ್ಕವಾಕ್ಯವೃಂದದಷ್ಟಿರಬೇಕು. ಅದಕ್ಕೂ ದೊಡ್ಡದಾಗಿರಕೂಡದು.

(೨) **ಪ್ರಧಾನ ಭಾಗ :—** ಇದೇ ನಿಬಂಧದ ಶರೀರ. ಇದರಲ್ಲಿಯೆ

ವಿಷಯದ ವಿವೇಚನೆಯಾಗುವುದು. ಇದರ ಬೆಳವಣಿಗೆಯ ಮೇಲೆಯೆ ನಿಬಂಧದ ಯಶಾಪಯಶಗಳು ಅವಲಂಬಿಸಿರುವವು. ಆದುದರಿಂದ ಇದರ ವಿಷಯವಾಗಿ ಎಷ್ಟು ದಕ್ಷತೆಯನ್ನು ವಹಿಸಿದರೂ ಕಡಿಮೆಯೇ !

(i) ವಿವೇಚನೆಯಲ್ಲಿ ಅತ್ತಿತ್ತ ಅಲೆದಾಡಬೇಡ. ಹೇಳಬೇಕಾದ ವಿಷಯವನ್ನು ನೇರವಾಗಿ ಹೇಳಬೇಕು. ವಿಷಯವನ್ನು ಸಿದ್ಧಪಡಿಸಲು ಬೇಕಾದ ಪ್ರಮಾಣಗಳನ್ನು ಔಚಿತ್ಯವನ್ನರಿತು ಉಪಯೋಗಿಸಬೇಕು. ನಿಬಂಧದಲ್ಲಿಯ ಪ್ರತಿಯೊಂದು ಮಾತೂ ವಿವೇಚನೆಗೆ ಪುಷ್ಟಿಯನ್ನೀಯಬೇಕು.

(ii) ವಿಚಾರವು ಕ್ರಮದಿಂದ ಅರಳಲಿ ! ಹೆಜ್ಜೆಹೆಜ್ಜೆಗೆ ವಿಚಾರದಲ್ಲಿ ಪ್ರಗತಿ-ವಿಕಾಸ-ಆದದ್ದು ಕಂಡುಬರಲಿ. ಪ್ರತಿ ವಾಕ್ಯವೃಂದದಲ್ಲಿ ಒಂದಡಿ ಮುಂದೆ ಬಿದ್ದದ್ದು ಕಂಡುಬರಬೇಕು.

(iii) ನಿಬಂಧದಲ್ಲಿ ಸಾಧಕ-ಬಾಧಕ ಪ್ರಮಾಣಗಳ ತರ್ಕಯುತವಾದ ವಿವೇಚನೆಯಿದ್ದರೂ ನಡೆಯಬಹುದು. **ನಿಶ್ಚಯಾತ್ಮಕ ನಿರ್ಣಯಕ್ಕೆ ಬರಲೇಬೇಕೆಂಬ** ಅವಶ್ಯಕತೆಯಿಲ್ಲ.

(iv) ಹಿತವಾದ ಸ್ವಂತ ಯೋಚನೆ ಅನುಭವಗಳನ್ನು ಮಿತಿಯಿಂದ ಹೇಳಬೇಕು. ಅತ್ಯುಕ್ತಿಯು ಯಾವಾಗಲೂ ತ್ಯಾಜ್ಯವಾದುದು.

(v) ಅವತರಣಗಳು (Quotation) ಆದಷ್ಟು ಕಡಿಮೆ ಇರಲಿ ! ವಿವರಣದ ರೀತಿಯೂ ಶೈಲಿಯೂ ನಿಮ್ಮದೆ ಇರಲಿ ! ಅವತರಣಗಳು ಅಪರಿಹಾರ್ಯವೆಂದೆನಿಸಿದರೆ ಅವುಗಳಲ್ಲಿ ತೀರ ನೂತನವಾದ ಕೆಲವನ್ನು ಆರಿಸಿ ಉಪಯೋಗಿಸಬೇಕು.

(೩) **ಉಪಸಂಹಾರ**:—ಉಪಕ್ರಮದಂತೆ ಇದರಲ್ಲಿಯೂ ಸ್ವತಂತ್ರ ವಿಚಾರ ಬೇಕು. ಅದು ಬೆರಗುಗೊಳಿಸುವಂತಹದಿರಬೇಕು. ವಿವೇಚನೆಯ ಫಲಿತಾಂಶವು ಅದರಲ್ಲಿರಬಹುದು. ಅದೊಂದು ವಿಷಯದ ಸಮಾರೋಪ. ಇದನ್ನು ಅತ್ಯುತ್ತಮ ಮಾದರಿಯ ನಿಬಂಧಗಳ ಪರಿಶೀಲನದಿಂದಲೇ ಕಲಿಯತಕ್ಕದ್ದು. ನಿಶ್ಚಿತವಾದ ನಿಬಂಧನೆಗಳನ್ನು ಹೇಳಲು ಬರುವಂತಿಲ್ಲ.

ಆದಿಯಂತೆ ಕೊನೆಗೂ ವಿಷಯದ ತಿರುಳನ್ನೊಳಗೊಂಡ ಸತ್ಪುರುಷರ ವಚನ-ಕವಿತೆಯ ಸಾಲು-ಇತ್ಯಾದಿಗಳನ್ನಿಟ್ಟು ಅದಕ್ಕೆ ಸೊಬಗನ್ನುಂಟು ಮಾಡಬಹುದು.

೫. **ಪ್ರಭೇದಗಳು** :—

ನಿಬಂಧಗಳಲ್ಲಿ ಕೆಲವರು **ಮೂರು**, ಕೆಲವರು **ನಾಲ್ಕು**, ಬೇರೆ ಕೆಲವರು **ಐದು** ಪ್ರಭೇದಗಳನ್ನು ಕಲ್ಪಿಸುವುದುಂಟು. ನಾವು ಕೆಳಗಿನ ನಾಲ್ಕು ಪ್ರಭೇದಗಳೇ ಪ್ರಧಾನವಾದವುಗಳೆಂದೆಣಿಸಿ ಅವುಗಳ ವಿಷಯವಾಗಿ ಮುಂದೆ ವಿವೇಚನೆಯನ್ನು ಮಾಡಿರುವೆವು.

(೧) **ವರ್ಣನಪರ ನಿಬಂಧಗಳು**, (೨) **ಕಥನಪರ ನಿಬಂಧಗಳು**, (೩) **ಚಿಂತನಪರ ನಿಬಂಧಗಳು**, (೪) **ಕಲ್ಪನಾಪರ ನಿಬಂಧಗಳು**.

ಈ ನಾಲ್ಕು ಪ್ರಭೇದಗಳ ಹೆಸರುಗಳು ಅವುಗಳಲ್ಲಿಯ ಮುಖ್ಯ ವಿಷಯಗಳನ್ನನುಲಕ್ಷಿಸಿ ಕೊಡಲ್ಪಟ್ಟಿವೆ. ಆದರೆ ಒಂದು ಪ್ರಭೇದದಲ್ಲಿ ಉಳಿದ ಪ್ರಭೇದಗಳಲ್ಲಿಯ ವಿಷಯಗಳು ಇರುವುದೇ ಇಲ್ಲವೆಂದು ತಿಳಿಯಬಾರದು. ಉದಾಹರಣಾರ್ಥವಾಗಿ:—ವರ್ಣನಪರ ನಿಬಂಧದಲ್ಲಿ ಕಥನವೂ ವಿಚಾರಗಳೂ ಕಲ್ಪನಾವಿಲಾಸವೂ ಇರುವುದಿಲ್ಲವೆಂದಲ್ಲ. ಆದರೆ ಅದರಲ್ಲಿ ವರ್ಣನೆಗೆ ಪ್ರಾಧಾನ್ಯವಿದ್ದಮೂಲಕ ಅದಕ್ಕೆ ಆ ಹೆಸರು. ಮಿಕ್ಕ ಪ್ರಭೇದಗಳಿಗೂ ಇವೇ ಮಾತು ಅನ್ವಯಿಸುವುದು.

## ೬. ವರ್ಣನಪರ.

೧. **ಅಂದರೇನು ?**

ನಾವು ಕಂಡ ವಸ್ತುವನ್ನು ಅನ್ಯರು ಕಾಣುವಂತೆ, ಅರಿತ ಪ್ರಸಂಗವನ್ನು ಅನ್ಯರು ಅರಿಯುವಂತೆ, ಪಡೆದ ಅನುಭವವನ್ನು ಅನ್ಯರು ಪಡೆಯುವಂತೆ, ಸರಿಯಾಗಿ ಬಣ್ಣಿಸುವ ಬರಹಕ್ಕೆ ಮೇಲಿನ ಹೆಸರು. ನಮ್ಮ ಕಣ್ಣುಗಳನ್ನು ತಣಿಸಿದ ಚಿತ್ರದ ಅಂದವಾದ ಪ್ರತಿಬಿಂಬವು ನಮ್ಮ ಬರಹದಲ್ಲಿ ಮೂಡಿ ಓದುಗರನ್ನು ತಣಿಸಬೇಕು.

ವರ್ಣನೆಯಲ್ಲಿ ಎರಡು ರೀತಿಗಳಿವೆ. ಇದ್ದದ್ದನ್ನು **ಇದ್ದಂತೆಯೆ ಒಂದೂ ವಿವರವನ್ನೂ ಬಿಡದೆ ಬಣ್ಣಿಸುವುದು ಒಂದು ರೀತಿ. ಕಂಡದ್ದನ್ನು ಕಂಡಹಾಗೆ, ವಿಶೇಷತಃ ನಮ್ಮ ಮನಸ್ಸಿನಲ್ಲಿ ಮೂಡಿದ ಅದರ ಮುಖ್ಯಾಂಶಗಳನ್ನು ಚಿತ್ರಿಸುವುದು ಇನ್ನೊಂದು ರೀತಿ.** ಎರಡೂ ಬಗೆಗಳು ಉಪಯುಕ್ತವಾದವುಗಳು. ಪ್ರಸಂಗವನ್ನರಿತು ಅವುಗಳಲ್ಲಿಯ ಒಂದನ್ನು ಉಪಯೋಗಿಸಬೇಕು. ವಿದ್ಯಾರ್ಥಿಗಳು ಹೆಚ್ಚಾಗಿ ಎರಡನೆಯ ರೀತಿಯಿಂದಲೇ ಬಣ್ಣಿಸಬೇಕು.

**೨. ಬರೆವುದೆಂತು ? :—(ಅ) ಸಾಮಾನ್ಯ ಪರಿಚಯ :**

(೧) ವರ್ಣ್ಯವಸ್ತುವನ್ನು ಇಲ್ಲವೆ ಪ್ರಸಂಗವನ್ನು ಸೂಕ್ಷ್ಮರೀತಿಯಿಂದ ನಿರೀಕ್ಷಿಸಬೇಕು. ಅದರ ಅಂಗಾಂಗಗಳ ಪರಿಚಯವನ್ನು ಮಾಡಿಕೊಳ್ಳಬೇಕು.

(೨) ಅವರಲ್ಲಿ ಮುಖ್ಯಾಂಶಗಳನ್ನು ಆಯ್ದುಕೊಳ್ಳಬೇಕು. ಆಗ ವಸ್ತುಗಳ ಸಾಮಾನ್ಯ ಗುಣಗಳನ್ನು ತೊರೆದು ವಿಶೇಷ ಗುಣಗಳನ್ನಷ್ಟೇ ಹೆಚ್ಚಾಗಿ ಗಮನಿಸಬೇಕು.

(೩) ಬಣ್ಣನೆಯಲ್ಲಿ ಒಂದು ಕ್ರಮವಿರಲಿ; ಪ್ರಮಾಣಬದ್ಧತೆಯಿರಲಿ. ಆಯಾ ಮಾತುಗಳಿಗೆ ಸರಿಯಾದ ಸ್ಥಲ ದೊರೆಯಲಿ !

(೪) ಶೈಲಿಯು ಸುಲಭವಿರಲಿ; ವರ್ಣ್ಯವಾದ ಪ್ರಸಂಗಕ್ಕೆ ಉಚಿತ ವಾದ ಶಬ್ದಯೋಜನೆಯಿರಲಿ. ಕೋಮಲ ಪ್ರಸಂಗವನ್ನು ಬಣ್ಣಿಸುವಾಗ ಲಲಿತ ಶಬ್ದಗಳನ್ನೂ ಭೀಕರ ಪ್ರಸಂಗದ ಬಣ್ಣನೆಯಲ್ಲಿ ಕರ್ಕಶ ಶಬ್ದಗಳನ್ನೂ ಉಪಯೋಗಿಸಬೇಕು.

(೫) ಅಲಂಕಾರಗಳನ್ನು ಮಿತಿಯಾಗಿ ಸೇರಿಸಿರಿ. ಅವು ಶೈಲಿಗೆ ಸೊಬಗನ್ನು ಕೊಡುವುದು ನಿಜ. ಆದರೆ ಅವುಗಳ ಅತಿಯಾದ ಉಪಯೋಗದಿಂದ ಶೈಲಿಯು ದುರ್ಬೋಧವಾಗುವುದು.

**(ಆ) ವಿಶೇಷ ಪರಿಚಯ :**

ಇಡೀ ವಿಶ್ವವೇ ಬಣ್ಣನೆಗೆ ಯೋಗ್ಯವಾದ ವಿಷಯ. **ಬಣ್ಣನೆಯು ಬರಹದ ತುದಿ-ಮೊದಲು :** ಬರಹವು ಬಣ್ಣನೆಯಿಂದ ಪ್ರಾರಂಭವಾಗಿ ಬಣ್ಣನೆಯಲ್ಲಿಯೇ ಕೊನೆಗಾಣುವುದು. ಬಣ್ಣನೆಯು ಬಾಲಕರ ಆಟ; ಕವಿಗಳ ಕನಸು. ಆದುದರಿಂದ ಬಣ್ಣನೆಯು ತೀರ ಸುಲಭವಾದುದೂ ಉಂಟು; ತೀರ ಬಿಗಿಯಾದುದೂ ಉಂಟು.

ನಾವಿಲ್ಲಿ ಆರಿಸಿದುದು ಕೆಲವು ಸುಲಭ ವಿಷಯಗಳನ್ನು. ಅವುಗಳಲ್ಲಿ ಕೆಲವು ಮಾದರಿಯ ಬಣ್ಣನೆಗಳನ್ನು ಬರೆದು ತೋರಿಸಿ, ಅಂಥವುಗಳನ್ನು ವಿದ್ಯಾರ್ಥಿಗಳು ಬರೆಯಬೇಕೆಂದು ಕೆಲವು ವಿಷಯಗಳನ್ನು ಸೂಚಿಸಿರುವೆವು. ಮಾದರಿಗಳನ್ನನುಕರಿಸಿ ಬಾಲಕರೂ ಸೂಚಿತ ವಿಷಯಗಳ ಮೇಲೆ ನಿಬಂಧಗಳನ್ನು ಬರೆಯುವ ಅಭ್ಯಾಸವನ್ನು ಮಾಡಬೇಕು.

**೩. ಮಾದರಿಯ ನಿಬಂಧಗಳು :—**

## ೧. ವೆಸ್ಟಮಿನಿಸ್ಟರ ಅಬೆ

೧. **ಉಪಕ್ರಮ :—**ಕನಿಷ್ಠ ಒಂದು ಸಾವಿರ ವರ್ಷದಷ್ಟು ಪುರಾ

ತನ ಮಂದಿರವಿದು. ಇಲ್ಲಿ ಸತ್ತ ಸಾರ್ವಭೌಮರು ಮಲಗಿರುವರು. ಕವಿ ಪುಂಗವರು ಒರಗಿರುವರು. ಸತ್ತವರ ಸ್ಮಾರಕವೆಂದು ಇದಕ್ಕಿಂತ ಘನತರ ವಾದ ಮಂದಿರವು ಜಗತ್ತಿನಲ್ಲಿ ಇನ್ನೆಲ್ಲಿಯೂ ಇಲ್ಲ.

೨. **ಕಟ್ಟಡ**:—ಹೊರಗಿನಿಂದ ಉತ್ತಮವಾಗಿ ಶೃಂಗರಿಸಿದ ಸಣ್ಣ ಬಾಗಿಲೊಂದು ಕಾಣುತ್ತಿದೆ. ಒಳಗೆ ಮಾತ್ರ ಕಟ್ಟಡವು ಭವ್ಯವಾಗಿದೆ. ನಡುವೆ ಬಿಟ್ಟ ಸಣ್ಣ ಹಾದಿಯ ಎಡಬಲಕ್ಕೆ ರಾಜಕಾರಣಚತುರರ ಶಿಲಾ ಮೂರ್ತಿಗಳಿವೆ. ಮೊದಲು ಕಣ್ಣಿಗೆ ಬೀಳುವ ದೃಶ್ಯವೇ ಇದು. ರಾಜರಿ ಗಿಂತ, ಕವಿಗಳಿಗಿಂತ, ಇವರೇ ಆಂಗ್ಲರ ಕೀರ್ತಿಧ್ವಜವನ್ನು ನಿಲ್ಲಿಸಿದರೆಂದು ಇಲ್ಲಿಯವರ ಅಭಿಪ್ರಾಯವೆಂದು ಕಾಣುತ್ತಿದೆ. ಸಹಜವಾಗಿ ಮೇಲೆ ನೋಡಲು ಅಲ್ಲಿ ಅರ್ಲ ಆಫ್ ಚಥ್ಯಮ್ (Earl of Chatham) ನು ನನ್ನ ಕಡೆಗೆ ನೋಡುತ್ತ ನಿಂತಿದ್ದನು. ಹಾಗೆ ಎದುರಿಗೆ ದಿಟ್ಟಿಸಿ ನೋಡಿದೆ. **ಗ್ಲ್ಯಾಡ ಸನ್, ಪೂಲ್ಫ್, ಡಿಸ್‌ರೇಲಿ** ಮೊದಲಾದವರು ಕಣ್ಣಿಗೆ ಬಿದ್ದರು. ಇವೇ ಮೊದಲಾದ ಶಿಲಾಮೂರ್ತಿಗಳ ನಡುವೆ ಹಾಯ್ದು ಪಾದ್ರಿಯ ಆಸನದ ಕಡೆಗೆ ಹೋದೆ. ಅಲ್ಲಿ ಉತ್ತಮವಾದ ಕೆತ್ತನೆಯ ಕೆಲಸವು ಕಣ್ಣಿಗೆ ಬಿತ್ತು. ಬಂಗಾರದ ಬಣ್ಣವನ್ನು ಅದಕ್ಕೆ ಕೊಟ್ಟಿದ್ದರು.

೩. **ಕವಿಗಳ ಮೂಲೆ**:—ಆ ಮೇಲೆ ನನಗೆ ಬೇಕಾದ **ಕವಿಗಳ ಮೂಲೆಗೆ** (Poets' Corner) ಹೋದೆ. ಮೊನ್ನೆ ಮೊನ್ನೆ ತೀರಿಕೊಂಡ ಕಿಪ್ಲಿಂಗ ಕವಿಯ ಮೇಲೆ ಹಾಕಿದ ಕಲ್ಲು ಅಲ್ಲಿ ಕಣ್ಣಿಗೆ ಬಿತ್ತು. ಅದಕ್ಕೆ ತುಸು ದೂರದಲ್ಲಿಯೆ **ಹಾರ್ಡಿಯು** ಒರಗಿದ್ದನು. **ಮಕಾಲೆ, ಜಾನ್ಸನ್, ಗೋಲ್ಡ ಸ್ಮಿಥ್**—ಎಲ್ಲರಿಗೂ ಒಂದೊಂದು ಹಿಡಿ ಮಣ್ಣನ್ನು ನಾವು ಕೊಡು ವಂತೆ, ಒಂದೊಂದು ಕಲ್ಲನ್ನು ಇಲ್ಲಿ ಕೊಟ್ಟಿದ್ದಾರೆ. ಈ ಕಲ್ಲಿನ ಮೇಲೆ ಹಾಯ್ದಾಡುತ್ತ ನಾವು ಹೋಗುತ್ತೇವೆ. ಪ್ರತಿಯೊಂದು ಹೆಜ್ಜೆಯ ಬುಡಕ್ಕೆ ಬಿಜ್ಜೆ (ವಿದ್ಯೆ) ಯ ಭಾರವನ್ನು ತುಳಿಯುತ್ತೇವೆ. ಅಡಿಗಡಿಗೆ ಇತಿಹಾಸವನ್ನು ದಾಟುತ್ತೇವೆ! ಎಂಥ ವಿಚಿತ್ರ! ಆದರೂ ಈ ಕವಿಗಳ ಮೂಲೆಯಲ್ಲಿ ನಡೆದಾಗ ಭವ್ಯತೆಯು ಬಂದು ಕಣ್ಣೆದುರು ನಿಲ್ಲುತ್ತದೆ. ಹೃದಯವು ಕಂಪಿ ಸುತ್ತದೆ. ಕಡೆಗೆ ದಿಕ್ಕು ತಪ್ಪಿದಂತಾಗಿ—ಯಾರನ್ನು ತುಳಿದರೇನು? ಎಲ್ಲಿ ಹೆಜ್ಜೆ ಹಾಕಿದರೇನು? ಎಲ್ಲವೂ ಅಷ್ಟೆ! ಮಣ್ಣು; ಮಣ್ಣು! ಎಂದು ಮನ ಸ್ಸಿಗೆ ಬಂದಂತೆ ಮನುಷ್ಯನು ನಡೆದುಹೋಗುತ್ತಾನೆ.

೪. **ವೈಜ್ಞಾನಿಕರ ಮೂಲೆ** :—ಇದಕ್ಕೆ ಸಮೀಪವಾಗಿ ವೈಜ್ಞಾನಿಕರ ಮೂಲೆಯಿದೆ. ಇಲ್ಲಿ **ನ್ಯೂಟನ್‌ನ** ದೊಡ್ಡ ಶಿಲಾಮೂರ್ತಿಯನ್ನು ನಿಲ್ಲಿಸಿದ್ದಾರೆ. **ಡಾರ್ವಿನ್, ಹರ್ಸಲ್** ಮೊದಲಾದವರ ಮೇಲೆ ಕಲ್ಲೊಗೆದಿದ್ದಾರೆ. ಇವಕ್ಕೆ ಹತ್ತಿರದಲ್ಲಿ ವ್ಯಾಪಾರಿಗಳು, ವಾಸ್ತುಶಿಲ್ಪಿಗಳು, ಸರದಾರರು, ಸೇನಾಪತಿಗಳು ಮೊದಲಾದ ಅನೇಕರಿಗೆ ಸ್ಥಲವು ದೊರೆತಿದೆ. ಇವರಲ್ಲಿ ಎಲ್ಲರೂ ಅಷ್ಟೊಂದು ಹೆಸರುವಾಸಿಯಾದವರಲ್ಲ. '**ವಸೀಲಿ**' (Influence) ಯ ಮೇಲೆ ಸ್ಥಲ ದೊರೆತಂತೆ ಕಾಣುತ್ತಿದೆ.

೫. **ಅರಮನೆ** :—ಆ ಮೇಲೆ ಅರಸರ ಅರಮನೆಗೆ ಹೋದೆ. ರಾಜದಂಡವೂ ಕಿರೀಟವೂ ಕೆಳಕ್ಕುರುಳಲೇ ಬೇಕು, ಎಂಬುದು ನಿಜವಾಗಿದ್ದರೂ ಸತ್ತಮೇಲೆ ಸಹ ಅವರಿಗೊಂದು ವಿಶಿಷ್ಟಸ್ಥಾನವನ್ನು ಕಲ್ಪಿಸಿದ್ದಾರೆ. ಇದಕ್ಕೆ Royal Chapel (ರಾಜವಿಭಾಗ) ಎಂದು ಹೆಸರು. ಪಾಪಿಷ್ಠರಾದ ಅರಸರಿಗೂ ಇಲ್ಲಿ ಶ್ರೇಷ್ಠವಾದ ಸ್ಥಾನವನ್ನು ಕಲ್ಪಿಸಿದ್ದಾರೆ. **ಸಿಂಹದೆದೆಯ ರಿಚರ್ಡ, ೩ನೆಯ ಎಡ್ವರ್ಡ, ರಾಣಿ ಎಲಿಜಾಬೆಥ್** ಮೊದಲಾದ ಅರಸು-ಅರಸಿಯರು ಈ ರಾಜಮಂದಿರದಲ್ಲಿ ಒರಗಿದ್ದಾರೆ. ಮುಖ್ಯತಃ ಗೋರಿಯಮೇಲೆ ಆ ಆ ವ್ಯಕ್ತಿಗಳು ಮಲಗಿಕೊಂಡಂತೆ ಮೂರ್ತಿಯನ್ನು ಕಟೆದಿದ್ದಾರೆ. ಈ ಗೋರಿಗಳ ನಡುವೆ ಹಾಯ್ದು ಅರಸರ ಪ್ರಾರ್ಥನಾ ಮಂದಿರಕ್ಕೆ ಹೋಗಬಹುದು. ಇಲ್ಲಿಯ ಕೆತ್ತನೆಯ ಕೆಲಸವೆಲ್ಲ ಬಂಗಾರದ ಬಣ್ಣದಲ್ಲಿಯೇ ಆಗಿದೆ. ಮಂದಿರದ ಹಿಂದೆ ಭವ್ಯವಾಗಿ ೭ನೆಯ **ಹೆನ್ರಿಯ** ಗೋರಿಯು ನಿಂತಿದೆ.

ಸಮ್ರಾಟರ ಪಟ್ಟಾಭಿಷೇಕವಾಗುವಾಗ ಅವರ ಸಿಂಹಾಸನದ ಮೇಲೆ ಒಂದು ಕಲ್ಲುಪಾಟಿಯನ್ನು ಹಾಕುತ್ತಾರೆ. ಪಟ್ಟಾಭಿಷೇಕವಾಗುವಾಗ ಮಾತ್ರ ಸಮ್ರಾಟರು ಇದರ ಮೇಲೆ ಕೂಡಬೇಕು. ಈ ಶಿಲೆಯನ್ನೊಳಗೊಂಡ ಸಿಂಹಾಸನವು ಈ ಮಂದಿರದ ಒಂದು ಭಾಗದಲ್ಲಿದೆ. ಅದರಲ್ಲಿ ಯಾವ ಸಿದ್ಧಿಯಿದೆಯೋ, ಯಾವ ಮಂತ್ರವಿದೆಯೋ ನಾನರಿಯೆ.

೬. **ಉಪಸಂಹಾರ** :—ಇದನ್ನೆಲ್ಲ ನೋಡಿದರೆ 'ಮರ್ತ್ಯತ್ವವೇ! ಎಷ್ಟು ಗೋರಿ ಗುಂಪುಗಳು ಇಲ್ಲಿವೆ! ನೋಡಿ ಅಂಜು' ಎಂಬ ಓರ್ವ ಕವಿಯ ಹಾಡು ನೆನಪಿಗೆ ಬರುತ್ತದೆ.

—ವಿನಾಯಕ.

## ೨. ಗೆರೆಸೊಪ್ಪೆಯ ಜಲಪಾತ.

**೧. ಉಪಕ್ರಮ:—ಗೆರೆಸೊಪ್ಪೆಯ** ಹೆಸರನ್ನು ಕೇಳಿದವರು ಬಹಳ; ಅದನ್ನು ನೋಡಿದವರು ಕೆಲವರು ಮಾತ್ರ. ನಿಜ, ನಾವು ಕೇಳಿದುದನ್ನೆಲ್ಲಾ ನೋಡಲು ಬಂದೀತೆ? ಆದರೆ ಗೆರೆಸೊಪ್ಪೆಯು ನಮ್ಮ ನಾಡಿನಲ್ಲಿದ್ದು ನಾವು ಅದನ್ನು ನೋಡದೆ ಹೋದರೆ ಹೇಗೆ? ಅದು ಪ್ರಪಂಚದ ಅತಿ ಸೊಗಸಿನ ಸ್ಥಳಗಳಲ್ಲಿ ಒಂದೆನಿಸುವ ಯೋಗ್ಯತೆಯುಳ್ಳದ್ದು.

**೨. ಜಲಪಾತ**:—ನೀರು ಭೋರಿಭೋರಿದು ಹೋಗುವ ನೋಟವು ನಮ್ಮ ಸಂತೋಷವನ್ನು ಅರಳಿಸುವುದು. ಅದರಲ್ಲೂ ಅದು ಒಮ್ಮೆಲೇ ಕೆಳಗೆ ಧುಮುಕುವ ನೋಟವು ಒಳ್ಳೆಯ ಸಾಹಸದ ಕಲ್ಪನೆಯನ್ನು ಹುಟ್ಟಿಸುವುದು. ಈ ನೀರು ಎಷ್ಟು ಸಾಹಸದಿಂದ ಕೆಳಕ್ಕೆ ಹಾರಿತು—ಎಂದೆಮಗೆ ಎನಿಸುವುದು.

**ಗೆರೆಸೊಪ್ಪೆ**ಯಲ್ಲಿ ಹೀಗೆಯೇ ಇದೆ. ಅಲ್ಲಿ ಹಾರುವುದು ಚಿಕ್ಕ ಚರಂಡಿಯಲ್ಲ. ಒಂದು ಫರ್ಲಾಂಗಿಗಿಂತ ಅಗಲವಾದ ಒಂದು ನದಿಯೇ ಕೆಳಕ್ಕೆ ಧುಮುಕುವುದು. ಧುಮುಕಾಟವೂ ಚಿಕ್ಕದಲ್ಲ; ಹತ್ತೆಂಟು ಆಳು ಪ್ರಮಾಣ ಹಾರುವುದಲ್ಲ; ಎಂಟು ನೂರು ಅಡಿಗೂ ಹೆಚ್ಚಿಗೆ ಹಾರುವುದು. ಹೀಗೆ ಬೀಳುವ ನೀರಿಗೆ **ಜಲಪಾತ** ಇಲ್ಲವೆ **ಜೋಗ** ಎನ್ನುವುದು ರೂಢಿ.

**೩. ಸಾಮಾನ್ಯ ವರ್ಣನೆ**:—ಪಶ್ಚಿಮ ಘಟ್ಟಗಳಿಂದ ಕೆಳಕ್ಕೆ ಹಾರುವ ನದಿಯು **ಶರಾವತಿಯು.** ಗೆರೆಸೊಪ್ಪೆಯ ಹೆಸರಾದ ಜೋಗು, ಈ ಶರಾವತಿಯ ಜಲಪಾತವಲ್ಲದೆ ಬೇರೆಯಲ್ಲ. ಎರಡು ಬೆಟ್ಟಗಳ ಎಡೆಯಲ್ಲಿ ಅದು ಹರಿಯುವುದು. ಮಲೆನಾಡಿನ ನೀರನ್ನೆಲ್ಲಾ ಕೂಡಿಸಿಕೊಂಡು ಆ ನದಿಯು ಬರುವುದು. ಮುಂದೆ ಆಳವಾದ ಕಣಿವೆಯಿದೆ. ಸಾಧಾರಣ ಒಂಬತ್ತು ನೂರು ಅಡಿಗಳಷ್ಟು ಆಳವಿದೆ. ಅದನ್ನು ಕಂಡು, ನದಿಯು ನಿಂತು ಯೋಚಿಸುವುದು—ಹಾರುವುದೇ, ಬಿಡುವುದೇ, ಎಂದು. ಹಾರದೇ ಉಪಾಯವಿಲ್ಲ; ಅದಕ್ಕೆ ಹೋಗಲು ಬೇರೆ ದಾರಿಯಿಲ್ಲ; ಹಾರಿಯೇ ಬಿಡುವುದು....

**೪. ನಾಲ್ಕು ತಡಸಲುಗಳು**:—ಹಾರುವಾಗ ನಾಲ್ಕು ತಡಸಲುಗಳಾಗಿ ಬೀಳುವುದು. ಮೊದಲಿನ ತಡಸಲಿನ ಹೆಸರು **ರಾಜಾ** ಎಂದು. ಅದು ಮೇಲಿಂದ ಕೆಳಕ್ಕೆ ಒಂದೇ ಧುಮುಕಾಟವನ್ನು ಮಾಡುವುದು. ಹಾರಿದ ಭರಕ್ಕೆ ಗಾಳಿಯ ಅಬ್ಬರದಿಂದಲೇ ಅದರ ನೀರು ತುಂತುರುಗಳಾಗಿ ಕೆಳಗೆ ಬೀಳುವವು. (ಈ ತಡಸಲಿನ ಆಳವು ೮೩೦ ಅಡಿಗಳಷ್ಟಿದೆ.)

ಇವರ ಸುಗ್ಗಲಿಗೆ ' **ಅಬ್ಬರ** ' ತಡಸಲು ಎಂದಿವೆ. ಅಬ್ಬರ-ಎಂದರೆ ತಿಳಿಯುವೇನು? ನದಿಯು ಈ ಭಾಗದ ನೀರು, ಬಂಡೆಯನ್ನು ಅಬ್ಬರದಿಂದ ಕೊರೆದು ಘೋರ್ಗರೆಯುತ್ತ ವಕ್ರವಾಗಿ ಸುತ್ತುವುದು. ಕೊನೆಗೆ ಎರಡು ಸೀಳುಗಳಾಗಿ ಒಡೆದು ಕೆಳಗಿನ ಕಣಿವೆಯನ್ನು ಸೇರುವುದು. ಇದು ಎಬ್ಬಿಸಿ ದಷ್ಟು ಗದ್ದಲವನ್ನು, ಉಳಿದ ತಡಸಲುಗಳು ಎಬ್ಬಿಸುವುದಿಲ್ಲ.

ಇನ್ನುಳಿದ ಎರಡು ತಡಸಲುಗಳು, ತಲೆಯ ಬುಡದಿಂದ ತುದಿಯ ತನಕ ಬಂಡೆಯ ಗೋಡೆಯ ಮೇಲೆ ಕುಣಿಯುತ್ತ, ಒಂದಕ್ಕೆ ಹತ್ತಾಗಿ ಹತ್ತಕ್ಕೆ ನೂರಾಗಿ, ನೂರಕ್ಕೆ ಸಾವಿರಾಗಿ ಒಡೆದು ಕೆಳಗಿಳಿಯುವವು. ನರ್ತಿ ಸುವ ಚದುರೆಯಂತೆ ಅವುಗಳ ನೋಟವಿದೆ. ಈ ನಾಲ್ಕು ತಡಸಲುಗಳ ನೋಟವು ಈ ಪ್ರಾಂತದ ಒಂದೊಂದು ಕಡೆಯಿಂದ ಒಂದೊಂದು ತೆರನಾಗಿ ತೋರುವುದು.

೫. **ನೋಡಲು ತಕ್ಕ ಸಮಯ** :—ಮಳೆಗಾಲದಲ್ಲಿ ಬರೀ ನೀರಿನ ನೆರೆಯೇ ಅಲ್ಲಿ. ನೀರು ಬಿದ್ದು ಕೆಳಗಿನ ಕಣಿವೆಯಲ್ಲಿ ಮುಗಿಲಾಗಿ ಮುಚ್ಚಿ ಬಿಡುವುದು. ನೀರಿನ ಆರ್ಭಟೆಯಲ್ಲದೆ, ಅದು ಉಂಟುಮಾಡಿದ ಯಾವ ನೋಟವೂ ಮುಗಿಲಿನಿಂದ ಕಾಣಲು ಸಿಗುವುದಿಲ್ಲ. ಸೆಕೆಗಾಲದಲ್ಲಿ ನದಿಯ ನೀರು ಇಂಗುತ್ತ ಬಂದು ನದಿಯು ಮುಪ್ಪಿನಿಂದ ನಡೆಯುವ ಮುದುಕನಂತೆ ಕಾಣುವುದು. ಆದರೆ ನವಂಬರ-ಡಿಶೆಂಬರ ತಿಂಗಳುಗಳಲ್ಲಿ ನೀರು ಸಾಕ ಷ್ಟಿದೆ; ಮುಗಿಲಿನ ಅವಾಂತರವೂ ಇಲ್ಲ. ಆಗ ಇದನ್ನು ನೋಡಲು ಎಲ್ಲ ದೇಶಗಳಿಂದಲೂ ಜನರು ಬರುತ್ತಾರೆ.

೬. **ಉಪಸಂಹಾರ** :— ಇಂಥ ಅದ್ಭುತರಮ್ಯ ಜಲಪಾತಗಳನ್ನು ಜಗತ್ತಿಗೆ ತೋರಿಸುವ ಸೌಭಾಗ್ಯವು ನಮಗೆ ದೊರೆತದ್ದಕ್ಕಾಗಿ ನಾವು ತುಂಬಾ ಅಭಿಮಾನ ತಾಳಬೇಕಲ್ಲವೇ?

—ಕಾರಂತ.

## ೩. ಟೆಲಿಫೋನ-ದೂರಧ್ವನಿ

೧. **ಉಪಕ್ರಮ** :—ಇಂದಿನ ಜೀವನಕ್ಕೆ ಉಪಯೋಗವಾದ ಅನೇಕ ಹೊಸ ಸಾಮಗ್ರಿಗಳಲ್ಲಿ ದೂರಧ್ವನಿಯು ಒಂದು. ಅದರ ಸಹಾಯದಿಂದ ನಾವು ದೂರದ ನಮ್ಮ ಗೆಳೆಯರೊಡನೆ ಸಮನಾದ ಮಾತುಕತೆಗಳನ್ನು ನಡೆ ಯಿಸಬಹುದು.

೨. **ಅದರ ರಚನೆ:**— ದೂರಧ್ವನಿಯಲ್ಲಿ ಎರಡು ಭಾಗಗಳಿವೆ. ಒಂದು ಮಾತನ್ನು ಕೇಳಿಸುವ ಭಾಗ, ಇನ್ನೊಂದು ಅದನ್ನು ಕಳುಹಿಸುವ ಭಾಗ. ಇವೆರಡು ತುತ್ತೂರಿಗಳಂತೆ ಇರುವುವು. ಅವುಗಳಲ್ಲಿ ಒಂದನ್ನು ಬಾಯ ಎದುರಿಗೆ ಹಿಡಿದು ಮಾತನಾಡುವೆವು. ಇನ್ನೊಂದನ್ನು ಕಿವಿಯ ಎದುರಿಗೆ ಹಿಡಿದು, ನಮ್ಮ ಸ್ನೇಹಿತನು ಮಾತನಾಡುವುದನ್ನು ಆಲಿಸುವೆವು. ಇಲ್ಲಿಂದಲ್ಲಿಗೂ ಎರಡೆರಡು ವಿದ್ಯುತ್ತಿನ ಸರಿಗೆಗಳಿವೆ. ವಿದ್ಯುತ್ತಿನ ಬಲದಿಂದ ನಾವು ಆಡಿದ ಮಾತುಗಳು ಅವನಿಗೆ ಕೇಳಿಸುವವು; ಅವನಾಡಿದುದು ನಮಗೆ ಕೇಳಿಸುವುದು.

೩. **ಇದು ಹೇಗೆ?** :—ಇದು ಹೇಗೆಂದು ತಿಳಿಯುವಿರಾ? ನಾವು ಮಾತನಾಡುವಾಗ ಬಾಯಿಯಿಂದ ಗಾಳಿಯಲ್ಲಿ ತೆರೆಗಳು ಉಂಟಾಗುವುವು. ಈ ತೆರೆಗಳು ನಮ್ಮ ಧ್ವನಿಯ ಏರಿಳಿತಗಳಿಗೆ ಸರಿಯಾಗಿ ಜೋರಾಗಿಯೋ, ಮೆಲ್ಲಗೋ, ಏರಾಗಿಯೋ, ತಗ್ಗಾಗಿಯೋ ಇರುವುವು. ನಮ್ಮ ಬಾಯ ಎದುರಿಗೆ ಹಿಡಿಯುವ ಉಪಕರಣದಲ್ಲಿ ತೆಳ್ಳಗಿನ ಒಂದು ಲೋಹದ ಹಾಳೆಯಿದೆ. ಸ್ವರವನ್ನು ಕೇಳುವ ಉಪಕರಣದಲ್ಲೂ ಹೀಗೆಯೇ ಇದೆ. ನಮ್ಮ ಮಾತಿನಿಂದ ಆ ಹಾಳೆಯು ಅಲುಗುವುದು. ಈ ಹಾಳೆಯ ಮೂಲಕ ವಿದ್ಯುತ್ತು ಹರಿಯುವುದು. ಗಾಳಿಯು ಬೀಸುವಾಗ, ಬರಿಯ ದೀಪದ ಜ್ವಾಲೆಯೊಂದು ಚಂಚಲವಾಗುವುದಷ್ಟೆ. ಅದರಂತೆ ಈ ಹಾಳೆಯ ಅಲುಗಾಟದಿಂದ ಅದರೊಳಗಿನ ವಿದ್ಯುತ್ತು ಚಂಚಲವಾಗುವುದು. ಮತ್ತು ಅದು ಹರಿದು ನಮ್ಮ ಸ್ನೇಹಿತನ ಮನೆಗೆ ಹೋಗುವುದು.

ಅಲ್ಲಿ ಅವನು ಕಿವಿಗೆ ಹಿಡಿದ ಉಪಕರಣವಿದೆಯಲ್ಲ? ಅದರಲ್ಲಿರುವ ಹಾಳೆಯನ್ನು ಈ ವಿದ್ಯುತ್ತು ಅಲುಗಿಸುವುದು. ಅದರಿಂದ ಅಲ್ಲಿಯ ಗಾಳಿಯಲ್ಲಿ ತೆರೆಗಳು ಉಂಟಾಗಿ ಅವನ ಕಿವಿಯನ್ನು ಬಡಿಯುವುವು. ಆಗ ನಾವು ಆಡಿದ ಮಾತಿನಂತೆ ಅವನಿಗೆ ಸ್ವರವು ಕೇಳಿಸುವುದು.

೪. **ಇದರ ಜಾಲ :**—ಮುಂಬಯಿಯಂಥ ದೊಡ್ಡ ಪಟ್ಟಣಗಳಲ್ಲಿ ಸಾವಿರಾರು ಜನರು ಇದನ್ನು ಇರಿಸಿಕೊಂಡಿರುವರು. ಒಂದು ಮನೆಯಲ್ಲಿ ಇದು ಇದ್ದರೆ ಉಳಿದೆಲ್ಲ ಕಡೆಯವರೊಡನೆಯೂ ಅವರು ಮಾತನಾಡಬಹುದು. ಇದು ಸಾಧ್ಯವಾಗುವಂತೆ ಹೆಚ್ಚಿನ ವ್ಯವಸ್ಥೆಯನ್ನು ಮಾಡಿದ್ದಾರೆ. ಎಲ್ಲರ ಮನೆಗೂ ದೂರಧ್ವನಿಯ ಸರಿಗೆಗಳಿವೆ. ಅವುಗಳು ಒಂದು ಕೇಂದ್ರ ಸ್ಥಳಕ್ಕೆ

ಬರುವುವು. ನಾವು ಆಡುವ ಮಾತುಗಳೆಲ್ಲ ಈ ಕೇಂದ್ರ ಸ್ಥಳದ ಮುಖಾಂತರ ಇತರ ಕಡೆಗಳಿಗೆ ಹಾದು ಹೋಗುವುವು. ಇವನ್ನು ಉಪಯೋಗಿಸುವ ಪ್ರತಿ ಮನೆಯವರಿಗೂ ಒಂದೊಂದು ಗುರುತಿನ ಸಂಖ್ಯೆಯಿದೆ. ನಾವು ಆ ಸಂಖ್ಯೆ ಬರುವಂತೆ ನಮ್ಮ ದೂರ ಧ್ವನಿಯನ್ನು ತಿರುಗಿಸಿಟ್ಟರಾಯಿತು. ಆಗ ಕೇಂದ್ರ ಗೃಹದಲ್ಲಿ ಅದಕ್ಕೆ ಸರಿಯಾದ ಜೋಡಣೆಗಳು ಮಾಡಲ್ಪಡುವವು. ಇವು ತನ್ನಿಂದ ತಾನೆ ಆಗುವಂತೆ ಏರ್ಪಾಡಿದೆ.

ನಗರಗಳಂತೆ ದೇಶದೇಶಗಳೊಡನೆಯೂ ಇಂಥ ಸಂಬಂಧವನ್ನು ನಿರ್ಮಿಸಿದ್ದಾರೆ. ಸಾಧಾರಣ ಮೂರು ಮಿನಿಟಿನ ಅವಧಿಯ ತನಕ ಮಾತನಾಡುವುದಾದರೆ ನೂರಿನ್ನೂರು ರೂಪಾಯಿಗಳಾದರೂ ಬೇಕು.

೩. **ಉಪಸಂಹಾರ**:—ಮಾನವನ ವಿಕಸಿತ ಮತಿಯ ಹಿಡಿತಕ್ಕೆ ಸಿಲುಕದ ವಿಷಯವು ವಿರಲ. —ಕಾರಂತ.

## ೪. ನನ್ನ ಆದರ್ಶ ಮನೆ.

**ಉಪಕ್ರಮ**:—ಮಾನವನಿರುವುದು ಹೆಚ್ಚಾಗಿ ಮನೆಯಲ್ಲಿ. ಅದೇ ಅವನ ಒಲವಿನಾಗರ—ನಲಿವಿನ ಸಾಗರ. ಮನೆಯಿಲ್ಲದ ಮನುಜನು ಕೊನೆಯಿಲ್ಲದ ವ್ಯಸನಗಳಿಗೀಡಾಗುವುದು ನಿಶ್ಚಿತ. ಇದಾಯಿತು ತಾತ್ವಿಕ ಮಾತು. ವ್ಯವಹಾರದಲ್ಲಿದು ಕ್ವಚಿತ್ತಾಗಿ ಕಂಡುಬರುವುದು. ನಿಜವಾಗಿ ಶಾಂತಿಯ ಮಂದಿರವಿರಬೇಕಾದ ಮನೆಗಳು ಕದನದ ಸದನಗಳು—ಅಶಾಂತಿಯ ನೆಲೆವೀಡುಗಳಾಗಿರುವುವು. ಇದು ಹೀಗೇಕೆ ?

ಎಷ್ಟೋ ಸಲ ನಮ್ಮ ಮನೆಯು ಯದೃಚ್ಛೆಯ ನಿರ್ಮಿತಿಯು. ಅದರ ನಿರ್ಮಿತಿಯಲ್ಲಿ ನಮ್ಮ ಬಯಕೆಗೆ ಸ್ಥಾನವೇ ಇರುವುದಿಲ್ಲ. ನಾವು ನಮ್ಮ ಆದರ್ಶಗಳನ್ನು ನಿಶ್ಚಯಿಸಿ ಅದರಂತೆ ನಮ್ಮ ಮನೆಗಳನ್ನು ಹುಟ್ಟಿಸಿದರೆ ಈ ಬಗೆಯ ಅಸಮಾಧಾನಕ್ಕೆ ಅಲ್ಲಿ ಎಡೆ ದೊರೆಯದು.

**ಪರಿಸರ**:—ನನ್ನ ಆದರ್ಶ ಮನೆಯು ಊರಿಂದ ದೂರದಲ್ಲಿ ಬೆಟ್ಟದ ಅಡಿಯಲ್ಲಿರಬೇಕು. ನಿಸರ್ಗಮಾತೆಯ ಸೊಬಗಿನ ಅಂಕದಲ್ಲದು ನೆಲಸಿರಲುಬೇಕು. ಹಿಂದೆ ಗಗನಕ್ಕೇರುವ ಬೆಟ್ಟದ ಸಾಲುಗಳು—ಮುಂದೆ ಜುಳುಜುಳು ಹರಿಯುವ ಹಳ್ಳ; ಸುತ್ತಲು ಹೂ-ಹಣ್ಣುಗಳ ಗಿಡಬಳ್ಳಿಗಳಲ್ಲಿ (ಸುಖವಾಗಿ) ಉಲಿಯುವ-ಇಂಚರಗೈಯುವ ಹಕ್ಕಿಗಳು. ಇವೆಲ್ಲವುಗಳ ಒಲವಿನ ನೆರವಿನಲ್ಲಿ ಅದು ನಿಂತಿರಬೇಕು.

ಪರಿಸರವು ಅಂದವಿದ್ದಂತೆ ಕಟ್ಟಡವು ಚಿಕ್ಕದಾಗಿದ್ದರೂ ಚೊಕ್ಕದಾಗಿರಬೇಕು. ಅರಮನೆಯ ಸೊಬಗು ಅದಕ್ಕೆ ಬೇಡ. ಅದರೆ ಕಿರಿಮನೆಯ ಕಮನೀಯತೆ ಮಾತ್ರ ಇರಲೇ ಬೇಕು. ಅದರಲ್ಲಿ ನನಗೊಂದು ಸ್ವತಂತ್ರವಾದ ಕೋಣೆಯು ಅವಶ್ಯ. ಅಭ್ಯಾಸಕ್ಕಾಗಿ ಬೇಕಾದ ಪುಸ್ತಕಗಳು, ಉಳಿದ ಸಲಕರಣೆಗಳು ಅತ್ಯಗತ್ಯ. ಅಲ್ಲಿ ಶಾಂತಿ ಬೇಕು, ಏಕಾಂತವು ಬೇಕು.

ಶೋಕದಿಂದ ತುಂಬಿದ ಅರಮನೆಗಿಂತ ಸುಖದಿಂದ ತುಂಬಿದ ಪರ್ಣಶಾಲೆಯು ಶ್ರೇಷ್ಠವಾದದ್ದಲ್ಲವೇ ? ನನ್ನ ಮನೆಯು ಒಂದು ಗುಡಿಸಲಾದರೂ ಅಡ್ಡಿಯಿಲ್ಲ. ಅಲ್ಲಿಯ ಬಳಗದಲ್ಲಿ ಪರಸ್ಪರ ಪ್ರೀತಿ–ಸೌಹಾರ್ದಗಳಿಂದ ಜನಿಸಿದ ಆನಂದವು ಸದೈವ ನೆಲಸಿರಬೇಕು. ನೋಡಿದಲ್ಲೆಲ್ಲ ಸ್ಮಿತಯುತ ಮೊಗಗಳು, ಕೇಳಿದಲ್ಲೆಲ್ಲ ನಲಿವಿನ ನುಡಿಗಳು, ನಮ್ಮ ಅನುಭವಕ್ಕೆ ಬರಬೇಕು. ಇಂತಹದೇ ಮನೆಯು—ಉಳಿದುದು ಸುಖದ ಕೊನೆಯು.

**ಉಪಸಂಹಾರ :**—ಇಂಥ ಆದರ್ಶ ಮನೆಗಳಿಂದ ಸಮಾಜದಲ್ಲಿಯೂ ಶಾಂತಿಯು ಚಿಮ್ಮುವುದು. ನಾಡು ಸುಖದ ನೆಲೆವೀಡಾಗುವುದು. ಆದುದರಿಂದ ಪ್ರತಿಯೊಬ್ಬನು ಇಂಥ ಮನೆಯೊಂದನ್ನು ಕಟ್ಟಿಸಲು ಹೆಣಗಬೇಕಲ್ಲವೆ ?

—ಚಿಚ್ಚಕೋರ.

## ೫. ನನ್ನ ಶಾಲೆ.

ಶಾಲೆಯು–ವಿದ್ಯಾಮಂದಿರವು ; ಸರಸ್ವತಿಯ ಸದನವು. ಆಂಗ್ಲಯುವಕರಿಗೆ ಅದು ಜ್ಞಾನಸುಧೆಯನ್ನು ನೀಡುವ ತಾಯಿ. ನಮಗೂ ಬುದ್ಧಿಯನ್ನು ನಲ್ಲಿಸಿ, ಶುದ್ಧಿಯನ್ನು ದಯಪಾಲಿಸುವ ತಾಯಿಯಲ್ಲವೇ ಅವಳು ? ಆದರೆ ಅದೆಷ್ಟು ಮಕ್ಕಳಿಗೆ ಅವಳ ಬಗ್ಗೆ ಆದರ–ಅಭಿಮಾನವಿರುತ್ತದೆ !

ನನ್ನ ಶಾಲೆಯು ಪಟ್ಟಣದ ಪಡುವಣ ಮೂಲೆಯಲ್ಲಿದೆ. ಸುತ್ತಲೂ ವಿಶಾಲವಾದ ಬೈಲು. ಅದರ ಹತ್ತಿರ ರಮಣೀಯವಾದ ತೋಟಪಟ್ಟಿಗಳು. ಇಂಥ ನಿರ್ಮಲವಾದ ಪ್ರಶಾಂತತೆಯಲ್ಲಿ ಅದು ಗಂಭೀರವಾಗಿ ನೆಲಸಿರುವುದು. ಕಟ್ಟಡದ ಆಕೃತಿಯು ಆಂಗ್ಲ E ಅಕ್ಷರವನ್ನು ಹೋಲುವುದು. ಎರಡು ಬದಿಗಳಿಗೆ ಎರಡು ಕಿರುಮನೆಗಳ ಸಾಲುಗಳು. ನಡುವೆ ಎರಡಂತಸ್ತಿನ ಒಂದು ವಿಶಾಲವಾದ ಹಾಲು ; ಅದರ ಎಡಬಲದ ಪಕ್ಕಗಳಲ್ಲಿ ಎರಡು ದೊಡ್ಡ ಕೋಣೆಗಳು; ಹಾಲಿನೆದುರು ಎರಡು ಎತ್ತರವಾದ ಷಟ್ಕೋನಾಕೃತಿಯ ಬುರುಜುಗಳು ; ಇವೆಲ್ಲವೂ ಕಟ್ಟಡಕ್ಕೆ ಭವ್ಯತೆಯನ್ನೂ ನವ್ಯತೆಯನ್ನೂ ನೀಡಿವೆ.

ನನ್ನ ಶಾಲೆಯಲ್ಲಿ ಹನ್ನೊಂದು ಜನ ಶಿಕ್ಷಕರು. ಮಕ್ಕಳ ಕಲ್ಯಾಣಕ್ಕಾಗಿ ಕಳಕಳಿ ಬಹಳ. ಎಲ್ಲರೂ ತಮ್ಮ ತಮ್ಮ ರೀತಿಯಿಂದ ತಮ್ಮ ಕರ್ತವ್ಯವನ್ನು ಕೊನೆಗಾಣಿಸುತ್ತಿರುವರು.

ವಿದ್ಯಾರ್ಥಿಗಳಲ್ಲಿ ಹುರುಪು ಕಡಿಮೆ. ಪಾಶ್ಚಾತ್ಯ ಪದ್ಧತಿಯ ಹುಚ್ಚು ಪ್ರೀತಿಯು ಇದೇ ತಲೆಯೆತ್ತಲಿದೆ. ಅಂಧಾನುಕರಣವೂ ಮಂದಾನುಕರಣವೂ ಬೆಳೆಯುತ್ತಲಿದೆ. ಜೀವನದ ಗಾಂಭೀರ್ಯದ ತಿಳುವಳಿಕೆ ಎಲ್ಲೆಡೆಯಂತೆ ಇಲ್ಲಿಯೂ ಕಂಡುಬರುವುದಿಲ್ಲ. ವಿದ್ಯಾರ್ಥಿನಿಯರು ತೀರ ವಿರಲ. ಆದರೂ ಸಹಶಿಕ್ಷಣದ ದುಷ್ಪರಿಣಾಮವು ಹೊಳೆಯದೆ ಇಲ್ಲ.

ಮಕ್ಕಳ ಆಟ-ನೋಟಗಳ ಕಡೆಗೆ ಸಾಕಷ್ಟು ಗಮನ ಕೊಡಲಾಗಿಲ್ಲ. ವ್ಯಾಯಾಮಶಾಲೆಯಿಲ್ಲ. ಇದ್ದು ಬಿದ್ದು ಆಗಾಗ ಎದ್ದು ನಿಲ್ಲುವುದು ಕ್ರಿಕೆಟ ಒಂದು. ದೇಶೀಯ ಆಟಗಳಿಗೆ ಪ್ರೋತ್ಸಾಹ ಸಾಕಷ್ಟಿಲ್ಲ. ಆದುದರಿಂದ ವಿದ್ಯಾರ್ಥಿಗಳ ದೇಹದಾರ್ಢ್ಯವು ಸರಿಯಾಗಿಲ್ಲ.

ಅದೇಕೋ ಇಂದಿನ ಬಾಲಕರಲ್ಲಿ ಶಾಲೆ-ಮಾತೆಯ ಬಗ್ಗೆ ಪ್ರೀತಿಯಿಲ್ಲ. ಅಧ್ಯಾಪಕರ ಬಗ್ಗೆ ಆದರವಿಲ್ಲ; ಅದುಂಟಾಗುವವರೆಗೆ ಶಾಲೆಗಳಿಂದ ರಾಷ್ಟ್ರನಿರ್ಮಿತಿಯ ಮಹಾಕಾರ್ಯವು ಅಸಾಧ್ಯ.

—ಮನೋಹರ.

## ೬. ನನ್ನ ಹಡಗ.

**೧. ಉಪಕ್ರಮ :**—ನಾನು ಏರಿದ ಹಡಗದ ಹೆಸರು ‘ಸ್ಟ್ರೇಥಾರ್ಡ’. ಅದು ‘ಪಿ. ಅಂಡ್ ಓ.’ ಕಂಪನಿಯದು. ತೀರ ಹೊಸದಾಗಿ ಕಟ್ಟಿದ ಹಡಗವದು. ನೋಡಿದರೆ ಹೆದರಿಕೆ ಬರುವ ಹಾಗಿದೆ.

**೨. ವಿಸ್ತಾರ :**—ಇದು ಅತಿ ವಿಶಾಲವಾದದ್ದು. ‘ಎಂಟು ಸಲ ಇದನ್ನು ಸುತ್ತಿದರೆ ಒಂದು ಮೈಲಾಗುತ್ತದೆ’ ಯಂತೆ. ಒಂದು ಫರ್ಲಾಂಗು ಇದರ ಸುತ್ತು ಉದ್ದಳತೆಯಾಯ್ತು. ನೀರಲ್ಲಿ ಮುಳುಗಿದ ಭಾಗವನ್ನು ಬಿಟ್ಟು ಇದಕ್ಕೆ ಎಂಟು ಅಂತಸ್ತುಗಳಿವೆ. ಈ ವಿಚಿತ್ರ ಪ್ರಾಣಿಯ ವರ್ಣನೆಯನ್ನು ಕ್ರಮಾನುಸಾರವಾಗಿ ಮಾಡುವದು ಒಳಿತು.

**೩. ಕೆಳಭಾಗ :**—ಎಲ್ಲಕ್ಕೂ ಕೆಳಗೆ ಒಂದು ಫರ್ಲಾಂಗ ಉದ್ದವಾದ ನೀರಿನ ಟಾಕಿಯಿದೆ. ಹಡಗದ ಮೇಲೆಲ್ಲ ಕುಡಿಯುವ ನೀರನ್ನು ಇಲ್ಲಿಂದ ಪೂರೈಸುತ್ತಾರೆ. ಇಲ್ಲಿಂದ ನೂರಾರು ಕಡೆಗೆ ನಳಗಳು ಹೋಗಿವೆ. ಈ

ಟಾಕಿಯ ಮೇಲೆ ಹಡಗದ ಯಂತ್ರಶಾಲೆಯಿದೆ. ಹಡಗವು ಮುನ್ನಡೆದಾಗ ಅದರ ಕೆಲವೊಂದು ಭಾಗವು ನೀರಿನಲ್ಲಿ ಮುಳುಗಿರುವದಷ್ಟೆ? ಮುಳುಗಿದ ಭಾಗದಲ್ಲಿ ಯಂತ್ರಶಾಲೆಯು ನಿಂತಿದೆ. ಇದನ್ನು ಹಡಗದಲ್ಲಿಯ ನರಕ ಇಲ್ಲವೆ ಯಮಲೋಕವೆಂದು ಕರೆಯಬಹುದು. ದೊಡ್ಡ ಕೊಳವಿಯಲ್ಲಿ ಹವೆಯನ್ನು ಹೀರಿ ಇಲ್ಲಿ ದೂಡುತ್ತಾರೆ. ಈ ಹವೆಯಲ್ಲಿಯೇ ಅಲ್ಲಿ ದುಡಿಯುವವರು ಉಸಿರಾಡಿಸಬೇಕು.

೪. **ಮೊದಲಿನ ಎರಡು ಅಂತಸ್ತುಗಳು** :—ಈ ಯಂತ್ರಶಾಲೆಯ ತಲೆಯ ಮೇಲೆಲ್ಲ ‘ಟೂರಿಸ್ಟ್’ ಕ್ಲಾಸಿನ ‘ಎಚ್’ ಮಹಡಿಯಿದೆ. ಇದರ ತುಂಬ ಜನವಿರಲಿಕ್ಕೆ ‘ಕೆಬಿನ’ ಇಲ್ಲವೆ ಕೋಣೆಗಳುಂಟು. ಒಂದು ಕೋಣೆಯಲ್ಲಿ ಒಬ್ಬರು—ಇಬ್ಬರು—ಮೂವರು—ನಾಲ್ವರಿಗಾಗಿ ವ್ಯವಸ್ಥೆಯಿದೆ. ಅಲ್ಲಲ್ಲಿ ಸ್ನಾನಗೃಹಗಳನ್ನೂ ಶೌಚಕೂಪಗಳನ್ನೂ ಕಟ್ಟಿದ್ದಾರೆ. ಮುಂಜಾನೆಯೆದ್ದು ನೋಡಬೇಕು. ಅರ್ಧಮರ್ಧ ಕಫನಿಗಳನ್ನು (Gown) ಹಾಕಿಕೊಂಡು ಆಂಗ್ಲ ಸ್ತ್ರೀಯರು ಸಹಜವಾಗಿ ಇಲ್ಲಿ ತಿರುಗಾಡುತ್ತಾರೆ. ಇಲ್ಲವೆ ಈಸುವ ವೇಷದಲ್ಲಿ (ತೀರ ನಗ್ನಾವಸ್ಥೆ) ಗೋಪಿಯರಂತೆ ಜಲಕ್ರೀಡೆ ಮಾಡುತ್ತಾರೆ. ಗಂಡಸರಿಗಾಗಿ ಬೇರೆ ಸ್ನಾನಗೃಹಗಳವೆ. ಅಲ್ಲಿ ಅವರು ಬತ್ತಲೆ ಕುಣಿಯುತ್ತಾರೆ. ಬಂದು ಹೋದವರೆದುರಿಗೆ ಸಂಕೋಚವೇ ಇಲ್ಲ. ‘ಎಚ್’ ಮಹಡಿಯ ಮೇಲೆ ‘ಜಿ’ ಮಹಡಿಯಿದೆ. ಇಲ್ಲಿ ಸಹ ಮೇಲೆ ಹೇಳಿದಂತೆ ವ್ಯವಸ್ಥೆಯಿದೆ.

೫. **ಮೂರನೆಯ ಅಂತಸ್ತು** :—‘ಜಿ’ ಮಹಡಿಯ ತಲೆಯ ಮೇಲೆ ‘ಎಫ್’ ಮಹಡಿಯುಂಟು. ಇಲ್ಲಿ ಅಡಿಗೆಯ ಮನೆಯಿದೆ. ‘ಇಲೆಕ್ಟ್ರಿಕ್’ ಒಲೆಗಳ ಅಸಾಧ್ಯವಾದ ಸೆಕೆಯಲ್ಲಿ ಹಗಲೂ ರಾತ್ರಿ ಅಡಿಗೆಯವರು ಕೆಲಸ ಮಾಡುತ್ತಾರೆ. ಅವರ ಸ್ಥಿತಿಯು ದೇವರಿಗೇ ಗೊತ್ತು. ಒಬ್ಬನು ಬಟಾಟೆ ಹೆಚ್ಚುವನು; ಇನ್ನೊಬ್ಬನು ಮಾಂಸವನ್ನು ಕೊಚ್ಚುವನು. ೨–೩ ಸಾವಿರ ಜನರಿಗೆ ತಿಂಗಳಾನುಗಟ್ಟಲೆ ಬೇಕಾಗುವ ಶಾಕಾಹಾರ—ಮಾಂಸಾಹಾರವನ್ನೂ, ಹಣ್ಣುಹಂಪಲುಗಳನ್ನೂ ಹಡಗದ ಮೇಲೆ ಕಾಯ್ದಿಡುತ್ತಾರೆ. ನೂರಾರು ಮಂದಿ ಒಂದೇ ವೇಳೆ ಊಟಕ್ಕೆ ಕೂಡಲು ಒಂದು ದೊಡ್ಡ ಭೋಜನ ಗೃಹವಿದೆ, ಅಡಿಗೆಮನೆಯ ಮುಂದೆ. ಊಟವು ನಡೆದಾಗ ಒಂದೇ ಒಂದು ಸಪ್ಪಳ—ಚಾಕು, ‘ಫೋರ್ಕ’ ನದು.

ಇನ್ನೊಂದೆಡೆಯಲ್ಲಿ ಒಂದು 'ಹೇರ್ ಕಟಿಂಗ್ ಸಲೂನ್', ಒಂದು ಸಾಮಾನ್ಯ ಅಂಗಡಿ, ಓದಲಿಕ್ಕೆ ಲೈಬ್ರರಿಯೊಂದು, ಜಡ್ಡಾದವರಿಗೆ ವಿಶ್ರಾಂತಿ ಗೃಹ, ಹುಡುಗರಿಗೊಂದು ಆಟದ ಮನೆ, ಇಷ್ಟೆಲ್ಲ ಇವೆ. (ಈ ಲೈಬ್ರರಿಯ ಕೆಳಗೆ – 'ಜಿ' ಮಹಡಿಯ ಮೇಲೆ – 'ಕುಡಿ' ಯುವ ದಿವಾಣಖಾನೆಯಿದೆ.)

೬. **ಮೇಲಿನ ಅಂತಸ್ತುಗಳು :—** 'ಎಫ್' ಮಹಡಿಯ ಮೇಲೆ 'ಇ' ಮಹಡಿಯಿದೆ. ಇಲ್ಲಿ ಅಂಚೇ ಮನೆ, ಇನ್ನೊಂದು 'ಕುಡಿ' ಯುವ ದಿವಾಣಖಾನೆ, ಅನೇಕ ಆಟಗಳನ್ನಾಡುವ ಜಾಗ, ಇವೆಲ್ಲ ಕಂಡುಬರುವವು. 'ಇ' ಮೇಲೆ 'ಡಿ' ಮಹಡಿ. ಇಲ್ಲಿ ಒಂದು ಕೃತ್ರಿಮ ಬಾವಿಯನ್ನು ಮಾಡಿದ್ದಾರೆ, ಈಸಲೆಂದು. ಅಲ್ಲದೆ 'ಡಿ' ಹಾಗೂ 'ಸಿ' ಮಹಡಿಗಳ ಮೇಲೆ ಮೊದಲನೆಯ ತರಗತಿಯ ಪ್ರಯಾಣಿಕರ ಕೋಣೆ, ದಿವಾಣಖಾನೆ ಮುಂತಾದವುಗಳಿವೆ. 'ಬಿ' ಮಹಡಿಯ ಮೇಲೆ ಅವರಿಗೆಂದು ಆಡಲು ಜಾಗವಿದೆ. 'ಎ' ಮಹಡಿಯ ಮೇಲೆ ಕಪ್ತಾನನ ಆಫೀಸು, ಅವನ ಹಾಗೂ ಉಳಿದ ಕೆಲಸಗಾರರ ಮನೆಗಳಿವೆ.

೭. **ಉಪಸಂಹಾರ :—** ಹೀಗಿದೆ ನೀರಿನ ಮೇಲೆ ತೇಲುವ ಈ ಪಟ್ಟಣದ ಸ್ವರೂಪ!

—ವಿನಾಯಕ.

## ೭. ಲಂಡನ್ ಪಟ್ಟಣವು.

೧. **ಉಪಕ್ರಮ :—** ಲಂಡನ್ ಪಟ್ಟಣವೆಂದರೆ ಅದೊಂದು ಸ್ವತಂತ್ರ ಜಗತ್ತು. ಇಷ್ಟು ವಿಸ್ತಾರವಿದೆ–ವಿವಿಧತೆಯಿದೆ–ವೈಭವವಿದೆ ಅಲ್ಲಿ.

೨. **ವಾಹನಗಳು :—** ಇಲ್ಲಿಯ ರಸ್ತೆಗಳಲ್ಲಿ ವ್ಯಾಪಾರವು ತುಂಬ. ಟ್ರಾಂ ಬಸ್ಸುಗಳಿಗೆ ಸಕಾಲಕ್ಕೆ ಹೋಗುವದಾಗುವದಿಲ್ಲ; ಬಹಳ ಹೊತ್ತು ನಡುನಡುವೆ ನಿಲ್ಲಬೇಕಾಗುತ್ತದೆ. ಇದನ್ನು ತಪ್ಪಿಸುವದಕ್ಕಾಗಿ ಭೂಗರ್ಭದಲ್ಲಿ ಗಾಡಿಯನ್ನು ಒಯ್ದಿದ್ದಾರೆ. ಹಳಿ, ಇಲೆಕ್ಟ್ರಿಕ್ ಗಾಡಿ, ನಿಲ್ಮನೆ ಎಲ್ಲ ಒಳಗೆ. ಒಮ್ಮೊಮ್ಮೆ ನೆಲದ ಕೆಳಗೆ ಐವತ್ತು ಫೂಟು ಹೋಗಿರುತ್ತೇವೆ. ಜೋರಾಗಿ ಗಾಳಿ ಬೀಸುವಷ್ಟು ಹವೆಯಾಡುವಂತೆ ಇಲ್ಲಿ ವ್ಯವಸ್ಥೆಯನ್ನು ಮಾಡಿದ್ದಾರೆ. ನಿಮಿಷಕ್ಕೊಂದರಂತೆ ಕತ್ತಲು ಗವಿಯೊಳಗಿಂದ ಹಾಯ್ದು ಗಾಡಿಗಳು ಧಡಧಡ ಹೋಗುತ್ತಿರುತ್ತವೆ. ವಿಚಿತ್ರ ಸೃಷ್ಟಿ! ಇಷ್ಟು ಕೆಳಗೆ ಹಗಲೆಲ್ಲ ಹತ್ತಿ ಇಳಿಯುವುದು ಹೇಗೆ? ಅದಕ್ಕಾಗಿ 'ಎಸ್ಕಿಲೇಟರ್ಸ' ಎಂಬ

ಮೆಟ್ಟಿಲುಗಳನ್ನು ಮಾಡಿದ್ದಾರೆ. ಇವು ಒಂದೇ ಸಮನೇ ತಿರುಗುತ್ತಿರುತ್ತವೆ. ಒಂದು ಮೆಟ್ಟಲಿನ ಮೇಲೆ ಹೋಗಿ ನಿಂತರೆ ತೀರಿತು. ಅನಾಯಾಸವಾಗಿ ಮೇಲೆ ಇಲ್ಲವೆ ಕೆಳಗೆ ಒಯ್ದು ಇಡುತ್ತವೆ.

೩. **ಪೇಟೆ**:—ಪೇಟೆಯಲ್ಲಿ ತಿರುಗಾಡಿದೆ. 'ವೂಲ್ವರ್ಥ' ಎಂಬ ಸ್ಟೇಶನರಿ ಅಂಗಡಿಯು ನೋಡುವಂತಹದಿದೆ. ಎಲ್ಲ ತರದ ಸಾಮಾನುಗಳನ್ನು ಇಲ್ಲಿ ಒಂದು ಪೇನಿಯಿಂದ ಆರು ಪೇನಿಯವರೆಗೆ ಮಾರುತ್ತಾರೆ. ಈ ಅಂಗಡಿಯ ವಿವಿಧ ವಿಭಾಗಗಳನ್ನು ನಿರ್ಮಿಸಿದ ಬುದ್ಧಿಯ ಚಮತ್ಕಾರವು ನೋಡತಕ್ಕಂತಹದು. ಪ್ರಾಚೀನ ಮಹಾಕಾವ್ಯದಂತೆ ಇದೊಂದು ಮಹಾಕೋಶವಾಗಿದೆ. ಬೂಟು—ಕಾಲಚೀಲ—ಚಣ್ಣ—ಯುದ್ಧದ ಸಾಮಗ್ರಿ ಎಲ್ಲವೂ ಇಲ್ಲಿ ದೊರೆಯುತ್ತಿವೆ.

ಇಲ್ಲಿ ಗಂಡಿಗಿಂತ ಹೆಣ್ಣು ಹೆಚ್ಚಿಗಿದ್ದಂತೆ ಕಾಣುತ್ತದೆ. ಎಲ್ಲ ಅಂಗಡಿಗಳಲ್ಲಿ ಸಾಮಾನ್ಯವಾಗಿ ಸ್ತ್ರೀಯರೇ ಕೆಲಸ ಮಾಡುತ್ತಾರೆ.

೪. **ಇಂಡಿಯಾ ಆಫೀಸು**:— ಇಲ್ಲಿಯ ಇಂಡಿಯಾ ಆಫೀಸು ನೋಡುವ ಹಾಗಿದೆ; ವಾಚನಾಲಯದಲ್ಲಿ ಅನೇಕ ಪುಸ್ತಕಗಳಿವೆ; ಕರ್ನಾಟಕದ ವಿಷಯವಾಗಿ ಇಲ್ಲಿ ಎಷ್ಟೋ ಹೊಸ ಮಾತುಗಳು ಗೊತ್ತಾಗಬಹುದೆಂದು ಕಾಣುತ್ತದೆ. ಇಲ್ಲಿಯ ವಸ್ತುಸಂಗ್ರಹಾಲಯದಲ್ಲಿ ಹಿಂದುಸ್ಥಾನದ ಲಲಿತಕಲೆಯ ಹಾಗು ಇನ್ನುಳಿದ ಮಾರ್ಗಗಳ ಮಾದರಿಗಳು ನೋಡಲು ದೊರೆಯುವವು. ಎಲ್ಲ ಮುಖ್ಯ ಇಂಗ್ಲೀಷ ವರ್ತಮಾನಪತ್ರಗಳೂ ಬರುತ್ತವೆ.

ಈ ಕಚೇರಿಯಿದ್ದ 'ಚೆರಿಂಗ್ ಕ್ರಾಸ್' ಎಂಬ ಓಣಿಯಲ್ಲಿ ಆಂಗ್ಲರ ಸಾಮ್ರಾಜ್ಯ—ವೈಭವವು ಕಂಡುಬರುವದು. ಇಂಡಿಯಾ ಆಫೀಸಿನ ಹತ್ತಿರ ಆಫ್ರಿಕನ್ ಕಚೇರಿ. ಇನ್ನೊಂದು ವಸಾಹತಿನ ಕಚೇರಿ—ನೂರೆಂಟು ಬ್ಯಾಂಕುಗಳು—ಪಿ. ಎಂಡ್ ಒ. ಮುಂತಾದ ದೊಡ್ಡ ಕಂಪನಿಗಳ ಕಚೇರಿಗಳು, ಎಲ್ಲವೂ ದಂಗುಬಡಿಸುವಂತೆ ನೆರೆದಿವೆ! ಒಂದೊಂದು ದೇಶದ ಮೇಲಿನ ಪ್ರಭುತ್ವವು ಒಂದೊಂದು ಕಚೇರಿಯಿಂದ ನಡೆಯುತ್ತಿದೆ! ಈ ದೊಡ್ಡ ಬೀದಿಯು ಸಾಮ್ರಾಜ್ಯದ ಬೀದಿ.

೫. **ಕೂಟಗಳು**:—ನಗರದ ಪ್ರತಿಯೊಂದು ಕೂಟಕ್ಕೆ ಒಂದು ಹೆಸರೇನಾದರೂ ಇದ್ದೇ ಇರುತ್ತದೆ. ಟ್ರಾಫಲ್ಗಾರ ಸ್ಕ್ವೇರ ಎಂಬಲ್ಲಿ ನೆಲ್ಸನ್ನನ

ಮೂರ್ತಿಯಿದೆ. ಈ ಶಿಲಾಮೂರ್ತಿಯ ಕೆಳಬದಿಗೆ ಅವನ ಜೀವನದಲ್ಲಿಯ ಮಹತ್ವದ ಸನ್ನಿವೇಶಗಳನ್ನು ಕಲ್ಲಿನಲ್ಲಿ ಅರಳಿಸಿದ್ದಾರೆ. ಇಲ್ಲಿಂದ ಸ್ವಲ್ಪ ದೂರಕ್ಕೆ ವೆಲಿಂಗ್ಟನ್ನನ ಶಿಲಾಪ್ರತಿಮೆ. ಬೀದಿ ಬೀದಿಗೆ, ಮೂಲೆ ಮೂಲೆಗೆ ಇತಿಹಾಸ ಪ್ರಸಿದ್ಧ ಪುರುಷರು—ತಮ್ಮ ದೇಶಕ್ಕಾಗಿ ಜೀವವನ್ನು ಲೆಕ್ಕಿಸದೆ ದುಡಿದವರು ನಿಂತು ಕೈಯೆತ್ತಿ ಹೇಳುವಂತೆ ತೋರುತ್ತದೆ, "ನಿಮ್ಮ ದೇಶದ ಗೌರವವನ್ನು ಕಾಯಿರಿ! ಇದು ದೊಡ್ಡದಾದ ರಾಷ್ಟ್ರ" ಎಂದು. ಹೆಜ್ಜೆ ಹೆಜ್ಜೆಗೆ ಇತಿಹಾಸದ ಅಡಿಗಲ್ಲುಗಳು ದೊರೆಯುತ್ತವೆ.

೬. **ಬೀದಿಗಳು**:—ಬೀದಿಯಲ್ಲಿ ಲಕ್ಷಾನುಲಕ್ಷ ಜನರು ತಿರುಗಾಡುತ್ತಾರೆ. ಅವಸರದಿಂದ ಓಡುತ್ತಾರೆ. Time, Time, Time is money (ಹೊತ್ತು, ಹೊತ್ತು, ಹೊತ್ತೇ ವಿತ್ತ) ಇದು ಅಕ್ಷರಶಃ ವಿಲಾಯತಿಯಲ್ಲಿ ನಿಜವಿದೆ.

—ವಿನಾಯಕ.

## ೮. ಕೈಲಾಸಂ

ಕನ್ನಡ ನಾಡಿನಲ್ಲಿ ಕೈಲಾಸಂರು ತೀರ ಅಪೂರ್ವ ವ್ಯಕ್ತಿಗಳು. ಅವರನ್ನು ಇನ್ನೊಬ್ಬರಿಗೆ ಹೋಲಿಸುವ ಹಾಗಿಲ್ಲ. ಅವರ ವಯಸ್ಸು ನಾಲ್ವತ್ತಕ್ಕೆ ಮೀರಿತು. ಆದರೂ ಇಡೀ ದಿವಸ ಚೇಷ್ಟೆ ಮಾಡುತ್ತ ಮಕ್ಕಳಂತೆ ಸಮಯವನ್ನು ಕಳೆಯುತ್ತಾರೆ. ಅವರ ಬುದ್ಧಿ ಬೇಕಾದಂತೆ ಕಿರಿದೂ, ಹಿರಿದೂ ಆಗಬಲ್ಲದು. ಮಕ್ಕಳ ಜತೆಯಲ್ಲಿ ಆಡುವಾಗ ತಾನು ದೊಡ್ಡವನೆಂಬ ತಿಳಿವೇ ಅವರಿಗಿರುವುದಿಲ್ಲ. ದೊಡ್ಡವರೊಡನೆ ವ್ಯವಹರಿಸುವಾಗ ಪಂಡಿತರನ್ನು ಬೆರಗು ಮಾಡುವ ಪಾಂಡಿತ್ಯವನ್ನು ತೋರಿಸುತ್ತಾರೆ.

ಅವರು ತುಂಬಾ ಹಾಸ್ಯಪ್ರಿಯರು. ಅವರ ಮಾತನ್ನು ಕೇಳುತ್ತ ಕುಳಿತರೆ, ನಕ್ಕು ನಕ್ಕು, ನಮ್ಮ ನೆರೆತ ಕೂದಲು ಕರಿದಾಗುವುದು. "ಸೊಳ್ಳೆ ಪರದೆಯನ್ನು ಹೇಗೆ ಮಾಡುತ್ತಾರೆ?" ಎಂದು ಒಬ್ಬ ಹುಡುಗನು ಕೇಳಿದನಂತೆ. ಆಗ ಇನ್ನೊಂದು ಮಗುವು "ಚಿಕ್ಕಪುಟ್ಟ ತಂತುಗಳನ್ನು ಸಪುರದ ದಾರದಿಂದ ಕಟ್ಟಿಹಾಕಿದರೆ ಸೊಳ್ಳೆಪರದೆಯಾಗುತ್ತದೆ" ಎಂದಿತಂತೆ. ಈ ರೀತಿಯ ಹಾಸ್ಯವನ್ನು ಹಳ್ಳದಂತೆ ಹರಿಯಿಸಿಬಿಡುತ್ತಾರೆ.

ಕೈಲಾಸಮ್‌ರು ನಾಟಕಕಾರರು; ಕನ್ನಡದಲ್ಲಿ ನಾಟಕಕ್ಕೆ ಹೊಸ ಜೀವವನ್ನು ಕೊಟ್ಟವರು. ಹಳೇ ಪದ್ಧತಿಯ ಲಂಕಾದಹನದಂಥ ನಾಟಕ

ಗಳನ್ನು ಬಿಟ್ಟು 'ಹೋಂ ರೂಲ್', 'ಫ್ರೋಲಿ ಕಿಟ್ಟಿ' ಯಂತಹ ಹೊಸ ನಾಟಕಗಳಿಗೆ ಅವರು ಹಾದಿ ಹಾಕಿಕೊಟ್ಟರು. ಕನ್ನಡದಂತೆ ಇಂಗ್ಲೀಷಿನಲ್ಲೂ ನಾಟಕವನ್ನು ಬರೆದಿದ್ದಾರೆ. ಸುಸ್ಮೃತಿ ಕುಳಿತಲ್ಲಿಂದಲೇ ಸರಸರನೆ ತಮ್ಮ ನಾಟಕವನ್ನು ಇಡಿ ಇಡಿ ಹೇಳುವ ಸ್ಮರಣಶಕ್ತಿ ಅವರಿಗಿದೆ. ನಾಟಕದ ಅಭಿನಯಕ್ಕೆ ನಿಂತರೂ ಹಾಗೇನೇ. ಅದು ನಗುವ ನಾಟಕವೇ ಇರಲಿ, ಅಳುವ ನಾಟಕವೇ ಇರಲಿ—ಕೈಲಾಸಮ್‌ರು ಪಾತ್ರವನ್ನು ವಹಿಸಿದರೆ ಸತ್ತ ನಾಟಕವು ಬದುಕೀತು!

ಬುಲ್ ಬುಲ್ ತರಂಗ, ಇಲ್ಲವೆ ದಿಲ್ರುಬಾ ಬಾರಿಸಲು ಹಿಡಿದರೆಂದರೆ ಅದರಲ್ಲೂ ಅವರ ಕೈ ಹಿಂದಿಲ್ಲ. ಆದರೆ ಅವರ ಮನಸ್ಸಿನ ಆಳ ಇತರರಿಗೆ ಸಿಗುವುದು ಕಷ್ಟ. ಅವರು ಸ್ವೇಚ್ಛಾಪ್ರಿಯರು. ಅವರ ಮನಸ್ಸು ಯಾವ ಗಳಿಗೆಯಲ್ಲಿ ಹೇಗೆ ಕುಣಿಯುತ್ತದೆ ಎಂದು ತಿಳಿಯುವುದು ಅವರ ಹತ್ತಿರದ ಗೆಳೆಯರಿಗೂ ಬಲು ಕಷ್ಟದ ಕೆಲಸ. ಕೈಲಾಸಮ್‌ರೆಂದರೆ ಕಲಾವಿದರು.

—ಕಾರಂತ.

## ೯. ಶ್ರೀನಿವಾಸರು.

ಶ್ರೀನಿವಾಸ ಎಂಬುವರು ಮೈಸೂರಿನ ಪ್ರಸಿದ್ಧರಾದ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರೆಂಬುವರು. ತುಂಬಾ ಓದಿ ತಿಳಿದುಕೊಂಡವರವರು. ಸಾಧಾರಣ ಐವತ್ತು ವಯಸ್ಸು ಆಗಿರಬಹುದು. ತೆಳ್ಳಗಿನ ಬೆಳ್ಳಗಿನ ಶರೀರ. ನಗುಮುಖ. ಅವರ ಬರಹಗಳು ಕನ್ನಡ ನಾಡಿನ ಎಲ್ಲರಿಗೂ ಪರಿಚಿತವಾಗಿವೆ. ಅವರಂತೆ ಕನ್ನಡದಲ್ಲಿ ಸಣ್ಣ ಕಥೆಗಳನ್ನು ಬರೆಯುವುದರಲ್ಲಿ ಹೆಸರಾದವರು ಕಡಿಮೆ. "ಸಣ್ಣ ಕತೆಗಳ ಶ್ರೀನಿವಾಸ" ಎಂದು ಅವರಿಗೆ ಹೆಸರೇ ಬಿದ್ದಿದೆ. ಶ್ರೀನಿವಾಸರ ಕತೆಯೆಂದರೆ ಈಗ ಓದಿ, ಮತ್ತೆ ಮರೆಯುವ ಕತೆಗಳಲ್ಲ. ಅವನ್ನು ಓದಿದರೆ ಮರವೆಯಾಗುವುದೆಂಬುದೇ ಇಲ್ಲ. ಆ ಕತೆಗಳನ್ನು ಓದಿದರೆ ಶ್ರೀನಿವಾಸರು ಸಂಸಾರದಲ್ಲಿ ಎಷ್ಟೋ ಆಳಕ್ಕೆ ಇಳಿದು, ಜನರ ಬಡತನ, ದೊಡ್ಡಸ್ತಿಕೆ, ಸುಖದುಃಖಗಳನ್ನು ಕಂಡಿದ್ದಾರೆ ಎಂಬುದರ ಅನುಭವವಾಗುವದು. ಅಷ್ಟೆ ಅಲ್ಲ; ಅವರು ಕನ್ನಡ ಬರೆಯುವ ರೀತಿಗೆ ಒಂದು ಸ್ವತಂತ್ರವಾದ ಚೆಲುವಿದೆ. ಮಾತುಗಳು ಬೆಣ್ಣೆಯ ಮೇಲೆ ಎಳೆಯುವ ರೇಶ್ಮೆಯ ದಾರದಂತೆ ನಯವಾಗಿ ಅಚ್ಚುಕಟ್ಟಾಗಿ ಹರಿಯುತ್ತವೆ. ಅಷ್ಟೇ ಅಲ್ಲ; ಅವರ

'ವಿಮರ್ಶೆ' ಗಳನ್ನು ಓದಿದರೆ, ಅವರ ಪರಿಚಯು, ತಿಳಿವುಗಳ ಪರಿಚಯವನ್ನು ಗಳಿಸಲು ಅನುಕೂಲವಾಗುವದು.

—ಕಾರಂತ.

## ೧೦. ಸರ್ವಜ್ಞನು.

ಜಗತ್ತಿನಲ್ಲಿಯ ಸತ್ಪುರುಷರೆಲ್ಲರೂ ಒಂದು ಬಗೆಯ ಕ್ರಾಂತಿಪುರುಷರೇ! ತಮ್ಮ ಮನಸ್ಸನ್ನು ಹಾಳು ಮಾಡಿ ಅದರಲ್ಲವರು ಆನಂದದ ಅಲರುಗಳನ್ನು ನೆಟ್ಟುವರು. ನಿರಂತರವಾಗಿ ಕಂಪನ್ನು ಬೀರುವ ಆ ಬಾಡದ ಹೂಗಳ ಪರಿಮಲವು ಅನ್ಯರ ಮನಸ್ಸಿನಲ್ಲಿಯೂ ಅದೇ ಮಾದರಿಯ ವಿಪ್ಲವವನ್ನೆಬ್ಬಿಸಿ ಅವರಿಗೂ ಶಾಶ್ವತವಾದ ಸುಖವನ್ನು ಒದಗಿಸಿ ಕೊಟ್ಟಿರುವುದು. ಈ ದೃಷ್ಟಿಯಿಂದ ಅವರೆಲ್ಲರೂ ಒಂದೇ ಒಳಗದವರು. ಆದರೂ ವ್ಯಕ್ತಿತ್ವವೆಂಬುದು ಅವರನ್ನು ಬಿಟ್ಟಿಲ್ಲ. ಅವರ ಉಪದೇಶದ ಮಾದರಿಯು ಅವರ ವೈಶಿಷ್ಟ್ಯವನ್ನವಲಂಬಿಸಿದೆ. ಹಲವರ ಉಪದೇಶದ ಪದ್ಧತಿಯು ಸೌಮ್ಯಸ್ವರೂಪದ್ದಿದ್ದರೆ, ಹಲವರದು ಜ್ವಾಲಾಮುಖಿಯನ್ನೇ ಯೆ ಹೋಲುತ್ತದೆ.

ನಮ್ಮ **ಸರ್ವಜ್ಞನು** ಎರಡನೆಯ ತರಗತಿಗೆ ಸೇರಿದವನು. ಅವನು ಹುಟ್ಟು ಸ್ವತಂತ್ರನು; ಯಾವ ಬಗೆಯ ಕಟ್ಟಿಗೂ ಒಳಗಾಗದವನು. ಇತಿಹಾಸವು ಅವನ ಕಾರ್ಯದ ವಿಷಯವಾಗಿ ಮೌನವನ್ನು ತಾಳಿದ್ದರೂ, ಅವನ ವೀರ್ಯವತ್ತಾದ ವಚನಗಳು ಅವನ ಕೆಲಸದ ಮಹತ್ವವನ್ನು ಸಾರಿ ಹೇಳುತ್ತಿವೆ.

ಸರ್ವಜ್ಞನು ಪ್ರಕೃತಿ ಮಾತೆಯ ಚೊಚ್ಚಲ ಮಗ. ಆಕೆಯ ಮಡಿಲಲ್ಲಿ ಮನಬಂದಂತೆ ನಲಿದಾಡಿ ಆಕೆಯಿಂದಲೇ ಬುದ್ಧಿಯನ್ನು ಕಲಿತವನು. ನಾಡಿನಲ್ಲೆಲ್ಲ ಅಲೆದಾಡಿ ದೊರಕಿಸಿದ ಅನುಭವಗಳೇ ಆತನ ಜಾಣ್ಮೆಯ ಅಡಿಗಲ್ಲು.

ಯಾವ ಬಗೆಯ ದಾಕ್ಷಿಣ್ಯವನ್ನೂ ಇಡದೆ ಸರ್ವಜ್ಞನು ಕಂಡಂತೆಯೆ ಆಡಿದವನು. ಭೂಮಂಡಲವು ಮುನಿದು ಕೆಂಡದಂತಾದರೂ ಅದರ ಪರಿವೆ ಅವನಿಗಿಲ್ಲ. ಅವನು ಮಾಡಿದಂತೆ ಆಡಿದವನು; ನುಡಿದಂತೆ ನಡೆದವನು. ಖಂಡತುಂಡಾದ ಅವನ ನುಡಿಯು ಸಿಡಿಲಿನಂತೆ ಜನರನ್ನು ಹೊಡೆದು ಅವರಲ್ಲಿ ಅಭೂತಪೂರ್ವವಾದ ಕ್ರಾಂತಿಯನ್ನುಂಟುಮಾಡಿರಲಿಕ್ಕೆ ಸಾಕು: ಸರ್ವಜ್ಞನು ಕನ್ನಡ ನಾಡಿನ ಹಿರಿಗೊಡಲಿ! ಈತನ ಏಟಿನಿಂದ ಮುಳ್ಳು ಮರಗಳೆಷ್ಟೋ ಮಣ್ಣುಪಾಲಾದವು; ಸಮಾಜವು ನಿಷ್ಕಂಟಕವಾಯಿತು.

ಸರ್ವಜ್ಞನು ಸ್ವಾತಂತ್ರ್ಯಪ್ರಿಯನಿದ್ದರೂ ಸ್ವೈರಾಚಾರಿಯಲ್ಲ; ಕ್ರಾಂತಿಕಾರನಿದ್ದರೂ ಶಾಂತಿಯನ್ನು ತೊರೆದವನಲ್ಲ. ಆವನು ಮತಪಂಥಗಳ ಗಲಾಟೆಯಲ್ಲಿ ವಿಶೇಷವಾಗಿ ಸಿಲುಕಿಲ್ಲ. ಜಾತಿಯಿಂದ ವೀರಶೈವನಿದ್ದರೂ ಆವನು ಸರ್ವಸಮ್ಮತವಾದ ಸನಾತನ ತತ್ವಗಳನ್ನೇ ಬೆಚ್ಚಾಗಿ ಹೇಳಿರುವನು.

ಮೇಲಾಗಿ ಸರ್ವಜ್ಞನು ಜನಸಾಮಾನ್ಯರ ಮುಂದಾಳು. ಅವರಿಗಾಗಿ ಅವತರಿಸಿದವನು. ಜನತೆಯನ್ನುದ್ಧರಿಸಲು ಅವನು ತನ್ನ ಕಿರುಗನ್ನಡ ನುಡಿಯನ್ನೂ, ಅನುಭವಜ್ಞಾನವನ್ನೂ, ಧಾರೆಯೆರೆದವನು. ಒಂದೇ ಸ್ಥಲದಲ್ಲಿ ಬಹು ದಿನ ನಿಲ್ಲದೆ, ಅಖಂಡವಾಗಿ ಎಲ್ಲೆಡೆಯಲ್ಲಿ ಸಂಚರಿಸಿ ಮಲಗಿದ ಜನರನ್ನು ಬಡಿದೆಬ್ಬಿಸಿದ ಮಹಾತ್ಮನಿವನು. ಆದ್ದರಿಂದ 'ಜನಯುಗಕ್ಕೆ' ತಕ್ಕವನಾದ ಇವನ ಹುರಿಗೊಳಿಸುವ ಉಪದೇಶದ ಬೆಳಕಿನಲ್ಲಿ ನಮ್ಮ ತರುಣರು, ಮುಂದಿನ ಏಳ್ಗೆಯ ದಾರಿಯನ್ನು ಕಾಣಲೆಂದು ಹಾರೈಕೆ.

—ಚಿಕ್ಕಕೋರ.

## ಅಭ್ಯಾಸ ೧೦.

ಮಾದರಿಯ ರೂಪರೇಷೆಗಳನ್ನು ಉಪಯೋಗಿಸಿ, ನಿಬಂಧಗಳನ್ನು ಬರೆಯಿರಿ.

### ೧. ವಸ್ತುಗಳು.

### ೧. ನನ್ನ ಗಡಿಯಾರ.

೧. **ಉಪಕ್ರಮ:**—ನನ್ನ ಗಡಿಯಾರದ ಹುಚ್ಚು. ೨. **ಪಡೆದ ರೀತಿ:**—ಯಾರಿಂದ? ಎಂದು? ಹೇಗೆ? ೩. **ಸೊಬಗು:**—ಎಂತಹದು? ೪. **ಉಪಯೋಗ:**—ಅಭ್ಯಾಸದಲ್ಲಿ, ಪ್ರವಾಸದಲ್ಲಿ. ೫. **ಉಪಸಂಹಾರ:**—ನನ್ನ ನಡತೆಯನ್ನು ಸರಿಪಡಿಸಿದ ಗೆಳೆಯ.

ಅಂತಹ ಅನ್ಯ ವಿಷಯಗಳು:—

(ಅ) ನನ್ನ ಉಂಗುರ, (ಆ) ನನ್ನ ಕೊಡೆ, (ಇ) ನನ್ನ ಸೈಕಲ್ಲು.

### ೨. ವನಸ್ಪತಿಗಳು.

### ೧. ನನ್ನ ಮಾಮರ.

೧. **ಉಪಕ್ರಮ:**—'ಅಜ್ಜ ನೆಟ್ಟ ಆಲದ ಮರ' ಈ ಬಗೆಯ ಅಭಿಮಾನವಲ್ಲ. ೨. **ಸ್ಥಲ:**—ಎಲ್ಲಿ? ೩. **ಸ್ವರೂಪ:**—ಅದರ ವಿಸ್ತಾರ, ಆಕಾರ, ನೆಳಲು, ತಂಪು. ೪. **ಉಪಯೋಗ:**—ಸೊಬಗು-ತಂಪು-ತನಿವಣ್ಣುಗಳು. ೫. **ಉಪಸಂಹಾರ:**—ಅದನ್ನೆಂದಾದರೂ ಮರೆಯಬಹುದೇ?

ಅಂತಹ ಅನ್ಯ ವಿಷಯಗಳು :—

ಬಾಳೆ, ದಾಳಿಂಬ, ದ್ರಾಕ್ಷಿ, ಮಲ್ಲಿಗೆ.

೩. **ಪ್ರಾಣಿಗಳು.**

## ೧. ನನ್ನ ಆಕಳು.

೧. **ಉಪಕ್ರಮ :**—ಆಕಳು ತಾಯಿ ನಮಗೆ. ೨. **ಸ್ವರೂಪ :**—ನಿಲುವು, ಬಣ್ಣ, ಕೊಂಬುಗಳು. ೩. **ಸ್ವಭಾವ :**—ಇರಿಯುವುದಿಲ್ಲ. ತೀರ ಸಾಧು. ಮಮತೆಯ ಮೂರ್ತಿ. ೪. **ಉಪಸಂಹಾರ :**—ಹಸುವೇ (ಆಕಳೇ) ಮಕ್ಕಳಿಗೆ ಕಸುವನ್ನೀಯುವ ಕಾಮಧೇನು.

ಅಂತಹ ಅನ್ಯ ವಿಷಯಗಳು :—

೧. ಸಿಂಹ, ಹುಲಿ, ಚಿಗರಿ. ೨. ನವಿಲು, ಪಾರಿವಾಳ, ಕೋಗಿಲೆ, ಗಿಳಿ.

೪. **ಕಟ್ಟಡಗಳು.**

## ೧. ನನ್ನ ಮನೆ.

೧. **ಉಪಕ್ರಮ :**—ಮನೆಯು ಸಂತಸದ ಸೊನೆಯು. ೨. **ಪರಿಸರ :**—ಎಲ್ಲಿದೆ ? ಸುತ್ತಲಿನ ಬನಸಿರಿ. ೩. **ಆಕಾರ :**—ಆಕೃತಿ, ಕೋಣೆಗಳು, ಅಂತಸ್ತುಗಳು. ೪. **ಬಳಗ :**—ಅನುಕೂಲತೆಗಳು, ಬಂಧುಗಳು, ಸೇವಕರು. ೫. **ಉಪಸಂಹಾರ :**—ವರಂ ಪರ್ಣಶಾಲಾ ಪ್ರಮೋದೇನ ಪೂರ್ಣಾ. (ಆನಂದದಿಂದ ತುಂಬಿದ ಗುಡಿಸಲು ಮೇಲು.)

ಅನ್ಯ ವಿಷಯಗಳು :—

ಶಾಲೆ, ಗುಡಿ, ಅರಮನೆ, ನಾಟ್ಯಗೃಹ.

೫. **ಯಂತ್ರಗಳು.**

## ೧. ನನ್ನ ಮೋಟಾರು.

೧. **ಉಪಕ್ರಮ :**—ಇದು ಮೋಟಾರ ಯುಗವು. ೨. **ಪಡೆದ ರೀತಿ :**—ಕೊಂಡ ಕಾರಣ, ಪರಿಸ್ಥಿತಿ. ೩. **ವರ್ಣನೆ :**—ಆಕಾರ, ಸೀಟುಗಳು. ೪. **ಉಪಯೋಗ :**-ವ್ಯವಹಾರದಲ್ಲಿ ಆಲೆದಾಡಲು, ಪ್ರವಾಸಮಾಡಲು. ೫. **ಉಪಸಂಹಾರ :**-ಇದರ ಉಪಕಾರವನ್ನು ಮರೆಯುವಂತಿಲ್ಲ.

ಅನ್ಯ ವಿಷಯಗಳು :—

ನನ್ನ ಹಡಗ, ವಿಮಾನ, ಮುದ್ರಣಯಂತ್ರ, ಪಂಪು, ಟೆಲಿಫೋನು. ಆಕಾಶವಾಣಿ.

೬. **ಊರುಗಳು.**

## ೧. ನನ್ನ ಹಳ್ಳಿ.

೧. **ಉಪಕ್ರಮ :**—ಹಳ್ಳಿಯೇ ಸೌಭಾಗ್ಯದ ಬಳ್ಳಿ. ೨. **ಪರಿಸರ :**—ನಿಸ

ರ್ಗದ ಸೊಬಗು, ಹಳ್ಳ, ಬೆಟ್ಟ. ೩. ರಚನೆ:—ಆಕಾರ, ವಿಸ್ತಾರ, ಪ್ರಮುಖ ಕಟ್ಟಡಗಳು. ೪. ಜನರು:—ಜಾತಿ ಪಂಗಡಗಳು. ಸೌಹಾರ್ದ ಸಹಕಾರಗಳು. ೫. ಉಪಸಂಹಾರ:—ಸ್ವಂತ ಅಭಿಪ್ರಾಯ, ಅನಿಸಿಕೆ.

ಅನ್ಯ ವಿಷಯಗಳು :—

ಉದ್ಯಾನ, ಪಟ್ಟಣ, ನಿಲ್ದಾಣ, ಐತಿಹಾಸಿಕ ಸ್ಥಳ.

## ೭. ನಿಸರ್ಗದ ನೋಟಗಳು.

### ೧. ನಾನು ಸವಿದ ಮುಂಜಾವು.

೧. ಉಪಕ್ರಮ:—ಸಕ್ಕರೆನಿದ್ದೆಯಿಂದ ಒಂದು ದಿವ್ಯದರ್ಶನದ ಆಭಾಸ. ೨. ನಸುಕು:—ಅರುಣನ ಹೊಂಬೆಳಕು, ಚಿಕ್ಕೆಗಳು ಅಡಗಲಿವೆ. ತಂಗಾಳಿಯು ತೀಡಲಿದೆ. ೩. ಸೂರ್ಯೋದಯ:—ಮೂಡಣಸಿರಿ-ಸೊಬಗು, ಬೆಳಕಿನ ಮಳೆ, ಹಕ್ಕಿಗಳ ಇಂಚರ. ೪. ನವಜೀವನ. ೫. ಉಪಸಂಹಾರ:—ಅದೊಂದು ಹುರುಪಿನ ಹೊಳೆಯು.

ಅನ್ಯ ವಿಷಯಗಳು :—

೧. ವಸಂತಕಾಲ, ಚಳಿಗಾಲ, ಬೆಳದಿಂಗಳು, ಸಾಯಂಕಾಲ.
೨. ನದಿ, ಸರೋವರ, ಸಾಗರ, ಪರ್ವತ, ಜಲಪಾತ.

## ೮. ವಿಹಾರ.

### ೧. ನನ್ನ ಬೇಸಿಗೆಯ ಬಿಡುವು.

೧. ಉಪಕ್ರಮ:—ಬಿಡುವಿನ ಮಹತ್ವ. ಅದರಿಂದಾಗುವ ಸಂತಸ. ಎಂಥ ಬೆಡಗಿನ ಬೀಡಿದು ? ಎಂದು ಪ್ರಾರಂಭಿಸಿದಿರಿ. ೨. ಸ್ಥಳ:—ಎಲ್ಲಿದೆ ? ಹೇಗಿದೆ ? ಪರಿಸರ ವಿಶೇಷ. ೩. ಕಾರ್ಯಕ್ರಮ:—ಬೆಳಗಿನಿಂದ ಬೈಗಿನವರೆಗೆ ಮಾಡಿದುದೇನು ? ಆಟ ನೋಟ-ಸಂಗಡಿಗರು. ೪. ವಿಶೇಷ ಸಂಗತಿ:—ವಿಶೇಷ ಸಂಗತಿಯೊದಗಿದ್ದರೆ ಅದರ ಬಣ್ಣನೆ. ೫. ಉಪಸಂಹಾರ:—ಅಭಿಪ್ರಾಯ, ಮೈ ಮನಸ್ಸಿನ ಮೇಲಾದ ಪರಿಣಾಮ, ಬಿಡುವಿನ ಬೆಲೆ.

ಅನ್ಯ ವಿಷಯಗಳು :—

ಪ್ರವಾಸ, ದೀವಳಿಗೆ, ಹುಟ್ಟಿದ ಹಬ್ಬ, ಮದುವೆ, ಜಾತ್ರೆ.

## ೯. ವ್ಯಕ್ತಿಗಳ ಪರಿಚಯ (ಸ್ವಭಾವ ಚಿತ್ರಗಳು):—

### ೧. ಸರ್ವಜ್ಞ.

೧. ದಿನಚರಿ, ೨. ಆಶೆ-ಆಕಾಂಕ್ಷೆಗಳು, ೩. ಗುಣದೋಷಗಳು, ೪. ಕಾರ್ಯ ೫. ವೈಶಿಷ್ಟ್ಯ.

ಅನ್ಯ ವಿಷಯಗಳು :—

ಶ್ರೀಯವರು, ಆಲೂರರವರು, ಬೇಂದ್ರೆಯವರು, ತಾರಾನಾಥರು, ಹರ್ಡೇಕರ ಮಂಜಪ್ಪನವರು, ರಾಜರತ್ನರು, ವಿ. ಸೀ. ಯವರು.

## ೪. ಕಥನಪರ.

೧. **ಅಂದರೇನು ? :—**

ಒಂದು ಕಾಲಖಂಡದಲ್ಲಿ ಒದಗಿದ ಸಂಗತಿಗಳನ್ನು ಅವು ಒದಗಿದ ಕ್ರಮವನ್ನನುಸರಿಸಿ ಬಣ್ಣಿಸುವುದು **ಕಥನಪರ ನಿಬಂಧದ** ಕಾರ್ಯ. ಈ ದೃಷ್ಟಿಯಿಂದ ಅದರಲ್ಲಿ ವರ್ಣನೆಗಳ ಒಂದು ಮಾಲೆಯಿರುವುದೆನ್ನಲು ಅಡ್ಡಿಯಿಲ್ಲ. ಈ ಮಾಲೆಯು ಮೂಲ ಕಥಾಸೂತ್ರವನ್ನವಲಂಬಿಸಿರುವುದು. ಇದರಲ್ಲಿ—

(೧) **ಕಥೆಗಳು** (೨) **ಜೀವನಚರಿತೆಗಳು** (೩) **ಐತಿಹಾಸಿಕ ಸಂಗತಿಗಳು,** ಇವು ಅಡಕವಾಗಿರುವುವು.

೨. **ಬರೆಯುವುದೆಂತು ? :—(ಅ) ಸಾಮಾನ್ಯ ಪರಿಚಯ.**

(೧) ಕತೆಗಳಲ್ಲಿ ಅಥವಾ ಅನ್ಯ ಪ್ರಸಂಗಗಳಲ್ಲಿ, ಸಂಗತಿಗಳು ಯಾವ ಕ್ರಮದಿಂದ ಒದಗಿರುವವೋ ಅದೇ ಕ್ರಮದಿಂದ ಅವನ್ನು ಬಣ್ಣಿಸಬೇಕು. ಅವುಗಳೆಲ್ಲಿಯ ಕಾರ್ಯಕಾರಣಸಂಬಂಧವನ್ನೂ ಬೇರೆ ಬಗೆಯ ಸಂಬಂಧವನ್ನೂ ಪ್ರಾಮುಖ್ಯದಿಂದ ಹೇಳಬೇಕು.

(೨) ನಿಮ್ಮ ವರ್ಣನ ಕೌಶಲದಿಂದ ವರ್ಣಿತ ಪ್ರಸಂಗವು ಓದುಗರ ಕಣ್ಣುಗಳ ಮುಂದೆ ಕಟ್ಟಿದಂತಾಗಬೇಕು. ಇಷ್ಟು **ನಾಟಕೀಯತೆಯೂ, ವಾಸ್ತವಿಕತೆಯೂ** ನಿಮ್ಮ ನಿಬಂಧದಲ್ಲಿ ಬರಬೇಕು.

(೩) ಕಥನ-ವಿಷಯವು ಒದಗಿದ ಸ್ಥಲಕಾಲಗಳನ್ನಾಗಲಿ ಅವರಲ್ಲಿ ಭಾಗ ವಹಿಸಿದ ವ್ಯಕ್ತಿಗಳನ್ನಾಗಲಿ, ಅದರ ಕಾರಣ ಪರಿಣಾಮಗಳನ್ನಾಗಲಿ, ವರ್ಣಿಸಿ ನಿಬಂಧವನ್ನು ಪ್ರಾರಂಭಿಸಬೇಕು.

(೪) ಆದರಿಂದ ಕಲಿಯಬಹುದಾದ ಪಾಠವನ್ನು ಸೂಚಿಸಿ ಅದನ್ನು ಮುಗಿಸಬಹುದು. ಒಮ್ಮೊಮ್ಮೆ ಅನಿರೀಕ್ಷಿತವಾದ, ಓದುಗರು ಊಹಿಸದಂತಹ, ಮುಕ್ತಾಯವು ಅವರಲ್ಲಿ ಅಚ್ಚರಿಯನ್ನು ಮತ್ತು ಕುತೂಹಲವನ್ನು ಹುಟ್ಟಿಸುವುದುಂಟು.

(ಆ) **ವಿಶೇಷ ಪರಿಚಯ :—**

(೧) **ಕತೆಗಳು :—**ಇವುಗಳ ವಿವೇಚನೆಯನ್ನು **೨ನೆಯ** ಭಾಗದಲ್ಲಿ ಮಾಡಲಾಗಿದೆ.

**(೨) ಜೀವನಚರಿತೆಗಳು:—** ಪ್ರತಿಯೊಂದು ಜೀವನಚರಿತೆಯಲ್ಲಿ ಕೆಳಗಿನ ಸಂಗತಿಗಳಲ್ಲಿ ಸಾಧ್ಯವಿದ್ದವುಗಳನ್ನು ಅನುಸರಲು ಯತ್ನಿಸಬೇಕು.

೧. ಜನ್ಮ:—ಸ್ಥಲ–ಕಾಲ–ಪರಿಸ್ಥಿತಿ.

೨. ಕುಲ:—ತಂದೆ–ತಾಯಿ–ಮನೆತನ.

೩. ಬಾಲ್ಯ:—ಪ್ರವೃತ್ತಿ–ಶಿಕ್ಷಣ.

೪. ಯೌವನ:—ವ್ಯವಸಾಯ, ಕಾರ್ಯ.

೫. ಕೊನೆಯ ದಿನಗಳು:—ಮುಪ್ಪು, ಮರಣ.

೬. ಹಿರಿಯತನ:—ಸ್ವಭಾವಚಿತ್ರ–ಕಾರ್ಯದ ಮಹತ್ವ.

**(೩) ಐತಿಹಾಸಿಕ ಪ್ರಸಂಗಗಳು:—** ಇವರಲ್ಲಿ ಕೆಳಗಿನ ಸಂಗತಿಗಳನ್ನು ಕ್ರಮವರಿತು ಬಣ್ಣಿಸಿರಿ.

೧. ಪೂರ್ವಪರಿಸ್ಥಿತಿ:—ಕಾರಣಪರಂಪರೆ.

೨. ಪ್ರಸಂಗವರ್ಣನೆ:—ಅದರಲ್ಲಿಯ ಬೇರೆಬೇರೆ ಸಂಗತಿಗಳ ಯಥಾಕ್ರಮ ವರ್ಣನೆ–ಪರಸ್ಪರ ಸಂಬಂಧ.

೩. ಪ್ರಸಂಗದ ಕೊನೆ:—ಅವರ ಫಲಿತಾಂಶ–ಪರಿಣಾಮ.

೪. ಅಭಿಪ್ರಾಯ:—ಸಮಕಾಲೀನರದು–ನಿಮ್ಮದು.

## ೩. ಮಾದರಿಯ ನಿಬಂಧಗಳು:—

### (i) ಜೀವನಚರಿತೆಗಳು.

### ೧. ಕವಿಚಕ್ರವರ್ತಿ ರನ್ನ.

ಕ್ರಿಸ್ತಶಕದ ಹತ್ತನೆಯ ಶತಮಾನದ ಆದಿಭಾಗದಲ್ಲಿ ಮುದುವೊಳಲ್ ಎಂಬ ಗ್ರಾಮದಲ್ಲಿ ಜಿನವಲ್ಲಭನೆಂಬ ಒಬ್ಬ ಬಳೆಗಾರನಿದ್ದನು. ಅವನು ಜಾತಿಯಲ್ಲಿ ವೈಶ್ಯನು; ಮತದಲ್ಲಿ ಜೈನನು. ಅವನಿಗೆ ಅಬ್ಬಲಬ್ಬೆ ಎಂಬ ಹೆಂಡತಿಯಿದ್ದಳು. ಆಕೆಯು ಗಂಡನಲ್ಲಿ ವಿಶೇಷ ಭಕ್ತಿಯನ್ನಿಟ್ಟುಕೊಂಡಿದ್ದಳು.

ಇವರಿಗೆ ಕನ್ನಡಿಗರ ಪುಣ್ಯೋದಯಕ್ಕೆ ಅರುಣೋದಯವಾದಂತೆ ಕ್ರಿ. ಶ. ೯೪೯ ರಲ್ಲಿ ರನ್ನನೆಂಬ ಗಂಡುಮಗನು ಹುಟ್ಟಿದನು. ರನ್ನನು ಇವರ ನಾಲ್ಕನೆಯ ಮಗನು.

ಮಗುವು ಮುದ್ದುಮುದ್ದಾಗಿದ್ದಿತು. ಮುಖದಲ್ಲಿ ಚಟುವಟಿಕೆಯು ತುಂಬಿ ತುಳುಕುತ್ತಿದ್ದಿತು. ಕೂಸಿನ ಬಾಯಿಯಿಂದ ಮಾತುಗಳು ಸ್ಫುಟವಾಗಿ ಹೊರಡುತ್ತಿದ್ದವು. ಇಂತಹ ಹುಡುಗನನ್ನು ಕಂಡರೆ ಯಾರಿಗೆ

ತಾನೆ ಸಂತೋಷವಾಗುವುದಿಲ್ಲ? ನೆರೆಹೊರೆಯ ಹೆಂಗಸರು ಇವನನ್ನೆತ್ತಿ ಕೊಂಡು ಮುದ್ದಿಸಿ ತಿಂಡಿಯನ್ನು ಕೊಡುತ್ತಿದ್ದರು. ಜಿನವಲ್ಲಭನ ಮನೆಗೆ ಬರುತ್ತಿದ್ದ ಬುದ್ಧಿವಂತರಾದ ಹಿರಿಯರು ಆ ಹುಡುಗನ ಚಟುವಟಿಕೆಗೆ ಹಿಗ್ಗಿ, ಅವನ ಸ್ಫುಟವಾಕ್ಕಿಗೂ, ಗ್ರಹಣಶಕ್ತಿಗೂ ಮನಸೋತು, ಅವನಿಗೆ ಶ್ಲೋಕ-ಪದ್ಯ-ಹಾಡು ಮುಂತಾದುವನ್ನು ಹೇಳಿಕೊಟ್ಟು ಅವನು ಶೀಘ್ರದಲ್ಲಿಯೇ ಕಲಿತುಕೊಂಡುದನ್ನು ನೋಡಿ ಹೆಚ್ಚಾಗಿ ಹಿಗ್ಗುತ್ತಿದ್ದರು. ಹೀಗೆ ಬಾಲ್ಯ ದಿಂದಲೂ ಸಮಯ ಸಿಕ್ಕಾಗಲೆಲ್ಲ ಓದುವುದರಲ್ಲಿ ಕಾಲಕಳೆಯುತ್ತಿದ್ದನು. ಹೀಗೆ ಅವನ ಶೈಶವವು ಕಳೆಯಿತು.

ಆತನು ದೊಡ್ಡವನಾದ ಮೇಲೆ ಮೊದಲಿನಿಂದಲೂ ಓದುವುದರಲ್ಲಿದ್ದ ಅಭಿಮಾನವು ಮತ್ತಷ್ಟು ವೃದ್ಧಿಯಾಯಿತು. ವಿದ್ಯೆಯಲ್ಲಿ ಆಸೆಯು ಬಲ ವಾಗಿ ಬೇರೂರಿತು. ಆಗ ಯಾವ ವಿಧವಾದ ಸೌಕರ್ಯವೂ ಇರಲಿಲ್ಲ. ಆದರೂ ಎದೆಗುಂದದೆ ರನ್ನನು ತನ್ನ ಊರನ್ನು ಬಿಟ್ಟು ಗಂಗರಾಜ್ಯಕ್ಕೆ ಪ್ರಯಾಣ ಮಾಡಿದನು. ಗಂಗರಾಜರ ಮಂತ್ರಿ ಚಾವುಂಡರಾಯನು ಇವನ ಉತ್ಸಾಹವನ್ನು ಕಂಡು ಸಂತೋಷಪಟ್ಟು ಇವನನ್ನು ತನ್ನ ಬಳಿಯಲ್ಲಿರಿಸಿ ಕೊಂಡನು; ಬೇಕಾದ ಸಹಾಯಗಳನ್ನು ಮಾಡಿಕೊಟ್ಟನು. ಸಂಸ್ಕೃತ-ಕರ್ಣಾಟ ಭಾಷೆಗಳಲ್ಲಿ ಕವಿತ್ವ ಮಾಡುವ ಶಕ್ತಿಯು ದೈವವಶಾತ್ ಇವನ ಲ್ಲುಂಟಾಯಿತು. ಬೇರೆ ಪಂಡಿತರಿಂದ ಸಾಮಾನ್ಯ ವಿದ್ಯೆಯಲ್ಲಿ ಪಾರಂಗತ ನಾದಮೇಲೆ ಅಜಿತಸೇನರಿಂದ ಜೈನಮತವನ್ನು ಕೂಲಂಕಷವಾಗಿ ತಿಳಿದು ಕೊಂಡನು.

ಕೆಲವು ಕಾಲ ರಾಜರ ಸಭೆಗಳಲ್ಲಿ ಸಂಚಾರ ಮಾಡಿ ತೀರ್ಥ ಕ್ಷೇತ್ರ ಗಳನ್ನೆಲ್ಲ ಸೇವಿಸಿಕೊಂಡು ಬಂದಮೇಲೆ ತನ್ನ ಹುಟ್ಟಿದ ದೇಶಕ್ಕೆ ಬಂದು ಅಲ್ಲಿಯೇ ನಿಲ್ಲಬೇಕೆಂದು ಮನಸು ಮಾಡಿದನು. ಮುಂದೆ ರನ್ನನು ತನ್ನ ದೇಶಕ್ಕೆ ಬಂದು ತೈಲಪನ ಬಳಿಯಲ್ಲಿ ಆಸ್ಥಾನವಿದ್ವಾಂಸನಾದನು. ಇಷ್ಟರ ವೇಳೆಗೆ ಇವನು ಮದುವೆಯನ್ನು ಮಾಡಿಕೊಂಡಿರಬಹುದು. ಬಹುದಿನಗಳ ವರೆಗೆ ಇವನಿಗೆ ಮಕ್ಕಳಾಗಲಿಲ್ಲ.

ಇದೇ ಕಾಲಕ್ಕೆ ತೈಲಪನ ಮಗನಾದ ಸತ್ಯಾಶ್ರಯನು ದಂಡಯಾತ್ರೆಗೆ ಹೊರಟನು. ಈತನ ಸಾಹಸ ವರ್ಣಿಸಲು 'ಸಾಹಸಭೀಮ ವಿಜಯ' ವೆಂಬ ಕಾವ್ಯವನ್ನು ಬರೆದನು. ಮುಂದೆ ಅಜಿತ ಪುರಾಣವನ್ನು ಬರೆದನು. ಇವನಿಗೆ

ಕವಿಚಕ್ರವರ್ತಿ ಎಂಬ ಬಿರುದನ್ನು ತೈಲಪನು ದಯಪಾಲಿಸಿದನು.

ಅನುಕೂಲೆಯರಾದ ಇಬ್ಬರು ಹೆಂಡಿರು. ವಿನೀತರಾದ ಎರಡು ಮಕ್ಕಳು. ಎಲ್ಲರಿಂದ ಬಹಳವಾದ ಗೌರವ. ಈ ಮೇರೆಗೆ ಸುಖಸರ್ವಸ್ವವನ್ನೂ ಉಪಭೋಗಿಸಿ, ಕರ್ನಾಟಕ ಸರಸ್ವತಿಗೆ ರತ್ನಪ್ರಾಯವಾಗಿದ್ದ ರನ್ನನು ಕ್ರಿ. ಶ. ಸುಮಾರು ೧೦೩೦ರಲ್ಲಿ ಮೃತನಾದನು.

—ರನ್ನಪ್ರಶಸ್ತಿ.

## ೨. ಮಹಾದೇವಿಯಕ್ಕನವರು.

೧. **ಜನ್ಮ** :—ಬಳ್ಳಿಗಾವೆಯ ಬಳಿಯಲ್ಲಿ ಉಡುತಡಿ ಎಂಬ ಊರು. ಅಲ್ಲಿ ನಿರ್ಮಲಶೆಟ್ಟಿ ಸುಮತಿ ಎಂಬ ದಂಪತಿಗಳು ನೆಲಸಿದ್ದರು. ಇವರು ಪರಮ ಶಿವಭಕ್ತರು. ಶಿವನ ಪ್ರಸಾದದಿಂದ ಇವರಿಗೆ ಮಹಾದೇವಿ ಎಂಬ ಮಗಳು ಹುಟ್ಟಿದಳು.

೨. **ಬಾಲ್ಯ** :—ಮಹಾದೇವಿಯು ಚೆಲುವೆಯಾಗಿದ್ದಳು. ಬಹಳ ಬುದ್ಧಿವಂತೆ. ಪವಿತ್ರವಾದ ಹೃದಯ. ನಿರ್ಮಲವಾದ ನಡೆನುಡಿಗಳು. ಈಕೆಯ ಭಾವನೆಯು ಉತ್ಕಟವಾದುದು. ಮನಸು ಏಕಾಗ್ರವಾದುದು. ವಿಚಾರಗಳು ಗಂಭೀರವಾದವು. ಚಿತ್ತವು ಶ್ರದ್ಧಾಯುತವಾದುದು. ಶಿವಭಕ್ತರಾದ ತಂದೆತಾಯಿಗಳ ಒಲವಿನ ತನಿನೆಳಲಲ್ಲಿ ಬೆಳೆದ ಈಕೆಯಲ್ಲಿ ಬಾಲ್ಯದಲ್ಲಿಯೇ ಶಿವಭಕ್ತಿಯು ಮೊಳೆತು ದಿನದಿನಕ್ಕೆ ಬೆಳೆಯಿತು.

೩. **ಯೌವನ** :—ಮಹಾದೇವಿಯು ಬಾಲ್ಯವನ್ನು ಕಳೆದು ಯೌವನರಂಗವನ್ನು ಪ್ರವೇಶಿಸಿದಳು. ಆಗ ಅತಿ ಮೋಹಕವಾದ ಆಕೆಯ ರೂಪರಾಶಿಯು ಗಂಡುಸರ ಬಗೆಗಳನ್ನು ಸೂರೆಗೊಳ್ಳಲಾರಂಭಿಸಿತು. ಒಂದು ದಿನ ಆ ಊರ ದೊರೆಯಾದ ಕೌಶಿಕನು ಈಕೆಯನ್ನು ನೋಡಿ ಈಕೆಯ ಸೌಂದರ್ಯಕ್ಕೆ ಸೆರೆಯಾದನು. ಈಕೆಯು ತನ್ನನ್ನು ಮದುವೆಯಾಗುವಂತೆ ಈಕೆಯ ಮನವೊಲಿಸಲು ತಂದೆ ತಾಯಿಗಳ ಮುಖಾಂತರ ಪ್ರಯತ್ನಗಳನ್ನು ನಡೆಸಿದನು. ಭವಿಯಾದ ಆತನನ್ನು ವರಿಸಲು ಈಕೆಯು ಇಚ್ಛಿಸಲಿಲ್ಲ. ಆದರೆ ದೊರೆಯನ್ನು ನಿರಾಕರಿಸಲು ಅಸಮರ್ಥರಾದ ತಂದೆ ತಾಯಿಗಳ ಆಗ್ರಹದ ಮೇರೆಗೆ ಮಹಾದೇವಿಯು ಕೌಶಿಕನೊಡನೆ ವಿವಾಹಿತಳಾಗಿ ಅವನ ಅರಮನೆಯಲ್ಲಿ ಇರತೊಡಗಿದಳು.

೪. **ಅರಮನೆಯ ತ್ಯಾಗ** :—ಆದರೆ ಮಹಾದೇವಿಯನ್ನು ಮದುವೆ

ಯಾದ ಕೌಶಿಕನಿಗೆ ವಿವಾಹ ಸುಖವು ಲಭಿಸಲಿಲ್ಲ. ಈ ಗಂಡಹೆಂಡಿರ ಗೊತ್ತು-ಗುರಿಗಳು, ರೀತಿನೀತಿಗಳು ಒಂದಕ್ಕೊಂದು ಕೂಡದಂತಹವು ಆಗಿದ್ದವು. ಆತನು ದೇಹಸುಖಕ್ಕೆ ಎಳಸುವವನು. ಆತ್ಮ ಸುಖವನ್ನು ಬೆಂಬತ್ತಿದವಳು ಇವಳು. ಅರಸುತನದ ಐಸಿರಿಯಲ್ಲಿ ಆತನಿಗೆ ತುಂಬಾ ಆಸಕ್ತಿ. ಈಕೆಗೆ ಅವರಲ್ಲಿ ತುಂಬಾ ವಿರಕ್ತಿ. ಅರಮನೆಯಲ್ಲಿಯೂ ಈಕೆಯ ಶಿವವ್ರತಗಳು ಬೆಳೆಯುತ್ತಲೆ ಹೋದವು. ಈಕೆಯ ಮನಸ್ಸನ್ನು ತಿರುಗಿಸಲು ಆತನು ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲವಾದವು. ಕೊನೆಗೆ ಒಂದು ದಿನ ಆತನ ಅಸಹನೆಯು ವಿಕೋಪಕ್ಕೆ ಹೋದದ್ದರಿಂದ, ಮಹಾದೇವಿಯು ಅರಸನನ್ನೂ ಅರಮನೆಯನ್ನೂ ತೊಲಗಿ ವನಚರಿಯಾಗಿ ನಡೆದಳು.

೫. **ಕಲ್ಯಾಣದಲ್ಲಿ** :—ಉಡುತಡಿಯಿಂದ ಹೊರಟ ಮಹಾದೇವಿಯು ವೀರಶೈವ ಪುಣ್ಯಕ್ಷೇತ್ರವಾದ ಕಲ್ಯಾಣಪಟ್ಟಣಕ್ಕೆ ಬಂದಳು. ಅಲ್ಲಮಪ್ರಭು ಬಸವೇಶ್ವರ ಮುಂತಾದ ಮಹಾಮಾಹೇಶ್ವರರ ಭವ್ಯ ಸನ್ನಿಧಾನದಿಂದ ಈ ಸ್ಥಳಕ್ಕೆ ಅಪೂರ್ವವಾದ ಮಹತ್ವವು ಬಂದಿತ್ತು. ಅಸಹಾಯ ಶಿವಶರಣೆಯಾದ ಮಹಾದೇವಿಯು ಶಿವಶರಣರ ಆ ಮಹಾಸಮ್ಮೇಲನದ 'ಶಿವಾನುಭವ ಮಂಟಪವನ್ನು' ಪ್ರವೇಶಿಸಿದಳು. ಈಕೆಯ ಮನೋಧೈರ್ಯ-ಮತಿವೈಭವ-ವಿಚಾರೌನ್ನತ್ಯ-ಅನುಭಾವಿತ್ವ ಮುಂತಾದ ಅಲೌಕಿಕ ಗುಣಗಳ ತೇಜಸ್ಸನ್ನು ಕಂಡು ಪ್ರಭುದೇವ ಬಸವಣ್ಣನವರು ಬೆರಗಾದರು. ಈಕೆಯನ್ನು ಬಹುವಾಗಿ ಗೌರವಿಸಿದರು. ಬಸವಣ್ಣನವರ ಸಮಾಗಮದಲ್ಲಿ ಧನ್ಯತೆಯನ್ನು ಪಡೆಯುತ್ತ ಮಹಾದೇವಿಯು ಕೆಲಕಾಲ ಕಲ್ಯಾಣದಲ್ಲಿ ವಾಸವಾಗಿದ್ದಳು.

೬. **ಶ್ರೀಶೈಲದಲ್ಲಿ** :—ಕಲ್ಯಾಣವು ಮಹಾದೇವಿಯ ಜೀವನವನ್ನು ಪರಿಪಕ್ವಗೊಳಿಸಿ ಕಲ್ಯಾಣಪ್ರದವಾಯಿತು. ಆದರೆ ಆಕೆಯ ಅಧ್ಯಾತ್ಮ ಜೀವನದ ಅಂತಿಮ ಧ್ಯೇಯವನ್ನು ಈಡೇರಿಸಿ ಕೊಡುವ ಪುಣ್ಯ ಸ್ಥಳವು ಬೇರೆಯೆ ಆಗಿತ್ತು. ಅದನ್ನು ಪಡೆಯಲೋಸುಗ ಈಕೆಯು ಶ್ರೀಶೈಲದತ್ತ ಸಾಗಿದಳು. ಅಲ್ಲಿಯ ಮನೋಹರವಾದ ಸೃಷ್ಟಿ ಶೋಭೆಯು ಈಕೆಯ ಮನಸ್ಸನ್ನು ತಣಿಸಿ ಕುಣಿಸಿತು. ಆ ಮಂಗಲನಿಧಾನದಲ್ಲಿ ಭಕ್ತಿಮಯವಾದ ಈಕೆಯ ಹೃದಯವು ಉದ್ರೇಕಗೊಂಡಿತು. ಭಕ್ತಿಪರವಶೆಯಾದ ಈಕೆಗೆ ಎಲ್ಲೆಲ್ಲಿಯೂ ಚೆನ್ನಮಲ್ಲಿಕಾರ್ಜುನನೇ ಕಾಣತೊಡಗಿದನು.

ಕೊನೆಗೆ ಅವನಲ್ಲಿಯೆ ಮಹಾದೇವಿಗೆ ಆತ್ಮಸಾಕ್ಷಾತ್ಕಾರದ ಯೋಗವು

ಒದಗಿತು. ಲಿಂಗಾಂಗ ಸಾಮರಸ್ಯವು ಲಭ್ಯವಾಯಿತು. ಪರಮ ಸುಖಪರಿಣಾಮವು ಉದಯಿಸಿತು. ಈಕೆಯು ತನ್ನ ಪ್ರಾಣೇಶ್ವರನ ರೂಪದಲ್ಲಿ ಲಯವಾದಳು. ಜೀವನದ ಅಂತಿಮ ಸ್ಥಿತಿಯನ್ನು ಸ್ಥಾಪಿಸಿದಳು.

೬. **ಹಿರಿಮೆ**:—ಮಹಾದೇವಿಯು ಕರ್ನಾಟಕ ಮಹಿಳಾ ಮಂಡಲದಲ್ಲಿ ಅಸಮಪ್ರಭೆಯಿಂದ ಪ್ರಕಾಶಮಾನವಾದ ಮಹಾಜ್ಯೋತಿಯು. ಈಕೆಯ ಇಡಿಯ ಜೀವನವೆ ಒಂದು ಮಹಾಕಾವ್ಯವಾಗಿದೆ. ಈಕೆಯ ಪ್ರತಿಭೆಯು ಉನ್ನತವಾದುದು. ಈಕೆಯ ಚಾರಿತ್ರ್ಯವು ಪ್ರತಿಭೆಗಿಂತಲೂ ಪ್ರಶಂಸನೀಯವಾದುದು. ಈಕೆಯ ಆತ್ಮಾರ್ಪಣೆಯು ಚಾರಿತ್ರ್ಯಕ್ಕಿಂತಲೂ ಚರಿತ್ರಾರ್ಹವಾದುದು.

—ಪಾಂ. ಘೀ. ದೇ.

## ೩. ರವೀಂದ್ರರು.

೧. **ಉಪಕ್ರಮ**:— ಇಂದು ಹಿಂದುಸ್ಥಾನಕ್ಕೆ ಜಗತ್ತಿನಲ್ಲಿ ಮನ್ನಣೆಯು ದೊರಕಿರುವುದಾದರೆ ಅದು ರವೀಂದ್ರನಾಥ—ಗಾಂಧಿ—ರಾಮನ್—ರಾಧಾಕೃಷ್ಣನ್‌ರಂಥ ಮಹಾನುಭಾವರಿಂದ. ಅವರಲ್ಲಿ ತೀರ ಮೊದಲಿಗೆ ಜಗತ್ತಿನ ಮೆಚ್ಚುಗೆಗೆ ಪಾತ್ರರಾದವರು ಕವಿ ರವೀಂದ್ರರು.

೨. **ಕುಲ**:—ರವೀಂದ್ರರು ಬಂಗಾಳ ದೇಶದವರು. ಅವರು ಶ್ರೀಮಂತ ಜಮೀನದಾರರು. ಅವರ ತಂದೆಯ ಹೆಸರು ದೇವೇಂದ್ರನಾಥ ಠಾಕೂರ ಎಂದು. ಅವರಿಗೆ ಮಹರ್ಷಿ ದೇವೇಂದ್ರ ಎಂಬ ಬಿರುದೂ ಇದೆ. ಬಂಗಾಳದಲ್ಲಿ ಒಮ್ಮೆ ಸಮಾಜ ಕ್ರಾಂತಿಯನ್ನುಂಟುಮಾಡಿದ ಬ್ರಹ್ಮ ಸಮಾಜಕ್ಕೆ ದೇವೇಂದ್ರರು ಒಬ್ಬ ಆಧಾರಸ್ತಂಭರಾಗಿದ್ದರು. ಅವರ ಮಗನಾದ ರವೀಂದ್ರರಿಗೆ ಕುಲ, ಶೀಲ, ಸಂಪತ್ತು ಎಲ್ಲವೂ ಇದೆ.

೩. **ಬಾಲ್ಯ—ಶಿಕ್ಷಣ**:—ಅವರು ಚಿಕ್ಕವರಿರುವಾಗ ಶಾಲೆಗೆ ಹೋಗುತ್ತಿದ್ದರು. ಆದರೆ ಶಾಲೆಯ ಗೋಡೆಯನ್ನು ಕಂಡೊಡನೆ ಅವರಿಗೆ ಜುಗುಪ್ಸೆ ಬರುತ್ತಿತ್ತು. ಚಿಕ್ಕಂದಿನಿಂದ ಅವರಿಗೆ ಶಾಲೆಯೆಂಬುದು ಜೈಲಿನಂತೆ ತೋರುತ್ತಿತ್ತು. ಅವರ ಮನಸ್ಸು ಸ್ವತಂತ್ರವಾದುದು. ಈಗದು ಹೂವನ್ನು ಕಂಡು ನಗೆಯುವುದು; ಇನ್ನೊಮ್ಮೆ ಬಾನನ್ನು ಕಂಡು ಆನಂದಿಸುವುದು. ಅಂಥವರಿಗೆ ಶಾಲೆಯ ಪಾಠಗಳು ರುಚಿಸಲಿಲ್ಲವೆಂಬುದು ಆಶ್ಚರ್ಯವೇ ?

ಅವರ ತಂದೆಯು ಮಗನ ರೀತಿಗಳಿಗೆ ಸ್ವಾತಂತ್ರ್ಯಕೊಟ್ಟರು. ಅವರು

ಬೇಕಾದಂತೆ ವಿಹರಿಸುತ್ತ, ಆನಂದಗೊಳ್ಳುತ್ತ ಜೀವನ ಕಳೆಯುತ್ತಿದ್ದರು. ಎಷ್ಟೋಬಾರಿ ಬೆಟ್ಟದ ತುದಿಗೊ, ನದಿಯ ಅಂಚಿಗೊ ಹೋಗಿ, ಮೌನದಿಂದ ದಿವಸಗಳನ್ನು ಕಳೆಯುತ್ತಿದ್ದರು. ಒಮ್ಮೆ ರವೀಂದ್ರರು ನದಿಯ ಮೇಲೆ ದೋಣಿಯ ಮನೆಯೊಂದರಲ್ಲಿ ಆರು ತಿಂಗಳ ಕಾಲ ಮೌನವಾಗಿ ಕಳೆದರು. ಈಚೆ ಬಂದಾಗ ಮಾತನಾಡಲು ತುಟಿ ಬಿಡಿಸುವುದೇ ಕಷ್ಟವಾಯಿತಂತೆ. ಈ ಮೇರೆಗೆ ಅವರ ಧ್ಯಾನ-ಮೌನ-ಪರಿಶೀಲನಗಳ ಫಲವಾಗಿ ಅವರ ಬುದ್ಧಿಯು ತುಂಬಾ ಸಂಸ್ಕಾರ ಹೊಂದಿತು. ಅವರು ಕವಿಗಳಾದರು.

೪. **ಅವರ ಬರಹಗಳು:**—ರವೀಂದ್ರರ ಕಾವ್ಯಗಳು ಹಲವು ಇವೆ. ಅವುಗಳಲ್ಲಿ 'ಗೀತಾಂಜಲಿ' ಎಂಬುದು ಒಂದು. ಇದನ್ನು ತಿಳಿಯುವುದು ಕಷ್ಟ ಸಂಗತಿಯು. ರವೀಂದ್ರರು ಜೀವನದ ಅನೇಕ ಸಮಸ್ಯೆಗಳನ್ನು ಹೇಗೆ ಕಾಣುತ್ತಾರೆ ಎಂದು ಗೀತಾಂಜಲಿಯು ತಿಳಿಸುವುದು. ಸಾವನ್ನು ಸುಖದ ನಿದ್ರೆಯೆಂದು ತಿಳಿದು, 'ಬಾ ಸಾವೇ ನನಗೆ ವಿಶ್ರಾಂತಿಯನ್ನು ಕೊಡು' ಎಂದು ಅವರು ಕರೆದುದುಂಟು. ಈ ಕಾವ್ಯವು ಇಂದು ಜಗತ್ತಿನಲ್ಲಿಯ ಪ್ರಮುಖ ಭಾಷೆಗಳಲ್ಲೆಲ್ಲ ಅಚ್ಚಾಗಿದೆ. ಚೀನಾದಿಂದ ಇಂಗ್ಲೆಂಡಿನ ತನಕ ಜನರು ಅದನ್ನು ಓದುತ್ತಾರೆ. ಅದಕ್ಕೆ ಅವರಿಗೆ 'ನೋಬೆಲ್ ಬಹುಮಾನ' ವೆಂಬ ಒಂದು ಬಹುಮಾನವು ದೊರೆಯಿತು. ಈ ಬಹುಮಾನವನ್ನು ಗಳಿಸಿದ ಯಾವನೇ ವ್ಯಕ್ತಿಯಿರಲಿ, ಅವನು ಏನೋ ಅದ್ಭುತ ಕೆಲಸವನ್ನು ಮಾಡಿ ದ್ದಾನೆಂದು ತಿಳಿಯಬೇಕು.

ರವೀಂದ್ರರು ಬಂಗಾಲ ಭಾಷೆಯಲ್ಲಿ ಅನೇಕ ಸುಂದರವಾದ ಕಥೆ-ಕಾದಂಬರಿ-ನಾಟಕಗಳನ್ನು ಬರೆದಿದ್ದಾರೆ. ಅವರ ಬರಹದಲ್ಲೆಲ್ಲ ಒಂದು ವಿಚಿತ್ರ **ಲಾಲಿತ್ಯ**ವಿದೆ. ನಮ್ಮ ಮನಸ್ಸನ್ನು ಮುಗ್ಧಗೊಳಿಸಿ, ನಮ್ಮಲ್ಲಿ ನೂರಾರು ಕನಸುಗಳನ್ನು ಎಬ್ಬಿಸುವ ತ್ರಾಣ ಅವಕ್ಕಿದೆ.

೫. **ಅವರ ಶಾಂತಿನಿಕೇತನ:**—ಅವರಿಗೆ ತಮ್ಮ ಬಾಲ್ಯದ ಸ್ಮರಣೆ ಮರೆಯಲಿಲ್ಲ. ಶಾಲೆಯಿಂದ ತಮಗೆ ಉಂಟಾದ ನಿರ್ಬಂಧವನ್ನು ಅವರು ಚೆನ್ನಾಗಿ ಅರಿತುದರಿಂದ ಮಕ್ಕಳ ಮನಸ್ಸು ಹೂವಿನಷ್ಟು ಮೃದುವಾಗಿ, ನಿರಾ ತಂಕವಾಗಿ ಬೆಳೆಯಬೇಕೆಂದು ಯೋಚಿಸಿ, ಅವರೊಂದು ಶಾಲೆಯನ್ನು ತೆರೆ ದರು. ಇದಕ್ಕೆ ಶಾಂತಿನಿಕೇತನ ಎನ್ನುತ್ತಾರೆ. ಇಲ್ಲಿ ಚಿಕ್ಕ ಮಕ್ಕಳಿಂದ

ಹಿಡಿದು ಮುಪ್ಪಿನವರ ತನಕ ವ್ಯಾಸಂಗ ಮಾಡುತ್ತಾರೆ. ಅಲ್ಲಿ ಎಲ್ಲ ದೇಶದ ವಿದ್ಯಾರ್ಥಿಗಳನ್ನು ಕಾಣಬಹುದು.

ಶಾಂತಿನಿಕೇತನ ಶಾಲೆಯಲ್ಲಿ ಗುರುಗಳೂ ಶಿಷ್ಯರೂ ಅಣ್ಣತಮ್ಮಂದಿರಂತೆ ವಾಸಮಾಡುತ್ತಾರೆ. ಮರದ ನೆರಳಲ್ಲಿ ಕುಳಿತು ಪಾಠ ಹೇಳುತ್ತಾರೆ; ಕಲಿಯುತ್ತಾರೆ. ಶಾಂತಿನಿಕೇತನವನ್ನು ನೋಡಲು ಅಲ್ಲಿನ ಉತ್ಸವ ಕಾಲದಲ್ಲಿ ಹೋಗಬೇಕು. ವಸಂತಋತುವು ಕಾಲಿಡುವ ದಿನ, ಅಲ್ಲಿನ ಬಾಲಕರು, ಬಾಲಕಿಯರು, ಹಿರಿಯರು ಕೂಡಿ ಮುಂಜಾನೆಯೇ ಎದ್ದು ಹಾಡುತ್ತ ಹೊಸ ವರುಷವನ್ನು ಕರೆಯುತ್ತಾರೆ—ಹೊಸ ಜೀವನವನ್ನು ಸ್ವಾಗತ ಮಾಡುತ್ತಾರೆ.

'ನಾವೆಲ್ಲ ಸೃಷ್ಟಿಯ ಚೆಲುವಿನೊಂದಿಗೆ ಬೆರೆಯಬೇಕು' ಎಂಬುದು ಅಲ್ಲಿನ ಉದ್ದೇಶ. ಚಿತ್ರಕಲೆ—ಸಂಗೀತ—ಕೃಷಿ—ಎಲ್ಲವನ್ನೂ ಅಲ್ಲಿ ಹೇಳುತ್ತಾರೆ. ಆದರೆ ಎಲ್ಲಕ್ಕೂ ಮೊದಲು ಹೇಳಿಕೊಡುವುದು "**ನೀನು ಬಾಳುವುದನ್ನು ಕಲಿ, ಜೀವನದ ಸವಿಯನ್ನು ತಿಳಿ**" ಎಂದು.

೬. **ಉಪಸಂಹಾರ**:—ಕವಿ ರವೀಂದ್ರರ ಹೆಸರು ಎಲ್ಲೆಲ್ಲೂ ಹಬ್ಬಿ ಅವರನ್ನು ಜಗತ್ತಿನ ಪ್ರಮುಖ ದೇಶದವರೆಲ್ಲ ತಮ್ಮಲ್ಲಿಗೆ ಕರೆಯಿಸಿಕೊಂಡಿದ್ದಾರೆ. ಅವರಲ್ಲಿಗೆ ಹೋದಾಗ ಅವರಿಗೆ ತುಂಬಾ ಸತ್ಕಾರ. ಇದೊಂದು ಬಗೆಯಿಂದ ಭಾರತದ ಸತ್ಕಾರವೇ ಸರಿ.

## ೪. ಬಂಕಿಮಚಂದ್ರ.

೧. **ಉಪಕ್ರಮ**:— '**ಬಂಕಿಮಚಂದ್ರ! ಬಂಕಿಮ! ಯಾಕೆ ಬಾಗಿರುವೆ?**' ಎಂದೊಮ್ಮೆ **ರಾಮಕೃಷ್ಣ ಪರಮಹಂಸರು**, ಬಂಕಿಮಚಂದ್ರನು ಅವರೆಡೆಗೆ ಬಂದಾಗ, ಕೇಳಿದರು. 'ದಾಸ್ಯದ ಒದೆತದಿಂದ ಸ್ವಾಮಿ!' ಎಂದನು ಬಂಕಿಮಚಂದ್ರ. **ಪರಮಹಂಸರು** ಮುಗುಳುನಗೆಯಿಂದ ತಮ್ಮ ಅಸಮ್ಮತಿಯನ್ನು ಸೂಚಿಸಿದರು. 'ಅಲ್ಲಯ್ಯಾ! ಹೀಗಲ್ಲ! ನೀನು ಬಾಗಿದುದು ರಾಧೆಯ ಪ್ರೀತಿಯಿಂದ' ಎಂದು ಉಸುರಿದರು.

ನಮ್ಮ ಪುಣ್ಯಭೂಮಿಯ ದಾಸ್ಯದಿಂದ ಎಂಥ ತೀವ್ರತಮವಾದ ಅವಮಾನವೆನಿಸುವುದು ಈ ಮಹನೀಯರಿಗೆ? ಬಂಕಿಮನು **ನವಯುಗದ ಚಂಡೋಲಪಕ್ಷಿ** (Lark); **ದೇಶಭಕ್ತಿಯ ಆದಿಕವಿ**.

೨. **ಜನನ—ಬಾಲ್ಯ**:— ಬಂಕಿಮಚಂದ್ರರು ಕ್ರಿ. ಶ. ೧೮೩೮ ರ ಜೂನ ತಿಂಗಳ ೨೭ನೆಯ ತಾರೀಖಿನ ದಿನ ಜನಿಸಿದರು. ಇವರು ಹುಟ್ಟಿದುದು

'**ಇಪ್ಪತ್ತುನಾಲ್ಕು ಪರಗಣೆ**' ಯಲ್ಲಿಯ ಒಂದು ಕುಲೀನ ಬ್ರಾಹ್ಮಣರ ಕುಲದಲ್ಲಿ. **ಚಟ್ಟೋಪಾಧ್ಯಾಯ** ಎಂಬುದು ಇವರ ಕುಲದ ಹೆಸರು. ಇವರ ತಂದೆಯವರು ಡೆಪ್ಯುಟಿ ಮ್ಯಾಜಿಸ್ಟ್ರೇಟರಿದ್ದರು.

ತಂದೆಯವರು ಬಂಕಿಮರನ್ನು ತೀರ ಚಿಕ್ಕಂದಿನಲ್ಲಿ ಶಾಲೆಗೆ ಕಳುಹಿದರು. ಹಳ್ಳಿಯ ಶಾಲೆಯಲ್ಲಿಯ ಶಿಕ್ಷಣವನ್ನು ಮುಗಿಸಿ, ಬಂಕಿಮರು **ಮಿದನಾಪುರ**ದಲ್ಲಿಯ ಇಂಗ್ಲೀಷು ಶಾಲೆಯನ್ನು ಸೇರಿದರು. ಶಾಲೆಯಲ್ಲಿ ಬಂಕಿಮರ ಜ್ಞಾನ-ಲಾಲಸೆಯ ತೀವ್ರತೆಯು ಸತತವಾಗಿ ಬೆಳೆಯುತ್ತಲಿತ್ತು.

೩. **ಮುಂದಿನ ಶಿಕ್ಷಣ** :—ಮುಂದೆ ಅವರು **ಹುಗಳಿಯ** 'ಕಾಲೇಜ'ದಲ್ಲಿ ಕೆಲಕಾಲ ವ್ಯಾಸಂಗ ಮಾಡಿ, **ಪ್ರೆಸಿಡೆನ್ಸಿ ಕಾಲೇಜನ್ನು** ಸೇರಿದರು. ಅಲ್ಲಿ ಅವರಿಗೆ ಒಂದು ಮೇಲ್ತರಗತಿಯ ಶಿಷ್ಯವೃತ್ತಿಯೂ ದೊರೆಯಿತು. ಕೊನೆಗೆ ಬಿ. ಎ. ಪರೀಕ್ಷೆಯಲ್ಲಿ ಒಂದನೆಯ ತರಗತಿಯಲ್ಲಿ ಅವರು ಉತ್ತೀರ್ಣರಾದರು. ಅದೇ ಕಲಕತ್ತೆಯಲ್ಲಿ ವಿಶ್ವವಿದ್ಯಾಲಯವು ಸ್ಥಾಪನವಾಗಿತ್ತು. ಈ ನೂತನ ವಿದ್ಯಾಲಯದ ಮೊದಲಿನ ಉತ್ತೀರ್ಣ ಪದವೀಧರರಲ್ಲಿ ಒಬ್ಬರಾದುದರಿಂದ ಸರಕಾರದವರು ಡೆಪ್ಯುಟಿ ಮ್ಯಾಜಿಸ್ಟ್ರೇಟರ ಸ್ಥಲವನ್ನು ಕೊಟ್ಟು ಬಂಕಿಮರನ್ನು ಸತ್ಕರಿಸಿದರು.

**ಸರಕಾರದ ಕೆಲಸ** :—ಈ ಅಧಿಕಾರ ಸ್ಥಲದಲ್ಲಿರುವಾಗ ಬಂಕಿಮರ ಸಹಾನುಭೂತಿಯ ವೈಶಾಲ್ಯವೂ, ನಿರ್ಣಯದಲ್ಲಿಯ ಸ್ವತಂತ್ರವೃತ್ತಿಯೂ ಒಡೆದು ಕಾಣುತ್ತಿದ್ದವು. ಅನೇಕ ಜಿಲ್ಹೆಗಳಲ್ಲಿ ಕೆಲಸ ಮಾಡಿ ಇವರು ಜನತೆಯ ಕಲ್ಯಾಣವನ್ನು ಚನ್ನಾಗಿ ಮಾಡಿದರು. ಬಂಕಿಮರ ಯೋಗ್ಯತೆಯು ಬೇಗನೆ ಸರಕಾರದವರ ಮೆಚ್ಚುಗೆಯನ್ನು ಪಡೆಯಿತು. ಮತ್ತು ಇವರು ಬಂಗಾಲ ಸರಕಾರದ ಮುಖ್ಯ ಕಾರ್ಯದರ್ಶಿಗಳಾದರು.

೪. **ಸಾಹಿತ್ಯಸೇವೆ** :—ಇವರ ನಿಜವಾದ ವ್ಯಕ್ತಿತ್ವವು ಅರಳಿದುದು ಇವರ ಕಲಾಪೂರ್ಣ ಗ್ರಂಥಗಳಲ್ಲಿ. '**ದುರ್ಗೇಶ ನಂದಿನಿ**'ಯು ಇವರ ಪ್ರಥಮ ಪ್ರಯತ್ನ. ಈ ಕಾದಂಬರಿಯು ವಂಗಸಾಹಿತ್ಯದಲ್ಲಿ ದೊಡ್ಡ ಕ್ರಾಂತಿಯನ್ನೇ ಎಬ್ಬಿಸಿತು. ಮುಂದಿವರು ಅನೇಕ ಕಾದಂಬರಿಗಳನ್ನು ಬರೆದರು. '**ವಂಗದರ್ಶನ**' ವೆಂಬ ಇವರ ಮಾಸ ಪತ್ರಿಕೆಯು ಇವರ ಕೀರ್ತಿಯನ್ನು ಬಂಗಾಲದ ಮೂಲೆ ಮೂಲೆಗಳಲ್ಲಿ ಪಸರಿಸಿತು. ಆಂಗ್ಲಮುಗ್ಧರಾದ ಬಾಬುಗಳು ವಂಗಭಾಷೆಯನ್ನೋದುವುದರಲ್ಲಿ ಗೌರವವನ್ನು ತಾಳತೊಡಗಿದರು.

ಇಳಿವಯಸ್ಸಿನಲ್ಲಿ ಬಂಕಿಮರ ಮನಸ್ಸು ಧರ್ಮತತ್ವಚಿಂತನಗಳ ಅಭ್ಯಾಸದ ಕಡೆಗೆ ಹೊರಳಿತು. ಇವರು '**ಧರ್ಮತತ್ವ**' '**ಕೃಷ್ಣಚರಿತ್ರೆ**' ಗಳನ್ನು ಬರೆದರು.

೫. **ಅವರ ಮೃತ್ಯು**:—ಮುಂದವರು ಗೀತೆಯ ಹೊಸ ಆವೃತ್ತಿಯೊಂದನ್ನು ಹೊರಡಿಸುವುದರಲ್ಲಿ ತೊಡಗಿದರು. ಅದನ್ನು ಅವರು ಮಾಡುತ್ತಿರುವಾಗಲೇ ಅವರಿಗೆ ಕಾಲನ ಕರೆಯು ಬಂದು ಅವರು ೧೮೯೪ ಎಪ್ರಿಲ ೮ನೆಯ ತಾರೀಖಿನ ದಿನ ಮೃತ್ಯುವಶರಾದರು.

೬. **ಅವರ ಹಿರಿತನ**:— ವಂಗಸಾಹಿತ್ಯ ನಿರ್ಮಾಪಕರಲ್ಲಿ ಇವರ ಸ್ಥಾನವು ಅದ್ವಿತೀಯವಾದುದು. ಇವರ ಸಾಹಿತ್ಯದಲ್ಲಿ ಪೂರ್ವ-ಪಶ್ಚಿಮ ಸಂಸ್ಕೃತಿಗಳ ಮಧುರಮಿಲನವಾಗಿದೆ. ತರುಣ ವಂಗೀಯರ ಬುದ್ಧಿಗೆ ಯೋಗ್ಯ ವಲನವನ್ನು ಕೊಟ್ಟವರಲ್ಲಿ ಇವರು ಅಗ್ರೇಸರರು. '**ವಂದೇ ಮಾತರಮ್**'' ಈ ದಿವ್ಯಮಂತ್ರದ ದ್ರಷ್ಟಾರರು ಭಾರತೀಯರಿಗೆಲ್ಲ ಪ್ರಿಯರಾದುವರಲ್ಲಿ ಏನಾಶ್ಚರ್ಯ ?

## (ii) ಐತಿಹಾಸಿಕ ಪ್ರಸಂಗ.

## ಓಬಿಯ ಪ್ರತಾಪ.

ಚಿತ್ರದುರ್ಗವು ದುರ್ಭೇದ್ಯವಾದ ಗಿರಿದುರ್ಗವಾಗಿತ್ತು. ಹೈದರನು ಎಷ್ಟು ಸಾಹಸಪಟ್ಟರೂ ಅದು ಜಗ್ಗಲೊಲ್ಲದು. ಕೋಟೆಯ ಒಳಕ್ಕೆ ಹೋಗಲು ಎಲ್ಲಿಯೂ ಇಂಬು ದೊರೆಯಲೊಲ್ಲದು. ಬೇಹುಗಾರರು ಗುಟ್ಟಾಗಿ ಸಂದನ್ನು ಹುಡುಕುತ್ತಿರುವಾಗ ಒಂದು ದಿನ ಒಬ್ಬ ಮೊಸರಿನವಳು ಒಂದು ಬಂಡೆಯ ಬಿರುಕಿನಿಂದ ನುಸುಳಿ ಕೋಟೆಯೊಳಗೆ ಹೋದುದನ್ನು ನೋಡಿದರು. ಆ ಜಾಡನ್ನು ಹಿಡಿದುಕೊಂಡು ಹೈದರನ ಸಿಪಾಯಿಗಳು ಕೋಟೆಯಲ್ಲಿ ನುಗ್ಗಲು ಅಣಿಯಾದರು. ಈ ಕಳ್ಳದಾರಿಯು ಬಹಳ ಇಕ್ಕಟ್ಟಿನದಾಗಿದ್ದು, ಅದರಲ್ಲಿ ಒಬ್ಬನೇ ಮನುಷ್ಯನು ಮಲಗಿಕೊಂಡು ಹೊಟ್ಟೆಯನ್ನು ಹೊಸೆಯುತ್ತ ಹೋಗಬೇಕಾಗುತ್ತಿತ್ತು. ಈ ದಾರಿಯ ಆಚೆಯ ಬಾಯಿಯ ಬಳಿಯಲ್ಲಿ ಒಂದು ಸೀನೀರಿನ ಕೊಳವಿತ್ತು.

ಕೋಟೆಯ ಬೆಟ್ಟದ ಅರ್ಧ ದಾರಿಗೆ ಒಂದು ಕಾವಲು ಕಟ್ಟೆಯಿದ್ದಿತು. ಇಲ್ಲಿ ಒಬ್ಬ ಕಹಳೆಯವನು ಯಾವಾಗಲೂ ಕಾಯುತ್ತಿದ್ದನು. ವಿಷಮ ಸಂದರ್ಭವು ಬಂದರೆ ಆತನು ಕಹಳೆಯೂದಿ ಎಚ್ಚರವನ್ನು ಕೊಡತಕ್ಕದ್ದು.

ಹೈದರನ ದಂಡಾಳುಗಳು ಆ ಕಳ್ಳದಾರಿಯನ್ನು ಕಂಡುಹಿಡಿದು, ಒಳನುಗ್ಗು ವುದಕ್ಕೆ ನಸು ಮುಂಚೆ ಈ ಕಹಳೆಯವನು ಹಸಿದು ಊಟಕ್ಕೆಂದು ಬಳಿ ಯಲ್ಲಿಯ ತನ್ನ ಗುಡಿಸಲಿಗೆ ಹೋಗಿದ್ದನು. ಆತನ ಹೆಂಡತಿಯಾದ **'ಓಬಿಯು'** ಆತನಿಗೆ ಉಣಬಡಿಸಿ ನೀರಿಗೆಂದು ಕೊಳಕ್ಕೆ ಬಂದಳು. ಅಷ್ಟರಲ್ಲಿ ಆಕೆಗೆ ಆ ಕಳ್ಳಗಿಂಡಿಯಲ್ಲಿ ಏನೋ ಸಪ್ಪಳವು ಕೇಳಬಂದಿತು. ತುಸು ಹೊತ್ತಿನಲ್ಲಿಯೇ ಅದು ಹಗೆಗಳ ಸುಳಿವು ಎಂಬುದು ಆಕೆಗೆ ಮನವರಿಕೆ ಯಾಯಿತು. ಕೂಡಲೇ ಆಕೆಯು ತನ್ನ ಗುಡಿಸಲಿಗೆ ಓಡಿಹೋಗಿ ಒಂದು ಒನಕೆಯನ್ನು ತೆಗೆದುಕೊಂಡು ಬಂದು ಆ ಗವಿಯ ಬಾಯಿಗೆ ನಿಂತಳು. ಅಷ್ಟರಲ್ಲಿ ಒಂದು ತಲೆಯು ಆ ಕಿಂಡಿಯೊಳಗಿಂದ ಹೊರಕ್ಕೆ ಚಾಚಿತು. ಮರುನಿಮಿಷದಲ್ಲಿ ಓಬಿಯು ಒನಕೆಯ ಹೊಡೆತದಿಂದ ಆ ಸಿಪಾಯಿಯನ್ನು ಕೊಂದು ಎಳೆದು ಹಾಕಿದಳು. ಹೀಗೆ ಸುಮಾರು ಇನ್ನೂರು ದಂಡಾಳುಗಳು ಒಂದೇ ಸವನೆ ಓಬಿಯ ಒನಕೆಗೆ ಆಹುತಿಯಾದರು.

ಇತ್ತ ನೀರಿಗೆಂದು ಹೋದ ಹೆಂಡತಿಯು ಎಷ್ಟು ಹೊತ್ತಾದರೂ ಬರ ಲಿಲ್ಲವೆಂದು ಕರೆಕರೆದು ಬೇಸತ್ತು, ಕೊಂಬಿನವನು ಆಕೆಯನ್ನು ಹುಡುಕುತ್ತ ತನ್ನ ಕಾವಲುಕಟ್ಟೆಯ ಕಡೆಗೆ ಹೊರಟನು. ಅದೇ ದಾರಿಯಲ್ಲಿ ನಡೆಯು ತ್ತಿರುವ ಆ ಘೋರವಾದ ನರಮೇಧವನ್ನು ನೋಡಿ ಬೆರಗಾದನು. ಆಗ ಓಬಿಯು ಮೈಮೇಲೆ ಪ್ರಜ್ಞೆಯಿರಲಿಲ್ಲ. ಹಿಂಸಾಮದವೂ ತಲೆಗೇರಿ, ಪ್ರಳಯ ಕಾಲದ ಕಾಳಿಯಂತೆ ಆಕೆಯ ಆಕಾರವು ಅಕರಾಲ ವಿಕರಾಲವಾಗಿತ್ತು. ಮಂತ್ರಪ್ರೇರಿತವಾದ ಮೂರ್ತಿಯಂತೆ ಆಕೆಯ ಸಂಹಾರ ಸತ್ರವು ಯಂತ್ರ ಗತಿಯಿಂದ ಅವಿರತವಾಗಿ ಸಾಗಿತ್ತು. ಆಕೆಯ ಎಲ್ಲ ಶಕ್ತಿಗಳು ಒಂದೇ ಒಂದಾದ ಖಂಡನ ಕಾರ್ಯದಲ್ಲಿ ಕೇಂದ್ರೀಕೃತವಾಗಿದ್ದವು. ವಿಲಯ ಸಮಾಧಿ ಯಲ್ಲಿ ವಿಲೀನಳಾದ ಆಕೆಯ ಕಣ್ಣಿಗೆ ಒಂದೇ ಒಂದು ರೂಪ ಕಾಣುತ್ತಿತ್ತು. ಅದು ಹಗೆ!

ಓಬಿಯು ಗಂಡನನ್ನು ಗುರುತಿಸಲಿಲ್ಲ. ಆತನು ಆಕೆಯ ಹಗೆಯಾಗಿ ಕಂಡನು. ಆಕೆಯು ಆತನನ್ನು ಹೊಡೆಯ ಹೋದಳು. ಅದನ್ನು ತಪ್ಪಿಸಿ ಕೊಂಡು ಆತನು ತನ್ನ ಕಟ್ಟೆಗೆ ಹೋಗಿ ಕಹಳೆಯನ್ನು ಊದಿದನು. ದುರ್ಗದ ದಂಡಾಳುಗಳು ಅಲ್ಲಿಗೆ ಓಡಿಬಂದರು. ಚಾಮುಂಡಿಯ ಆ ನವೀನ ಅವ ತಾರವನ್ನು ನೋಡಿ ವಿಸ್ಮಿತರಾದರು. ಆ ಹೊತ್ತಿಗೆ ಹೈದರನ ಕೆಲ ಸೈನಿಕರು

ಕೋಟೆಯನ್ನು ಏರಿ ಮೇಲೆ ಬಂದಿದ್ದರು. ಅವರು ತನ್ನ ಪರಾಕ್ರಮದ ಧನ್ಯತೆಯನ್ನು ಬೀರುತ್ತ **ಓಬಿಯು** ಸೀಳಿ ನುಗ್ಗಿ ಆಕೆಯನ್ನು ಕಡಿದು ಹಾಕಿದರು !

ಈ ಪ್ರಸಂಗದಲ್ಲಿ ಹೈದರನಿಗೆ ಜಯ ದೊರೆಯಲಿಲ್ಲ. ಚಿತ್ರದುರ್ಗವು ಆತನಿಗೆ ಕೈವಶವಾಗಲಿಲ್ಲ. **ಓಬಿಯು ಪ್ರತಾಪದ** ಪ್ರಭಾವದ ಮೂಲಕ ಆತನು ಹತಪ್ರಭನಾಗಿ ಹಿಂದಿರುಗಬೇಕಾಯಿತು.

—ದೇ. ಪಾ.

## ಅಭ್ಯಾಸ ೧೧.

ಕೆಳಗಿನ ವಿಷಯಗಳನ್ನು ಕುರಿತು ನಿಬಂಧಗಳನ್ನು ಬರೆಯಿರಿ.

(೧) ೧. ಶ್ರೀ ವಿದ್ಯಾರಣ್ಯರು. ೨. ಶ್ರೀ ಬಸವಣ್ಣನವರು. ೩. ಶ್ರೀ ಮಹಮ್ಮದ ಪೈಗಂಬರರು. ೪. ಶ್ರೀ ಲೋಕಮಾನ್ಯರು. ೫. ಶ್ರೀ ವಿವೇಕಾನಂದರು. ೬. ಶ್ರೀ ಸೀತಾಮಾತೆ. ೭. ಕಿತ್ತೂರ ಚನ್ನಮ್ಮನವರು. ೮. ಶ್ರೀ ಪುರಂದರ ದಾಸರು. ೯. ಲೆಲಿನ್.

(೨) ೧. ರಕ್ಕಸತಂಗಡಿಯ ಕಾಳಗ. ೨. ನರಗುಂದದ ಯುದ್ಧ. ೩. ಮಧುರೆಯ ಮುತ್ತಿಗೆ. ೪. ಎರಡನೆಯ ಪಾನಿಪತ್ತು. ೫. ಅಫಝುಲಖಾನರ ಕೊಲೆ.

# ೫. ಚಿಂತನಪರ.

## ೧. ಅಂದರೇನು ? :—

ಚಿಂತನವೆಂದರೆ ಆಲೋಚನೆ. ಒಂದು ವಿಷಯವನ್ನು ಕುರಿತು ನಾವು ಮಾಡಿದ ಆಲೋಚನೆಗಳನ್ನು ಕ್ರಮವರಿತು ಬರೆದೆವೆಂದರೆ ಅದು ಚಿಂತನಪರ ನಿಬಂಧವಾಗುವುದು. ನಾವು ಯಾವುದೇ ವಿಷಯವನ್ನು ಕುರಿತು ಆಲೋಚಿಸಬಹುದು. ಆ ಆಲೋಚನೆಯ ಹಿಡಿತಕ್ಕೆ ಸಿಲುಕದ ವಿಷಯವೇ ಇಲ್ಲವೆಂದರೂ ಸಲ್ಲುವುದು.

ಎಲ್ಲ ನಿಬಂಧಗಳಲ್ಲಿ ಇದೇ ಪ್ರಧಾನವಾದ ಪ್ರಭೇದ. ಇದನ್ನು ಬರೆಯಲು ನಾವು ನಮ್ಮ ಬುದ್ಧಿ-ಸಂಸ್ಕಾರಗಳನ್ನೇ ಹೆಚ್ಚಾಗಿ ಅವಲಂಬಿಸಬೇಕಾಗಿರುವುದು. ಇಲ್ಲಿ ಬಹಳ ಎಚ್ಚರದಿಂದ ನಾಗಬೇಕಾಗುವುದು. ಏಕೆಂದರೆ ವಿಚಾರದ ಪ್ರವಾಹಕ್ಕೆ ಸಾವಿರ ದಾರಿಗಳು. ಅದು ಒಂದನ್ನು ಬಿಟ್ಟು ಇನ್ನೊಂದನ್ನು ತಿಳಿಯದೆಯೆ ಸೇರಬಹುದು. ಅದಕ್ಕಾಗಿ ನಾವು ಒಮ್ಮೆ

ಪ್ರಾರಂಭಿಸಿದ ರೀತಿಯನ್ನು ಹಾಗೆಯೆ ಕೊನೆಯ ವರೆಗೆ ಸಾಗಿಸಲು ಹೆಚ್ಚಿನ ಏಕಾಗ್ರತೆಯೂ ಜಾಗರೂಕತೆಯೂ ಅತ್ಯವಶ್ಯ.

**೨. ಬರೆವುದೆಂತು ?**

(ಅ) **ಸಾಮಾನ್ಯ ಪರಿಚಯ :—** ಎರಡನೆಯ ಪ್ರಕರಣದಲ್ಲಿಯ **ಸಾಮಾನ್ಯ ಸೂಚನೆಗಳನ್ನು** ಚೆನ್ನಾಗಿ ಪರಿಶೀಲಿಸಿ ತರುವಾಯ, ಕೊಟ್ಟ ವಿಷಯದೆಡೆಗೆ ಹೊರಳಬೇಕು. ಅಲ್ಲಿ ಮೊದಲು **ಪ್ರಧಾನಭಾಗ**ದಲ್ಲಿಯ ವಿವೇಚನೆಯ ಕ್ರಮವನ್ನು ಗೊತ್ತುಮಾಡಿ ಆ ಮೇಲೆ **ಉಪಕ್ರಮ-ಉಪಸಂಹಾರ**ಗಳ ರೀತಿಯನ್ನು ನಿಶ್ಚಯಿಸಬೇಕು.

(೧) **ಪ್ರಧಾನ ಭಾಗ :—**

(೧) ವಿಷಯವನ್ನು ಚೆನ್ನಾಗಿ ಚಿತ್ತದಲ್ಲಿಡಲು ಯತ್ನಿಸಬೇಕು. ಮನಸ್ಸನ್ನು ಅದರ ಸುತ್ತಲು ತಿರುಗಿಸಬೇಕು. ಹೀಗೆ ಕೆಲಕಾಲ ಕಳೆಯಿತೆಂದರೆ ನಿಧಾನವಾಗಿ ವಿಚಾರಗಳು ಮೂಡಲು ಮೊದಲು ಮಾಡುವವು.

(೨) ವಿಷಯವನ್ನು ಕುರಿತು ಕೆಲವು ಪ್ರಶ್ನೆಗಳನ್ನು ಕೇಳಬೇಕು. ಪ್ರಶ್ನೆಗಳನ್ನು ಕೇಳುವಾಗ '**ಏನು ? ಏಕೆ ? ಹೇಗೆ ? ಎಲ್ಲಿ ? ಎಂದು ?**' ಇತ್ಯಾದಿಗಳನ್ನು ಪ್ರಯೋಗಿಸಬಹುದು. ಪ್ರಶ್ನೆಗಳನ್ನು ಒಂದು ಹಾಳೆಯ ಮೇಲೆ ಬರೆದಿಡಬೇಕು.

(೩) ತರುವಾಯ ಅವುಗಳಲ್ಲಿ ಪ್ರಧಾನವಾದವುಗಳನ್ನು ಆಯ್ದು ಅವಕ್ಕೆ ದೊರೆತ ಉತ್ತರಗಳ ಅಂಶಗಳನ್ನು ಒಂದು ಸರಿಯಾದ ಕ್ರಮದಿಂದ ಬರೆದಿಡಬೇಕು. ಇವೇ ವಿಚಾರದ **ಅಂಶಗಳು** (Points). ಇವನ್ನು ಬೆಳೆಯಿಸಿಯೆ ನಿಬಂಧವನ್ನು ಬರೆಯತಕ್ಕದ್ದು.

(೪) ಮೇಲಿನ **ಅಂಶಗಳಲ್ಲಿ** ಕೆಲ ವಿವರಗಳನ್ನು ತುಂಬಿ ನಿಬಂಧದ **ರೂಪರೇಖೆಯನ್ನು** (Ontline) ಸಿದ್ಧಪಡಿಸಬೇಕು. ತರುವಾಯ ಮುಂದೆ ಕಾಣಿಸಿದ ಸೂಚನೆಗಳ ಮೇರೆಗೆ ಉಪಕ್ರಮ ಉಪಸಂಹಾರಗಳನ್ನು ಸಿದ್ಧಪಡಿಸಿ ಪ್ರತ್ಯಕ್ಷ ಬರಹವನ್ನು ಪ್ರಾರಂಭಿಸಬೇಕು. **ರೂಪರೇಖೆಯಿಲ್ಲದ ಬರಹವು ಕತ್ತಲೆಯಲ್ಲಿಯ ಅಲೆದಾಟ.** ದಾರಿಯೂ ಕಾಣುವಂತಿಲ್ಲ ; ಗುರಿಯೂ ಸಿಗುವಂತಿಲ್ಲ.

(೫) ವಿಷಯ ವಿವೇಚನೆಯಲ್ಲಿ ನಿಮ್ಮ ವ್ಯಕ್ತಿತ್ವವು ಹೊರಹೊಮ್ಮಬೇಕು. ಸ್ವಂತ ಆಲೋಚನೆಗಳ ಆವಿಷ್ಕರಣವಾಗಬೇಕು. ವಿಷಯದ

ಒಂದಂಗವನ್ನು ವಿವರಿಸಿದರೆ ನಡೆಯುಬಹುದು. ಎಲ್ಲವನ್ನೂ ಪೂರ್ತಿಯಾಗಿ ಬರೆಯಲೇ ಬೇಕೆಂತಲ್ಲ.

(೨) **ಉಪಕ್ರಮ:**—ನಿಬಂಧವನ್ನು ಹೇಗೆ **ಪ್ರಾರಂಭಿಸಬೇಕೆಂಬುದೇ ತಿಳಿಯುವುದಿಲ್ಲವೆಂದು ವಿದ್ಯಾರ್ಥಿಗಳನೇಕರು ಗುಣುಗುಟ್ಟುವುದುಂಟು.** ಸರಿ. ಅದು ಸ್ವಲ್ಪ ಬಿಗಿಯಾದುದಿರುವುದು ನಿಜ. ಆದರೆ ಅದರಿಂದ ತೀರ ಬೆಚ್ಚಿ ಬೀಳುವ ಕಾರಣವಿಲ್ಲ. ಇಲ್ಲಿ ನುರಿತ ಬರಹಗಾರರ ಮಾದರಿಗಳನ್ನನುಕರಿಸುವುದು ರಾಜಮಾರ್ಗ. ಹಿಂದಿನ ಅಧ್ಯಾಯದಲ್ಲಿಯ ಸೂಚನೆಗಳು ಈ ವಿಷಯದ ಮೇಲೆ ಕೆಲಮಟ್ಟಿಗೆ ಬೆಳಕನ್ನು ಚೆಲ್ಲುವವು. ಆದರೆ ಅವುಗಳನ್ನೆಯೆ ಪೂರ್ತಿಯಾಗಿ ನಂಬಬಾರದು. ವೈಯಕ್ತಿಕ ನವನಿರ್ಮಿತಿಗೆ ಎಲ್ಲೆಡೆಯಂತೆ ಇಲ್ಲಿಯೂ ಪೂರ್ಣ ಎಡೆಯಿರುವುದು. ಅದು **ಚಿತ್ತಾಕರ್ಷಕವಾಗಬೇಕೆಂಬ** ಗುರಿಯನ್ನಷ್ಟು ಮರೆಯದೆ ಪ್ರಸಂಗಕ್ಕೆ ತಕ್ಕ ಮಾತಿನಿಂದ ನಿಬಂಧವನ್ನು ಪ್ರಾರಂಭಿಸಬೇಕು.

(೩) **ಉಪಸಂಹಾರ:**—ಉಪಕ್ರಮದ ವಿಷಯವಾಗಿ ಹೇಳಿದ ಎಲ್ಲ ಸಂಗತಿಗಳೂ ಉಪಸಂಹಾರಕ್ಕೂ ಅನ್ವಯಿಸುವವು. ಹಿಂದೆ ಹೇಳಿದಂತೆ (೧) ಸಾರಾಂಶದಿಂದಲೂ (೨) ವಿಷಯಕ್ಕೆ ಪೋಷಕವಾದ ಅವತರಣದಿಂದಲೂ (೩) ಸ್ವಂತ ಅಭಿಪ್ರಾಯದಿಂದಲೂ ನಿಬಂಧವನ್ನು ಕೊನೆಗಾಣಿಸಬೇಕು. **ಚಮತ್ಕೃತಿಯು ಉಪಕ್ರಮದಂತೆ ಉಪಸಂಹಾರದ ತಿರುಳಾದ್ದರಿಂದ** ಅದನ್ನು ಯಾವ ಹೊಸ ರೀತಿಯಿಂದ ಉಂಟುಮಾಡಿದರೂ ಸರಿಯೆ! ಸೊಬಗನ್ನು ಕಟ್ಟಿನಲ್ಲಿಡುವವರಾರು? ಅದು ತನ್ನದೇ ಆದ ರೀತಿಯಿಂದ ಸ್ವತಂತ್ರವಾಗಿ ಮೆರೆಯುವುದು, ಮೆರೆಯಲು ಬೇಕು. ಅದರಲ್ಲಿಯೇ ಚೆಲುವಿನ ಜೀವಾಳ!

(ಆ) **ವಿಶೇಷ ಪರಿಚಯ:**—(೧) ಮುಂದೆ ಕೆಲವು ಮಾದರಿಯ ನಿಬಂಧಗಳ ರೂಪರೇಷೆಗಳನ್ನು ಕೊಟ್ಟಿರುವೆವು. ಕೆಲವನ್ನು ನಾವು ಬರೆದಿರುವೆವು. ಕೆಲವನ್ನು ನಮ್ಮ ನಾಡಿನಲ್ಲಿಯ ನುರಿತ ಸಾಹಿತಿಗಳಿಂದ ಆಯ್ದಿರುವೆವು. ಅವನ್ನು ದಕ್ಷತೆಯಿಂದ ಪರಿಶೀಲಿಸಿ, ವಿದ್ಯಾರ್ಥಿಗಳು ಈ ಕಲೆಯನ್ನು ಅರಿತುಕೊಳ್ಳಬಹುದು.

(೨) ಇನ್ನೊಂದು ಮಾತು. ಒಂದೆರಡು ನಿಬಂಧಗಳ ನಿರೀಕ್ಷಣೆಯಾದ ಮೇಲೆ, ವಿದ್ಯಾರ್ಥಿಗಳು ಮೊದಲು ಬರಿಯ ವಿಷಯವನ್ನಷ್ಟೇ ತಿಳಿದುಕೊಂಡು

ತಾವು ಸ್ವತಃ ಅದರ ಮುಖ್ಯಾಂಶಗಳನ್ನು ಕಂಡುಹಿಡಿದು ತಮ್ಮ ರೂಪರೇಷೆಯನ್ನು ಸಿದ್ಧಪಡಿಸಬೇಕು.

(೩) ತರುವಾಯ ಅದನ್ನು ಈ ಗ್ರಂಥದಲ್ಲಿಯ ರೂಪರೇಷೆಯೊಡನೆ ಸರಿಹೋಲಿಸಿ ಅದರಲ್ಲಿ ಉಚಿತವಾದ ಮಾರ್ಪಾಟುಗಳನ್ನು ಮಾಡಿಕೊಳ್ಳಬೇಕು. ಆ ಮೇಲೆ ತಾವೇ ನಿಬಂಧವನ್ನು ಬರೆದು, ಅದನ್ನು ಇಲ್ಲಿಯ ನಿಬಂಧದೊಡನೆ ಹೋಲಿಸಿ ಮರಳಿ ತಮ್ಮದನ್ನು ಅವಶ್ಯವಿದ್ದಲ್ಲಿ ತಿದ್ದಿಕೊಳ್ಳಬೇಕು.

(೪) ಕೊನೆಗೆ ಶುದ್ಧಪ್ರತಿಯನ್ನು ಮಾಡಿ, ತಿದ್ದುಪಾಟಿಗಾಗಿ ಗುರುಗಳಿಗೆ ಸಲ್ಲಿಸಬೇಕು. ಈ ಕ್ರಮವು ವಿದ್ಯಾರ್ಥಿಗಳಿಗೆ ಉಪಕಾರಕವಾಗದಿರದೆಂದು ನಮ್ಮ ನಂಬುಗೆ.

## ೩. ಮಾದರಿಯ ನಿಬಂಧಗಳು (ರೂಪರೇಷೆ ಸಹಿತ) :—

## ೧ ನೆಯ ಗುಂಪು—ಗುಣಗಳು.

### ೧. ಸತ್ಯ.

೧. **ಉಪಕ್ರಮ:**—ನಹಿ ಸತ್ಯಾತ್ ಪರೋ ಧರ್ಮಃ। ಧರ್ಮ ಪ್ರಧಾನಾಂಗ.

೨. **ಎಂದರೇನು ?:**— ಮೂರರ್ಥಗಳು :— (೧) ಸನಾತನವಾದ ಸಂಗತಿ, ಮತಿ-ಮಾತು-ಕೃತಿಯಲ್ಲಿ ಸಾಮ್ಯ, (೩) ಭೂತಹಿತ.

೩. **ಮಹಿಮೆ:**—ಸತ್ಯವೇ ಎಲ್ಲದರ ಆಧಾರ. ಅಸತ್ಯಕ್ಕೂ ಕೂಡ. ಅದಿಲ್ಲದೆ ಜಗದ ಆಟವೇ ಸಾಗದು— ಸತ್ಯಮೇವ ಜಯತೆ! ಅದಕ್ಕೆ ಸೋಲಿಲ್ಲ, ಸಾವಿಲ್ಲ. ಉದಾಹರಣೆಗಳು.

**ಉಪಸಂಹಾರ:**—ಸತ್ಯವು ಕಹಿಯಾಗಿದೆ—ಸಿಹಿಯಾಗಿಲ್ಲ. ಜನರು ಅದನ್ನು ಒಲ್ಲರು—ಪ್ರಿಯವಾದ ಸತ್ಯವನ್ನು ಆಡಬೇಕು.

### ಸತ್ಯ.

೧. **ಉಪಕ್ರಮ:— 'ಸತ್ಯವೇ ಪರಮಧರ್ಮ! ಅದನ್ನು ಮೀರುವ ಧರ್ಮವಿಲ್ಲ'** ಎಂದು ಹಿಂದಿನ ಹಿರಿಯರು ಸಾರಿರುವರು. ಇದು ಸುಮ್ಮನೆ ಉಸುರಿದ ಜೊಳ್ಳು ಮಾತಲ್ಲ. ಆಳವಾದ ಆಲೋಚನೆಯಿಂದ, ದೀರ್ಘಕಾಲದ ಅನುಭವದಿಂದ ಸಿದ್ಧವಾದ ನಂಬಿಕೆಯು ನುಡಿಯಿದು.

೨. **ಎಂದರೇನು ?:**—ಸತ್ಯವೆಂಬ ಶಬ್ದವು ರೂಢಿಯಲ್ಲಿ ಮೂರರ್ಥಗಳನ್ನು ತಾಳಿರುವುದು. (೧) ಸತ್ಯವೆಂದರೆ ಸನಾತನ ವಸ್ತು. ಅಂದೂ—

ಇಂದೂ—ಮುಂದೂ—ಎಂದೆಂದೂ ಯಾವುದು ಒಂದೇ ರೀತಿಯಾಗಿ ಇರುವುದೋ ಅದೇ ಸತ್ಯ. ಇದು ಸತ್ಯದ **ವಸ್ತುಗತವಾದ** (Objective) ಅರ್ಥವು. (೨) ಮತಿ—ಮಾತು—ಕೃತಿಗಳಲ್ಲಿಯ ಸಾಮ್ಯವು ಇದರ ಎರಡನೆಯ ಅರ್ಥ. ಇದು **ವ್ಯಕ್ತಿಗತವಾದುದು** (Subjective). ಇದೂ ಮೊದಲನೆಯ ಅರ್ಥದಿಂದಲೇ ಹೊರಟಿರುವುದು. ಸತ್ಯದ ಸನಾತನಸತ್ವವು ವ್ಯಕ್ತಿಯ ಮೂರು ಅವಸ್ಥೆಗಳಲ್ಲಿ ಹೇಗೆ ಉಳಿಯುವುದೆಂಬುದನ್ನು ಈ ಸಾಮ್ಯವು ತೋರಿಸುವುದು. (೩) ಪ್ರಾಣಿಗಳ ಆತ್ಯಂತಿಕ ಹಿತವನ್ನು ಸಾಧಿಸುವುದೆ ಸತ್ಯವೆಂದು, ಸತ್ಯಕ್ಕೆ ಇನ್ನೊಂದು ಅರ್ಥವನ್ನು ಮಹನೀಯರು ಕಲ್ಪಿಸಿರುವರು. ಇದು **ಪರಿಣಾಮದ ದೃಷ್ಟಿಯಿಂದ** ಸೂಚಿತವಾದ ಸತ್ಯದ ಲಕ್ಷಣವು.

೩. **ಮಹಿಮೆ :**—ಒಂದರ್ಥದಿಂದ ಸತ್ಯವು ಇಡೀ ವಿಶ್ವದ ಆಧಾರ. ವಿಶ್ವದಲ್ಲಿ ಅಚ್ಚಳಿಯದೆ ಉಳಿಯುವ ವಸ್ತುವೇ ಅದು. ಉಳಿದುದೆಲ್ಲ ಅಳಿಯುವುದು ; ಬದಲಾಗುವುದು. ಸತ್ಯವೂ ಅಳಿಯಿತೆಂದರೆ ವಿಶ್ವವು ಉಳಿಯುವ ಬಗೆ ಹೇಗೆ ? ಇನ್ನೊಂದರ್ಥದಿಂದ ಸತ್ಯವು ಸಮಾಜ ವ್ಯವಹಾರದ ಆಧಾರ. ನಮ್ಮ ವ್ಯವಹಾರವೆಲ್ಲ ಸತ್ಯವನ್ನೇ ಆಶ್ರಯಿಸಿದೆ. ಅದರ ನೆರವಿಲ್ಲದಿದ್ದರೆ ಇದೆಲ್ಲ ಇದ್ದಲ್ಲಿಯೇ ನಿಲ್ಲುವುದು. ಸತ್ಯದ ಬೆಂಬಲವಿಲ್ಲದಿದ್ದರೆ ಅಸತ್ಯದ ಆಟವೂ ಸಾಗುವಂತಿಲ್ಲ. ಬೇರೆಯವರ ಪಾಡೇನು ?

**ಸತ್ಯಮೇವ ಜಯತೆ !** ಸತ್ಯಕ್ಕೆ ಸೋಲಿಲ್ಲ—ಸಾವಿಲ್ಲ ! ವ್ಯವಹಾರದಲ್ಲಿ ಅದಕ್ಕೆ ತಾತ್ಕಾಲಿಕವಾಗಿ ಸೋಲು ಬಂದಂತೆ ಕಂಡರೂ, ಕೊನೆಗೆ ಅದು ಗೆಲ್ಲಲೇ ಬೇಕು. ಏಕೆಂದರೆ **ಶಾಶ್ವತವಾಗಿರುವುದೇ ಅದರ ಸ್ವಭಾವ.** ದೂರದೃಷ್ಟಿಯಿಲ್ಲದವರಿಗೆ ಅದು ಬೇಗ ಕಾಣದ್ದರಿಂದ ಅವರು ಸತ್ಯದ ಈ ಸಾಮರ್ಥ್ಯದಲ್ಲಿ ಅಪನಂಬಿಕೆಯನ್ನಿಟ್ಟು, ಅಸತ್ಯವನ್ನು ಪೂಜಿಸುವುದುಂಟು. ಆದರೆ ಕೊನೆಗೆ ದಿಟವೇ ದಿಟವಾಗಿ ನಿಲ್ಲುವುದು. ಸಟೆಯು ಎಂದೆಂದಿಗೂ ಸಟೆಯೇ—ಸುಳ್ಳೇ !

ಸತ್ಯದ ಈ ಸಾಮರ್ಥ್ಯದಲ್ಲಿ ನಂಬಿಕೆಯಿಲ್ಲದ ಕೆಲವರು ಸತ್ಯದ ಮೂರನೆಯ ಅರ್ಥಕ್ಕೆ ತಮಗೆ ಅನುಕೂಲವಾದ ಇನ್ನೊಂದು ಬಗೆಯಾಗಿ ಭಾಷ್ಯವನ್ನು ಮಾಡುವುದುಂಟು. ಜನರಿಗೆ ಹಿತವಾದುದು ಸತ್ಯ, ಅಹಿತವಾದುದು ಅಸತ್ಯ, ಎಂದು ಅವರ ಮತ. ಸತ್ಯವಲ್ಲಿಯ ಆತ್ಯಂತಿಕ ಹಿತ

ವಿದೆ ಎಂಬುದನ್ನು ಮರೆತ ಲಕ್ಷಣವಿದು. ಸಟಿಯಾದುದು ಕೆಲಕಾಲ ಹಿತವಾದಂತೆ ತೋರಿದರೂ ಅದೆಂದಿಗೂ ನಮ್ಮ ಆತ್ಯಂತಿಕ ಹಿತವನ್ನು, ಕಲ್ಯಾಣವನ್ನು ಸಾಧಿಸಲರಿಯದು. ಅದುದರಿಂದ ಸತ್ಯ-ಹಿತಗಳಲ್ಲಿ ಭೇದವನ್ನು ಕಲ್ಪಿಸುವುದು ಒಳಿತಲ್ಲ. **ಸತ್ಯವೇ ಹಿತವು-ಹಿತವೇ ಸತ್ಯವು, ಇದೇ ನಿಜ.**

೪. **ಉಪಸಂಹಾರ :**— ಆದರೆ ಮದವುಳ್ಳ ಮನುಜರಿಗೆ ಸತ್ಯವು ಕಹಿಯಾಗಿದೆ-ಸಿಹಿಯಾಗಿಲ್ಲ. ಜನರದನ್ನು ಎದುರಿಸಲು, ಸ್ವೀಕರಿಸಲು ಒಲ್ಲರು. ಅವರಿಗೆ ಪ್ರಿಯವು ಸತ್ಯಕ್ಕಿಂತ ಹೆಚ್ಚು ಸೇರುವುದು. ಅದಕ್ಕಾಗಿಯೆ ಹಿರಿಯರು '**ಪ್ರಿಯವಾದ ಸತ್ಯವನ್ನುಸುರು**' ಎಂದು ಹೇಳಿರುವರು.

## ೨. ಪ್ರೇಮ.

೧. **ಉಪಕ್ರಮ :**— 'ಪ್ರೇಮವೇ ಜೀವನ; ದ್ವೇಷವೇ ಮರಣ' ಆಂಗ್ಲ ಒಕ್ಕಣಿ. ಜಗವು ಜೀವಿಸುವುದು ಪ್ರೇಮದಿಂದ.

೨. **ಎಂದರೇನು ? :**—ಅನ್ಯರಲ್ಲಿ ತನ್ನತನವನ್ನು ಕಾಣುವ ಭಾವನೆಯು.

೩. **ಮಹಿಮೆ :**—ಅದು ಕುಲವನ್ನು-ಸಮಾಜವನ್ನು-ಜನಾಂಗವನ್ನು ಕಟ್ಟುವುದು. ಮಾನವ ಜೀವನವನ್ನು ಮೀರಿ, ಮಾನವನನ್ನು ವಿಶ್ವದೊಡನೆ ಬೆರೆಯಲು ಕಲಿಸುವುದು. ಅದರಿಂದಲೇ ಜೀವನದಲ್ಲಿ ರಸ-ಆನಂದ. ಅದು ಕಲ್ಲೆದೆಯನ್ನು ಕರಗಿಸಬಹುದು.

೪. **ಬಗೆಗಳು :**—ಅನಂತ ಬಗೆಗಳು - ರೂಪಗಳು - ಮಗುವಿನಲ್ಲಿ ಮಮತೆ, ತಾಯಿಯಲ್ಲಿ ವಾತ್ಸಲ್ಯ, ಮಡದಿಯಲ್ಲಿ ಕಾಮ, ಹಿರಿಯರಲ್ಲಿ ಸಲಿಗೆ, ದೇವರಲ್ಲಿ ಕರುಣ, ಇ.

೫. **ಉಪಸಂಹಾರ :**—ಅನ್ಯರ ಅಂತರಂಗದ ಕದವನ್ನು ತೆರೆಯುವ ಹೊನ್ನಿನ ಹಿಡಿಕೆ ಅದು.

## ಪ್ರೇಮ

೧. **ಉಪಕ್ರಮ :**—'ಸತ್ಯವು' ಜಗದ ಆಧಾರವಿದ್ದಂತೆ 'ಪ್ರೇಮ'ವು ಅದರ ಬಂಧನವಾಗಿದೆ. ಸತ್ಯದ ತಳಹದಿಯ ಮೇಲೆ ಸ್ಥಿರವಾಗಿ ನೆಲಸಿದ ಜಗತ್ತನ್ನು 'ಪ್ರೇಮವು' ದೃಢವಾಗಿ ಬಿಗಿಯುವುದು. ಈ ರೇಶಿಮೆಯ ದಾರವಿಲ್ಲದಿದ್ದರೆ ಜಗ-ಜಗಗಳ ಮಾಲೆಯು ಚದರಿಹೋಗುತ್ತಿತ್ತು.

೨. **ಎಂದರೇನು ?** :—ಪ್ರೇಮವು ಸತ್ಯದಲ್ಲಿಯ ಆಕರ್ಷಣ. ಸತ್ಯದ ಅಂಶಗಳಿದ್ದಲ್ಲೆಲ್ಲ ಪ್ರೇಮವು ಇದ್ದೇ ತೀರುವುದು. ಪ್ರತಿಯೊಂದು ಜೀವಿಯಲ್ಲಿ ಸತ್ಯವಿದೆ-ಆದುದರಿಂದ ಅಲ್ಲಿ ಪ್ರೀತಿಯು ಇದೆ. **ಜೀವಿಗಳ ಎದೆಯಲ್ಲಿ**

**ಒಲವಿನ ಸೆಲೆಯಿದೆ.** ಅಲ್ಲಿಂದ ಹೊರಹೊಮ್ಮಿದ ಪ್ರೀತಿಯ ಪ್ರವಾಹವು ಅವನ್ನೆಲ್ಲ ಒಂದುಗೂಡಿಸಿ ಸಂತಸದ ಕಡಲಿನೆಡೆಗೆ ಸೆಳೆದೊಯ್ಯುವುದು. ಆದುದರಿಂದಲೇ ಪ್ರೀತಿಯು ಸಂತಸವನ್ನೀಯುವ ಸೆಲೆ; **‘ಅನ್ಯರಲ್ಲಿ ತನ್ನತನವನ್ನು ಕಂಡು ಎಲ್ಲರನ್ನೂ ಒಂದಾಗಿರಿಸುವ ಭಾವನೆಯ ಉಕ್ಕು.’**

೩. **ಬಗೆಗಳು:**—ಜೀವಿ ಜೀವಿಗಳ ಸಂಬಂಧವು ಬೇರೆಬೇರೆಯಾದುದರಿಂದ ಆಯಾ ಸ್ಥಲದಲ್ಲಿ ವ್ಯಕ್ತವಾದ ಪ್ರೇಮಕ್ಕೆ ಬೇರೆ ಬೇರೆ ಹೆಸರುಗಳು ಬಂದಿವೆ. ತಾಯಿಯಲ್ಲಿ ವಾತ್ಸಲ್ಯ, ಮಗುವಿನಲ್ಲಿ ಮಮತೆ, ನಲ್ಲ–ನಲ್ಲೆಯರಲ್ಲಿ ಕಾಮ; ಕಿರಿಯರಲ್ಲಿ ಆದರ; ಹಿರಿಯರಲ್ಲಿ ಸಲಿಗೆ; ದೇವರಲ್ಲಿ ಕರುಣ; ಭಕ್ತರಲ್ಲಿ ಭಕ್ತಿ; ಇತ್ಯಾದಿ ರೂಪಗಳನ್ನು ತಾಳಿ ಪ್ರೇಮವು ತನ್ನ ಕಾರ್ಯವನ್ನು ನೆರವೇರಿಸುವುದುಂಟು. ಇವು ತೋರಿಕೆಗೆ ಬೇರೆಯೆಂದೆನಿಸಿದರೂ ನಿಜವಾಗಿಯೂ ಒಂದೇ.

ಎಷ್ಟೋ ಸಲ ಪ್ರೇಮವು ಮೋಹವಾಗಿ ಪರಿಣಮಿಸುವುದು. ಆಗ ನಮ್ಮಲ್ಲಿಯ ವಿವೇಕವು ಅಳಿದು ನಮ್ಮ ಪ್ರೀತಿಯ ವ್ಯಕ್ತಿಯು ಆಡಿದ್ದೆಲ್ಲ ಆನಂದದಾಯಕವು; ಮಾಡಿದ್ದೆಲ್ಲ ಮೋದಪ್ರದವು. ಆದುದರಿಂದ **ಆತ್ಮನ ವಿಷಯಕ ಆಕರ್ಷಣವು ಪ್ರೇಮ; ದೇಹವಿಷಯಕವಾದುದು ಮೋಹ** ಎಂಬುದನ್ನು ಮರೆಯಬಾರದು.

೪. **ಮಹತ್ವ:**—ಪ್ರೇಮವು ಕುಟುಂಬವನ್ನು ಕಟ್ಟುವುದು; ಸಮಾಜವನ್ನು ನಿರ್ಮಿಸುವುದು; ಇಡೀ ವಿಶ್ವವನ್ನೇ ಬಿಗಿಯುವುದು. ಈ ಪ್ರೇಮವೆ ಹೆರೆಯಿರದಿದ್ದರೆ ನಮ್ಮ ಸಮಾಜರಥವು ಸುಖವಾಗಿ ಸಾಗುತ್ತಲೇ ಇರಲಿಲ್ಲ. ಪ್ರಗತಿಯಲ್ಲಿಯ ತಿಕ್ಕಾಟದಿಂದ ಉಂಟಾಗುವ ಬೇಗೆಯು ಅದನ್ನೆಂದೋ ಸುಟ್ಟುಬಿಡುತ್ತಿತ್ತು. **‘ಕೆಂಪಾದ ಹಲ್ಲು ಉಗುರುಗಳುಳ್ಳ ಕಾಲವು’** (Red in tooth and claws) ಎಲ್ಲವನ್ನು ತುತ್ತಿ ಮುಂದಿನ ಜೀವನವನ್ನೆ ನಿಲ್ಲಿಸಿಬಿಡುತ್ತಿತ್ತು.

ಪ್ರೇಮವು ‘ತನ್ನಂತೆ ಪರರನ್ನು’ ಕಾಣಲು ಕಲಿಸುವುದು. ಅದರ ಪ್ರಭಾವದಿಂದಲೇ ನಾವು ಅನ್ಯರ ಸುಖದಲ್ಲಿ ನಮ್ಮ ಸುಖವನ್ನು, ಅನ್ಯರ ದುಃಖದಲ್ಲಿ ನಮ್ಮ ದುಃಖವನ್ನು ಕಾಣುವೆವು. ಅವರು ನಗುವಾಗ ನಗುವೆವು; ಅಳುವಾಗ ಅಳುವೆವು. ಈ ಸಹಾನುಭೂತಿಯು ಮಾನವನನ್ನು

ಅಮಾನವ ಸ್ಥಿತಿಯಿಂದ ಮೇಲಕ್ಕೆತ್ತಿ, ಅವನಿಗೆ ಅತಿಮಾನವನ ಗುರಿಯನ್ನು ಕಾಣುವ ಯೋಗ್ಯತೆಯನ್ನು ದಯಪಾಲಿಸುವುದು. ಅದರಿಂದಲೇ ಮಾನವನ ವಿಕಾಸ; ಅದರಲ್ಲಿಯೆ ಮಾನವನ ಮೇಲ್ಮೆ.

೫. **ಉಪಸಂಹಾರ:—** ಪ್ರೇಮವು ಅನ್ಯರ ಅಂತರಂಗವನ್ನು ತೆರೆದು, ಅವರೊಡನೆ ಬೆರೆಯಲು ಅನುಕೂಲತೆಯನ್ನು ಒದಗಿಸುವ ಹೊನ್ನಿನ ಹಿಡಿಯೇ ಸರಿ!

## ೩. ಸಂಯಮ.

೧. **ಉಪಕ್ರಮ:—**ಉಗಿಯ ಸಾಮರ್ಥ್ಯದ ರಹಸ್ಯವೇನು? ತೀರ ಸಂಕುಚಿತ ಸ್ಥಲದಲ್ಲಿ ಒತ್ತಿ ಇಡುವುದು.

೨. **ಎಂದರೇನು?:—**ಬಿಗಿಹಿಡಿಯುವುದು. ಇಂದ್ರಿಯಗಳನ್ನು ಮನಸ್ಸಿನಿಂದ, ಮನಸ್ಸನ್ನು ವಿವೇಕದಿಂದ.

೩. **ಮಹತ್ವ:—**ಇದರಿಂದ ನಮ್ಮ ಶಕ್ತಿಯು ಬೆಳೆಯುವುದು. ಮನವನ್ನು ಗೆದ್ದವರು ಜನರನ್ನು ಸಹಜವಾಗಿ ಗೆಲ್ಲುವರು. 'ಜಿತಂ ಜಗತ್ ಕೇನ? ಮನೋಹಿ ಯೇನ.' **ಸಂಯಮವಿಲ್ಲದೆ ಸಾಮರ್ಥ್ಯವಿಲ್ಲ.**

೪. **ಉಪಸಂಹಾರ:—**ಅದೇ ಕಸುವಿನ ಕುಲಿಮೆ. ಸಾಮರ್ಥ್ಯದ ಸೆಲೆ.

## ಸಂಯಮ.

೧. **ಉಪಕ್ರಮ:—**ಉಗಿಯ ಸಾಮರ್ಥ್ಯವನ್ನರಿಯದ ಮಾನವ ನಿಲ್ಲ. ಇಂದದು ಎಲ್ಲ ಕ್ಷೇತ್ರಗಳಲ್ಲಿ ತನ್ನ ಶಕ್ತಿಯನ್ನು ತೋರಲಿದೆ. ಅದಕ್ಕೆ ಇಷ್ಟು ಬಲವು ಹೇಗೆ ಬಂದಿರುವುದು? ಅದರ ಪ್ರಚಂಡ ಸಾಮರ್ಥ್ಯದ ಸೆಲೆಯೆಲ್ಲಿ? ಸಂಗ್ರಹದಲ್ಲಿ ಅಲ್ಲವೇ? ಸಂಯಮದಲ್ಲಿ ಅಲ್ಲವೇ?

೨. **ಎಂದರೇನು?:—** ಸಂಯಮವೆಂದರೆ ಬಿಗಿಹಿಡಿಯುವುದು. ನಮ್ಮ ಇಂದ್ರಿಯಗಳನ್ನು ಮನಸ್ಸಿನಿಂದಲೂ, ಮನಸ್ಸನ್ನು ವಿವೇಕದಿಂದಲೂ ಬಿಗಿಹಿಡಿಯುವುದೇ **ಆತ್ಮಸಂಯಮವು**. ಧನವನ್ನು ಬಳಸದೆ ಗಳಿಸಿಡುವುದು **ಧನಸಂಯಮವು.** ಅದೇ ಮೇರೆಗೆ ಬೇರೆ ಶಕ್ತಿಗಳನ್ನು ಸಂಗ್ರಹಿಸುವುದು ಆಯಾ ಶಕ್ತಿಗಳ ಸಂಯಮವೇ ಸರಿ.

೩. **ಏಕೆ?:—**ಈ ಮೇರೆಗೆ ನಮ್ಮ ಶಕ್ತಿಗಳನ್ನೆಲ್ಲ ಅತ್ತಿತ್ತ ಹರಿಯಗೊಡದೆ, ಹಿಡಿತದಲ್ಲಿಟ್ಟೆವೆಂದರೆ ಅವುಗಳ ಸಾಮರ್ಥ್ಯವು ಮಿತಿಮೀರಿ ಬೆಳೆಯುವುದು. ವಿಷಯಸುಖವನ್ನು ಸ್ವೈರವಾಗಿ ಉಪಭೋಗಿಸುವ ಇಂದ್ರಿಯಗಳು ಬೇಗನೆ ಬಲಗುಂದುವುವು. ವಿವೇಕದ ನಿಯಂತ್ರಣವನ್ನು ತಪ್ಪಿಸಿ

ಮಂಗನಂತೆ ಕುಣಿದಾಡುವ ಮನಸ್ಸಿನಲ್ಲಿ ಯಾವ ಸತ್ಯವನ್ನೂ ಅರಿಯುವ ಶಕ್ತಿಯಿರುವುದಿಲ್ಲ. ಮಿತಿಯನ್ನರಿಯದೆ ಅತಿಯಾಗಿ ವೆಚ್ಚ ಮಾಡುವವನ ಭಂಡಾರವು ಕೆಲಕಾಲದಲ್ಲಿಯೇ ಬರಿದಾಗುವುದು. ಅವನು ಬಡತನದ ಬಲೆಗೆ ಈಡಾಗುವನು. ಉಳಿದ ಶಕ್ತಿಗಳದೂ ಇದೇ ಪಾಡು.

ಯಂತ್ರದಲ್ಲಿ ಸಂಯತವಾದ ಉಗಿಯು ಪ್ರಚಂಡವಾದ ಹಡಗುಗಳನ್ನು ಸೆಳೆಯಬಲ್ಲದು. ಸುರಂಗದಲ್ಲಿ ಸಂಗ್ರಹಿತವಾದ ಮದ್ದು ದೊಡ್ಡ ಬೆಟ್ಟಗಳನ್ನು ಒಡೆಯಬಲ್ಲದು. ಅದೇ ಮೇರೆಗೆ ಸೃಷ್ಟಿಯಲ್ಲಿಯ ಮಿಕ್ಕ ಶಕ್ತಿಗಳು ಸಂಯಮದಿಂದ ತಮ್ಮ ತಮ್ಮ ಬಲವನ್ನು ಬೆಳೆಯಿಸಿಕೊಳ್ಳುವುವು.

ಸೂರ್ಯಕಾಂತಮಣಿಯಲ್ಲಿ ಕೇಂದ್ರೀಕೃತವಾದ ಕಿರಣಗಳಲ್ಲಿ ಎಲ್ಲ ವಸ್ತುಗಳನ್ನು ಸುಡುವ ಸಾಮರ್ಥ್ಯವು ಬರುವಂತೆ ಸಂಯತ ಮನಸ್ಸಿನಲ್ಲಿಯೂ ಅಂಥ ಅದ್ಭುತ ಶಕ್ತಿಯು ಹುಟ್ಟಿಬರುವುದು. **‘ಜಿತಂ ಜಗತ್ ಕೇನ ? ಮನೋ ಹಿ ಯೇನ’–ಮನಸ್ಸನ್ನು ಗೆದ್ದವರೇ ಜನರನ್ನು, ಜಗತ್ತನ್ನು ಗೆಲ್ಲುವರೆಂದು** ಶ್ರೀ ಶಂಕರಾಚಾರ್ಯರು ಉಸುರಿರುವರು.

೪. **ಹೇಗೆ ?** :—ಆದರೆ ಈ ಸಂಯಮವನ್ನು ಮಾಡುವುದೆಂತು ? ‘ಕಣ್ಣು ನಾಲಗೆಗಳ’ ಸಂಯಮವು ಮನಃಸಂಯಮದ ಪೂರ್ವಸಿದ್ಧತೆಯೆಂದು ಹಿರಿಯರು ಹೇಳುವರು. ಕಣ್ಣು ಕಂಡದ್ದನ್ನು, ನಾಲಗೆ ಸವಿದದ್ದನ್ನು ಮನಸ್ಸು ಬೇಡುವುದು. ಅದಕ್ಕಾಗಿ ಆಯಾ ಆಕರ್ಷಕ ವಸ್ತುಗಳನ್ನು ದೂರದಲ್ಲಿಟ್ಟು ವಿವೇಕದಿಂದ ಮನಸ್ಸಿನ ಹರಿದಾಟವನ್ನು ತಡೆಯುವ ಅಭ್ಯಾಸವನ್ನು ನಿಧಾನವಾಗಿ ಸಾಗಿಸಿದರೆ, **ಮನಃಸಂಯಮವು** ಸಾಧ್ಯವಾಗಬಹುದು. **ಕಲಿಸಿದ್ದನ್ನು ಕಲಿಯುವ ಶಕ್ತಿಯು ಮನಸ್ಸಿನಲ್ಲಿದೆ.** ಆದರೆ ದೃಢನಿಶ್ಚಯದಿಂದ ದೀರ್ಘಕಾಲದ ವರೆಗೆ ಅದಕ್ಕೆ ಕಲಿಸಬೇಕಾಗುವುದು.

೫. **ಉಪಸಂಹಾರ**:— ತಾತ್ಪರ್ಯವೇನೆಂದರೆ: ಸಂಯಮವಿಲ್ಲದೆ ಸಾಮರ್ಥ್ಯವಿಲ್ಲ. ಅದೇ ಕಸುವಿನ ಕುಲಿಮೆ, ಬಲದ ಸೆಲೆ.

## ೪. ಸ್ವಾತಂತ್ರ್ಯ.

೧. **ಉಪಕ್ರಮ**:— ಪೂರ್ಣವಿಕಾಸವು ಮಾನವನ ಗುರಿ. ಅದನ್ನು ಸಾಧಿಸಲು ಪ್ರತಿಯೊಬ್ಬನಿಗೆ ಸ್ವಾತಂತ್ರ್ಯ ಬೇಕು. ಸ್ವಾತಂತ್ರ್ಯವು ಎಲ್ಲರ ಜನ್ಮಸಿದ್ಧ ಹಕ್ಕು.

**೨. ಎಂದರೇನು ?:**—ಅದರ ಎರಡಂಗಗಳು—(೧) ಸ್ವಾವಲಂಬನ, (೨) ಬಂಧಮೋಚನ. ಬೆಳವಣಿಗೆಯನ್ನು ತಡೆಯುವ ಬಂಧನಗಳ ಅಭಾವ. ಸ್ವೈರಾಚಾರವಲ್ಲ; ಅದರಲ್ಲಿ ಬೆಳವಣಿಗೆಯಿಲ್ಲ.

**೩. ಬಗೆಗಳು:**—ಸ್ವತಂತ್ರ, ವಿವೇಕತಂತ್ರ, ಹಿರಿಯರ ತಂತ್ರ. ಅತಂತ್ರವಲ್ಲ. ಈ ಎರಡು ನಿಯಂತ್ರಣವುಳ್ಳ ಸ್ವಾತಂತ್ರ್ಯವೇ ನಮ್ಮನ್ನುದ್ಧರಿಸುವುದು. ಅದೇ ನಿಜವಾದ ಸ್ವಾತಂತ್ರ್ಯ.

**೪. ಪಡೆವುದೆಂತು ?:**—(೧) ಸರಿಯಾದ ಬಂಧನಗಳನ್ನು ಪಾಲಿಸಿ, ನಿಯಮಗಳ ಪಾಲನವೇ ಅವನ್ನು ಮೀರುವ ಸಾಧನ. (೨) ವಿವೇಕವಾಣಿಯನ್ನು ಕೇಳಿ.

**೫. ಉಪಸಂಹಾರ:**—ನಿಯಂತ್ರಿತ ಸ್ವಾತಂತ್ರ್ಯವು ನಮ್ಮ ಗುರಿ. ಎಲ್ಲೆಡೆಯಂತೆ ಇಲ್ಲಿಯೂ ಆಳಾಗಿಯೇ ಆಳಲು ಕಲಿಯಬೇಕು.

## ಸ್ವಾತಂತ್ರ್ಯ

**೧. ಉಪಕ್ರಮ:**—ಮಾನವನಲ್ಲಿ ಅನೇಕ ಶಕ್ತಿಗಳಿವೆ. ಅವೆಲ್ಲವುಗಳ ಪೂರ್ಣ ಬೆಳವಣಿಗೆಯೇ ಮಾನವನ ಗುರಿ. ಅದನ್ನು ಸಾಧಿಸಲು ಪ್ರತಿಯೊಬ್ಬನಿಗೂ ಸರಿಯಾದ ಆಸ್ಪದವಿರಬೇಕು. ಈ ದೃಷ್ಟಿಯಿಂದ ಸ್ವಾತಂತ್ರ್ಯವು ಎಲ್ಲರ ಜನ್ಮಸಿದ್ಧ ಹಕ್ಕು.

**೨. ಎಂದರೇನು ?:**—ಸ್ವಾತಂತ್ರ್ಯಕ್ಕೆ ಎರಡಂಗಗಳಿವೆ. ಒಂದು **ಸ್ವಾವಲಂಬನ,** ಇನ್ನೊಂದು **ಮುಕ್ತಿ-ಬಂಧನದಿಂದ ಬಿಡುಗಡೆ**. ಸ್ವಾವಲಂಬಿಯಾದವನು ಅನ್ಯರ ಬಂಧನಕ್ಕೆ ಒಳಗಾಗುವುದಿಲ್ಲ. ಬಂಧನವು ಪರಾವಲಂಬನದ ಪರಿಣಾಮ. ಆದುದರಿಂದ ಬಂಧನದ ಅಭಾವವು ಸ್ವಾವಲಂಬನದ ಸಹಜ ಫಲ. ಅದೇ ಮೇರೆಗೆ ಸ್ವಾವಲಂಬನವು ಬಂಧಮುಕ್ತಿಯ ಸ್ವಾಭಾವಿಕ ಪರಿಣಾಮ. ಆದರೆ **ಸ್ವಾತಂತ್ರ್ಯವೆಂದರೆ ಸ್ವೈರಾಚಾರವಲ್ಲ,** ಎಂಬುದನ್ನು ಮರೆಯಬಾರದು.

**೩. ಬಗೆಗಳು:**—ಮಾನವನ ವಿಕಾಸಕ್ಕೆ ನಿಯಂತ್ರಣವು ಕೂಡ ಅತ್ಯವಶ್ಯ. ಸ್ವತಂತ್ರ ಮನುಷ್ಯನು ಅದನ್ನು ಪೂರ್ತಿಯಾಗಿ ಅಲ್ಲಗಳೆಯಬಾರದು! ಸ್ವತಂತ್ರನು ತನ್ನ ತಂತ್ರದಿಂದ ನಡೆಯುವನು. ತನ್ನವರ ತಂತ್ರದಿಂದ ವರ್ತಿಸುವನು. ವಿವೇಕವು ಒಳಗಿನ ತಂತ್ರ; ಹಿರಿಯರು ಹೊರಗಣ ತಂತ್ರ. ಈ ಅಂತರ್ಬಾಹ್ಯ ನಿಯಂತ್ರಣಗಳನ್ನು ಅನುಲಕ್ಷಿಸಿ ಸ್ವಾತಂತ್ರ್ಯವು ದ್ವಿವಿಧವಾಗಿರುವುದು. ಈ ನಿಯಂತ್ರಣವುಳ್ಳ ಸ್ವಾತಂತ್ರ್ಯವೇ

ನಮ್ಮನ್ನುದ್ಧರಿಸುವುದು. ಅದು ಅತಂತ್ರ ಸ್ವೈರಾಚಾರದಿಂದ ಸಾಧ್ಯವಿಲ್ಲ. ಇಂಥ ಸ್ವಾತಂತ್ರ್ಯವೇ ನಿಜವಾದ ಸ್ವಾತಂತ್ರ್ಯ.

ವ್ಯಕ್ತಿಯ ಮಾತೇ ಸಮಾಜಕ್ಕೂ ರಾಷ್ಟ್ರಕ್ಕೂ ಅನ್ವಯಿಸುವುದು. ಸಮಾಜದಲ್ಲಾಗಲಿ, ರಾಷ್ಟ್ರದಲ್ಲಾಗಲಿ, **ಸಮತ್ವಬುದ್ಧಿಯುಳ್ಳ ಹಿರಿಯರೇ ಮುಂದಾಳುಗಳಾಗಿರಬೇಕು.** ನಾಡಿನ ಹಿತಾಹಿತವು ಅವರಿಗೆ ತಿಳಿಯುವಷ್ಟು ಇನ್ನಾರಿಗೂ ತಿಳಿಯುವುದಿಲ್ಲ. **ಅವರೇ ನಾಡಿನ ಮಿದುಳು;** ಮುನ್ನೋಟವನ್ನು ಪಡೆದ ಕಣ್ಣು. ಅವರ ನಿಯಂತ್ರಣದಲ್ಲಿ ಸಮಾಜವು ನಡೆಯತೊಡಗಿದರೆ ಅವರ ಹಾಗೂ ಅದರಲ್ಲಿಯ ಪ್ರತಿಯೊಂದು ವ್ಯಕ್ತಿಯ ಕಲ್ಯಾಣವಾಗುವುದು. ಅದರಿಂದಲೇ ಸಮಾಜಕ್ಕೆ ನಿಜವಾದ ಸ್ವಾತಂತ್ರ್ಯದ ಸುಖವು ಅನುಭವಿಸಲು ದೊರೆಯುವುದು. ಇಲ್ಲಿಯೂ ಸ್ವಾತಂತ್ರ್ಯವು ಪರತಂತ್ರ—ಶ್ರೇಷ್ಠರ ತಂತ್ರವಾದುದಿರಬೇಕು.

೪. **ಪಡೆಯುವ ರೀತಿ :—**ಮನಸ್ಸಿನ ಕೀಳು ಭಾವನೆಗಳ ವಶದಿಂದ ಬಿಡುಗಡೆ ಹೊಂದಿ, ನಿಜವಾದ ವಿವೇಕಿಗಳ ಅಧೀನವಾಗಿರಲು ಯತ್ನಿಸುವುದು ಸ್ವಾತಂತ್ರ್ಯ ಪ್ರಾಪ್ತಿಯ ದಾರಿಯಲ್ಲಿಯ ಮೊದಲನೆಯ ಹೆಜ್ಜೆ. ವಿವೇಕಿಗಳಾದ ಹಿರಿಯರು ತಮ್ಮ ಆದರ್ಶದಿಂದಲೂ ಉಪದೇಶದಿಂದಲೂ ನಮ್ಮನ್ನು ಕೀಳ್ಮೆಯ ಕೊಳ್ಳದಿಂದ ಮೇಲಕ್ಕೆತ್ತಿ ನಮ್ಮಲ್ಲಿಯ ವಿವೇಕ ಶಕ್ತಿಯನ್ನು ಎಚ್ಚರಗೊಳಿಸುವರು. ಬರಬರುತ್ತ ಅವರು ನಮ್ಮನ್ನು ನಮ್ಮ ವಿವೇಕದ ಹೇಳಿಕೆಯಂತೆ ನಡೆಯಲು ಹೇಳುವರು. ನಮ್ಮಲ್ಲಿಯ ವಿವೇಕದ ಬಲವು ಸಾಕಷ್ಟು ಬೆಳೆಯಿತೆಂದರೆ ಅವರು ತಮ್ಮ ನಿಯಂತ್ರಣವನ್ನು ಸಡಿಲಿಸುವರು. ಒಂದರ್ಥದಿಂದ ನಿಯಂತ್ರಣವು ಉಳಿದೇ ತೀರುವುದು. ಮುಂದದು ಅವರದಾಗದೆ ನಮ್ಮದೇ ಆಗುವುದು. ಇಷ್ಟೇ ಭೇದವದರಲ್ಲಿ. ಈ ಮೇರೆಗೆ ನಮ್ಮ **ಅಂತಃಕರಣಪ್ರವೃತ್ತಿಯೇ ಪ್ರಮಾಣವಾಯಿತೆಂದರೆ** ನಾವು ಪೂರ್ತಿಯಾಗಿ ಸ್ವತಂತ್ರರಾದೆವೆಂದು ತಿಳಿಯಬೇಕು.

೫. **ಉಪಸಂಹಾರ :—** ಆದುದರಿಂದ ಪರತಂತ್ರವಾದ ಹಿರಿಯರ ನಿಯಂತ್ರಣದಲ್ಲಿಯ ಸ್ವಾತಂತ್ರ್ಯದಲ್ಲಿಯೇ ನಿಜವಾದ ಸ್ವಾತಂತ್ರ್ಯ ಸುಖ. ಎಲ್ಲೆಡೆಯಂತೆ ಇಲ್ಲಿಯೂ **ಆಳಾಗಿಯೇ ಆಳಬೇಕು, ಬಾಳಬೇಕು.**

## ೫. ಸ್ವಾಭಿಮಾನ.

೧. **ಉಪಕ್ರಮ :—**‘ಕುಲಂ ಕುಲಮಲ್ತು, ಚಲಂ ಕುಲಂ..

ಅಭಿಮಾನಮೆ ಕುಲಂ, ಅಣ್ಮೆ ಕುಲಂ! ' ಎಂದು ವೀರ ಕರ್ಣನು ಉಸುರಿರುವನು. ಇವರಲ್ಲಿನ ಸ್ವಾಭಿಮಾನವು ಪದಪದಕ್ಕೆ ಹೊರಹೊಮ್ಮುವುದು ! ಎಂಥ ಅಭಿಮಾನಧನನವನು !

**೨. ಎಂದರೇನು ?** :—ಸ್ವಾಭಿಮಾನವು ತನ್ನ ವಿಷಯದ ಗೌರವ; ತನ್ನ ಕುಲ—ತನ್ನ ನಾಡು—ತನ್ನ ಧರ್ಮ—ತನ್ನ ಸಂಸ್ಕೃತಿ ಈ ಎಲ್ಲ ವಿಷಯಗಳ ಬಗ್ಗೆ ಯೋಗ್ಯವಾದ ಆದರ. ಆದರೆ ಅದು ಬರಿ ಹೆಮ್ಮೆಯಲ್ಲ. ಅಭಿಮಾನ ಹೆಮ್ಮೆಗಳಲ್ಲಿ ಮಹದಂತರವಿದೆ. ಒಂದು ಅರಿವನ್ನು ಆಶ್ರಯಿಸಿರುವುದು; ಇನ್ನೊಂದು ಮರವಿನ ನೆರವಿನಿಂದ ಬೆಳೆಯುವುದು. ಅಭಿಮಾನಿಯು ತನ್ನಲ್ಲಿಯ ಗುಣದೋಷಗಳನ್ನರಿತು ತನ್ನಲ್ಲಿಯ ಗುಣಗಳ ಬಗ್ಗೆ ಸಾತ್ವಿಕವಾದ ಅಭಿಮಾನವನ್ನು ತಾಳುವನು. ಆದರೆ ಹೆಮ್ಮೆಯುಳ್ಳವನಿಗೆ ತನ್ನದೆಂದರೆ ತೀರಿತು, ಅವನ್ನವನು ಗೌರವಿಸಲೇಬೇಕು. ಅದು ಒಳಿತಿರಲಿ; ಕೆಡಕಿರಲಿ ! ಇದು ದುರಭಿಮಾನ—ಸದಭಿಮಾನವಲ್ಲ.

**೩. ಅವಶ್ಯಕತೆ** :—ಸದಭಿಮಾನವು ಆತ್ಮಪ್ರೀತಿಯ ಕುರುಹು. ನಮ್ಮನ್ನು ನಾವು ಪ್ರೀತಿಸದಿದ್ದರೆ ನಮ್ಮ ಬಾಳು ಸಾಗುವುದೆಂತು ? ಅದರಲ್ಲಿ ಮುಂದೆ ಬೆಳವಣಿಗೆಯಾಗುವುದೆಂತು ? ಆದುದರಿಂದ ಪರಮಾತ್ಮನೇ ಈ ಭಾವವನ್ನು ನಮ್ಮೆದೆಯಲ್ಲಿ ಬಲಿಸಿರುವನು. ತನ್ನನ್ನೂ—ತನ್ನ ಸಂಸ್ಕೃತಿಯನ್ನೂ ಗೌರವಿಸದ ಅದಾವನು ಉನ್ನತಿ ಪಥವನ್ನು ತುಳಿಯಬಲ್ಲನು ? ದುರಭಿಮಾನವು ಮೂರ್ಖರ ಲಕ್ಷಣವಿದ್ದಂತೆ, ಸದಭಿಮಾನವು ಮುಕ್ತರ ಕುರುಹು. ಸಾಮಾನ್ಯ ಜೀವಿಗಳಾದ ನಾವು ಸದಭಿಮಾನವನ್ನು ತಾಳಿ ಬಾಳಲು ಬೆಳೆಯಲು ಹವಣಿಸಬೇಕು. ನಮ್ಮಲ್ಲಿಯ ನಿರಭಿಮಾನವು ದೌರ್ಬಲ್ಯದ ಫಲ, ಮುಂದಿನ ಅವನತಿಯ ಮೂಲ. ನಮ್ಮಲ್ಲದು ಗುಣವಾಗದೆ ದೋಷವಾಗುವುದು.

ಇಂಥ ಬಲಹೀನರನ್ನು ಈ ಇಳೆಯಲ್ಲಿ ಇರಗೊಡುವವರಾರು ? ಮೇಲಾಗಿ ಇವರು ಬಾಳಿದರೂ ಅದರಿಂದ ಫಲವೇನು ? ಸ್ವತ್ವವಿಹೀನವಾದ ನೀರಸ ಬಾಳು ಬಾಳೆ ? ಆದುದರಿಂದ ತನ್ನ ತಾನರಿದು—ತನ್ನಲ್ಲಿಯ ಒಳಿತನ್ನು ಪ್ರೀತಿಸಿ ಅದನ್ನು ಬೆಳೆಯಿಸುವುದೇ ಮೇಲು ಜೀವನ. ಉಳಿದವರದು ಕೀಳು ಜೀವನ—ಅದು ಜೀವನವೇ ಅಲ್ಲ.

**೪. ಅದರ ಮೇರೆಗಳು** :—ಆದರೆ ಅಭಿಮಾನದ ಮೇರೆಗಳನ್ನು

ಮಾತ್ರ ನಾವು ಚೆನ್ನಾಗಿ ಲಕ್ಷಿಸಬೇಕು. ಯಾಕೆಂದರೆ—ಸದಭಿಮಾನವು ಸಹಜವಾಗಿ ದುರಭಿಮಾನವಾಗುವುದುಂಟು. ಅವುಗಳ ಗಡಿಗಳು ಒಂದನ್ನೊಂದು ಹೊಂದಿರುವುದರಿಂದ ನಮಗೆ ತಿಳಿಯದೆಯೇ ನಾವು ಒಂದರಿಂದಿನ್ನೊಂದನ್ನು ಸೇರುವ ಭಯವುಂಟು. ಅದಕ್ಕಾಗಿ ನಾವು ಸದೈವ ಜಾಗರೂಕರಾಗಿ ಒಳಗಣ್ಣಿನಿಂದ ನಮ್ಮ ಅಂತರ್ನಿರೀಕ್ಷಣವನ್ನು ಎಡೆಬಿಡದೆ ಮಾಡುತ್ತಿರಬೇಕು.

ಇಂದಿನ ಜೀವನದಲ್ಲಿ ಎಲ್ಲೆಲ್ಲಿಯೂ ದುರಭಿಮಾನವೇ ಸದಭಿಮಾನದ ಸೋಗು ಹಾಕಿಕೊಂಡು ಮೆರೆಯುತ್ತಿದೆ. ತನ್ನ ತಾಂಡವದಿಂದ ಸಮಾಜವನ್ನು ಹುಡಿಗೂಡಿಸುತ್ತಿದೆ—ರಾಷ್ಟ್ರಗಳನ್ನು ಪುಡಿಪುಡಿ ಮಾಡುತ್ತಿದೆ. ಪ್ರಬಲರಾದ ದುರಭಿಮಾನಿಗಳು ದುರ್ಬಲರಾದ ನಿರಭಿಮಾನಿಗಳನ್ನು ನುಂಗಿ ನೀರು ಕುಡಿಯುತ್ತಿರುವರು. ಇಂಥ ಸಮಾಜದಲ್ಲಿ ಸ್ವಾಭಿಮಾನದ ಸರಿಯಾದ ಪರಿಚಯವಿರುವುದು ಸರಿಯಲ್ಲವೇ ?

**೫. ಉಪಸಂಹಾರ:**—ಆದುದರಿಂದ ಒಂದೆಡೆಗೆ ನಿರಭಿಮಾನವನ್ನು ಇನ್ನೊಂದೆಡೆಗೆ ದುರಭಿಮಾನವನ್ನು ಬಿಸುಟು, ಸ್ವಾಭಿಮಾನದ ವೈಭವದಲ್ಲಿ ಹೊಳೆಯುವುದು ಪ್ರತಿಯೊಬ್ಬನ ಆದ್ಯ ಕರ್ತವ್ಯ.

## ೬. ಸ್ವದೇಶಾಭಿಮಾನ.

೧. ಉಪಕ್ರಮ:—ರಾಷ್ಟ್ರದೇವೋ ಭವ ! ಇದು ಇಂದಿನ ಮಹಾಮಂತ್ರ. ಅದೇ ನಮ್ಮಲ್ಲಿ ನವಚೈತನ್ಯವನ್ನುಂಟುಮಾಡುವುದು.

೨. ಎಂದರೇನು ?:—ತಾಯ್ನಾಡಿನ ಪ್ರೀತಿ.

೩. ಅದರ ಗುಣಗಳು:—ಅದು ಮಾನವನ ಪ್ರಗತಿಯ ಕುರುಹು. ಅಂತರಂಗ ವೈಶಾಲ್ಯ—ನಾಡು-ನುಡಿ-ಸಂಸ್ಕೃತಿಗಳ ರಕ್ಷಣ. ಅವುಗಳ ಉದ್ಧಾರ.

೪. ಅದರ ದೋಷಗಳು:— ಸಂಕುಚಿತ ದೇಶಾಭಿಮಾನವು ಜಗತ್ತಿನ ಅಶಾಂತಿಗೆ ಕಾರಣ. ಅದು ವಿಶಾಲತೆಯನ್ನು ಹೊಂದುತ್ತಿರಬೇಕು. **ಬೆಳೆವುದು ನಿಂತೊಡನೆ ಅಳಿಗಾಲಕ್ಕೆ ಪ್ರಾರಂಭ.**

೫. ಉಪಸಂಹಾರ:—ವಿಶಾಲವಾದ ದೇಶಪ್ರೇಮವೇ ಮುಂದಿನ ಪ್ರಗತಿಯ ಅಡಿಗಲ್ಲು.

## ಸ್ವದೇಶಾಭಿಮಾನ.

**೧. ಉಪಕ್ರಮ:**—ಅಂದು ತಂದೆಯು ದೇವರಾದರೆ, ಇಂದು ರಾಷ್ಟ್ರವು ದೇವರು ; ಅಂದು ತಾಯಿಯು ದೇವಿಯಾದರೆ, ಇಂದು ತಾಯ್ನಾಡು

ದೇವಿ. **ರಾಷ್ಟ್ರದೇವೋ ಭವ!** ಎಂಬುದು ಇಂದಿನ ಮಹಾಮಂತ್ರ! ವಂದೇ ಮಾತರಮ್! ಎಂಬುದು ಇಂದಿನ ವಂದನೆ! ಅದೇ ನಮ್ಮನ್ನು ಹುರಿಗೊಳಿಸುವುದು; ನಮ್ಮಲ್ಲಿ ಸವಜ್ಜೈತನ್ಯವನ್ನುಂಟುಮಾಡುವುದು.

೨. **ಎಂದರೇನು?** :—ತನ್ನ ತಾಯ್ನಾಡಿನ ಪ್ರೀತಿಯೆ ಸ್ವದೇಶಾಭಿಮಾನವು. ನಾವು ಈವರೆಗೆ ನಮ್ಮನ್ನು ಹಡೆದ ತಾಯಿಗೆ ತೋರಿಸುವ ಪ್ರೇಮಾದರಗಳನ್ನು ತಾಯ್ನಾಡಿಗೂ ಸಲ್ಲಿಸತಕ್ಕದ್ದು. ತಾಯಿಯು ನಮ್ಮನ್ನು ಸಾಕಿ ಸಲಹುವಂತೆ ತಾಯ್ನಾಡು ಮಾಡುವುದಿಲ್ಲವೆ? ಭೂಮಿ ತಾಯಿಯ ಕಲ್ಪನೆಯು ನಮ್ಮವರಿಗೇನು ಹೊಸದಾದದ್ದಲ್ಲ. 'ಭೂಮಿ ಕೊಡಲಾಕಿದ್ದಾಗ ಸಮಗ್ಯಾಕ ಕಡಿಮಿ?' ಎನ್ನುವ ರೈತರು ನಮ್ಮಲ್ಲಿದೆಷ್ಟೋ ಜನ. ಭೂಮಾತೆಯು ಅಮೂರ್ತಳು—ಮೂರ್ತಸ್ವರೂಪದಲ್ಲಿ ಕಾಣದಿದ್ದರೂ ಆಕೆಯು ತನ್ನ ಒಲವನ್ನು ಕರೆಯಲು ಮರೆಯುವುದಿಲ್ಲ. ಕಾಣದ ಮಾತ್ರಕ್ಕೆ ಅವಳು ತಾಯಿಯಲ್ಲವೆ? ನಾವವಳನ್ನು ಪ್ರೀತಿಸಬೇಡವೇ?

೩. **ಗುಣಗಳು** :— ಸ್ವದೇಶಾಭಿಮಾನವು ಮಾನವನ ಮನೋವಿಕಾಸದ ಕುರುಹು. ಅದು ಅವನ ಅಂತರಂಗದ ವೈಶಾಲ್ಯವನ್ನು ಸೂಚಿಸುವುದು. ಈವರೆಗೆ ಅವನ ದೃಷ್ಟಿಯು ತನ್ನ, ತನ್ನ ಕುಟುಂಬದ, ಹಿತವನ್ನುಳಿದು ಇನ್ನೊಂದನ್ನು ಕಾಣುತ್ತಿರಲಿಲ್ಲ. ಇಂದದು ಹಿಗ್ಗಿ ನಾಡು—ನುಡಿ—ಧರ್ಮ—ಸಂಸ್ಕೃತಿ ಇತ್ಯಾದಿ ವಿಷಯಗಳನ್ನು ವಿಚಾರಿಸುವಷ್ಟು ವಿಕಸಿತವಾಗಿದೆ. ಇದು ಆತನ ಆಂತರಿಕ ಪ್ರಗತಿಯನ್ನೆಯೇ ತೋರಿಸುವುದಿಲ್ಲವೆ?

ಇದರಿಂದವನು ತನ್ನ ನೀಚ ಸ್ವಾರ್ಥವನ್ನು ತೊರೆದು, ಮೇಲ್ತರಗತಿಯ ಸ್ವಾರ್ಥವನ್ನು ಸಾಧಿಸಲು ಯತ್ನಿಸುವನು. ಕುಟುಂಬವನ್ನಷ್ಟೇ ರಕ್ಷಿಸಲು ಹೆಣಗುವವನು ರಾಷ್ಟ್ರದ ಜನರನ್ನೆಲ್ಲ ಉದ್ಧರಿಸಲು ಯತ್ನಿಸುವನು. ಈ ವೃತ್ತಿಯಿಂದ ಇಡೀ ರಾಷ್ಟ್ರದ ಕಲ್ಯಾಣವಾಗುವುದು. ಅದಕ್ಕೆ ವೈಭವವು ಪ್ರಾಪ್ತವಾಗುವುದು.

೪. **ದೋಷಗಳು :—ಸ್ವ—ಪ್ರೀತಿಯು** ಸಂಕುಚಿತವಾಗಿ ನೀಚ ಸ್ವಾರ್ಥವು ಬಲಿಯಿತೆಂದರೆ ಅದು ನೆರೆಯವರನ್ನು ಕಾಡಲು ಮುಂದು ಮಾಡುವಂತೆಯೆ, **ಸ್ವ-ದೇಶ ಪ್ರೀತಿಯದೂ** ಆಗುವುದುಂಟು. ಮನುಷ್ಯನು ಹಾಗೆಯೆ ಪ್ರಗತಿಯನ್ನು ಹೊಂದುತ್ತ, ವಿಶ್ವಪ್ರೀತಿಯೆಡೆಗೆ ಸಾಗತೊಡಗಿದನೆಂದರೆ ಅವನ ವಿಶಾಲವಾದ **ಸ್ವದೇಶ ಪ್ರೀತಿಯು** ಅನ್ಯರ ಪ್ರಗತಿಯನ್ನು

ತಡೆಯುವುದಿಲ್ಲ. ಆದರೆ ತನ್ನ ನಾಡಿನ ಏಳ್ಗೆಯಲ್ಲಿ ಅನ್ಯರ ಆಹುತಿ ಬಿದ್ದರೂ ಅಡ್ಡಿಯಿಲ್ಲ ಎಂಬ ಭಾವನೆಯಿಂದ ಪ್ರೇರಿತವಾದ ಸಂಕುಚಿತ ಸ್ವದೇಶಾಭಿಮಾನವು ತೀರ ಸದೋಷವಾಗದಿರದು. ಅಂಥ ಸಂಕುಚಿತತನವೇ ಇಂದಿನ ಜಗತ್ತಿನಲ್ಲಿಯ ಅಶಾಂತಿಗೆ, ಗೋಳಾಟಕ್ಕೆ ಕಾರಣ. ಈ ಬಗೆಯಾಗಿ ಸಂಕುಚಿತವೃತ್ತಿಯುಳ್ಳ ಪ್ರಬಲ ರಾಷ್ಟ್ರಗಳು ದುರ್ಬಲರನ್ನು ಮಣ್ಣುಗೂಡಿಸಿ ಅವರ ಗೊಬ್ಬರದಿಂದುದಿಸಿದ ಬೆಳೆಯನ್ನು ಸ್ವೈರವಾಗಿ ಉಪಭೋಗಿಸುತ್ತಿರುವವು. ಸ್ವದೇಶ ಪ್ರೇಮದ ಪವಿತ್ರ ಹೆಸರಿನಿಂದ ಎಂಥ ಹೇಸಿ ಕೆಲಸವನ್ನು ಮಾಡಲೂ ಅವು ಹೇಸುವುದಿಲ್ಲ. ಆದುದರಿಂದ ಇಂಥ ಸಂಕುಚಿತ ಸ್ವದೇಶಾಭಿಮಾನವು ಎಷ್ಟೂ ಸರಿಯಲ್ಲ.

೫. **ಉಪಸಂಹಾರ**:—ಒಂದು ಕಣ್ಣಿನಿಂದ **ಸ್ವದೇಶಹಿತ**ವನ್ನು ಕಾಣುತ್ತಿರುವಾಗಲೇ ಇನ್ನೊಂದರಿಂದ **ವಿಶ್ವಹಿತ**ವನ್ನು ಲಕ್ಷಿಸುವುದೇ ನಿಜವಾದ ಪ್ರಗತಿಪರ ಜೀವನದ ಲಕ್ಷಣ. ಇಂಥ ವಿಶಾಲ ದೇಶ ಪ್ರೇಮವೇ ವಿಶ್ವಶಾಂತಿಯ ಅಡಿಗಲ್ಲು.

## ೭. ಸ್ವಾರ್ಥ.

೧. **ಉಪಕ್ರಮ**:—ತಾನು ಬಾಳಬೇಕು—ಬೆಳೆಯಬೇಕು; ತಾನು ಧನಿಕನಾಗಬೇಕು—ಅಧಿಕಾರಿಯಾಗಬೇಕು; ತನ್ನನ್ನು ಜನರೆಲ್ಲ ಹೊಗಳಬೇಕು—ತನಗೆ ಮನ್ನಣೆಯನ್ನು ಸಲ್ಲಿಸಬೇಕು; ಇಂತು ಮುಂತಾಗಿ ಬಯಸದ ಮನುಜನು ಆದಾರು? ಈ ಬಯಕೆಯು ಅವನ ಸಹಜ ಸ್ವಭಾವ. ಇದೇ ಅವನ ಸ್ವಾರ್ಥ. ಇದಿಲ್ಲದವರು ತೀರ ವಿರಲ—ಇಲ್ಲೆಂದರೂ ಸಲ್ಲುವುದು.

೨. **ಎಂದರೇನು?**:—ಇಷ್ಟು ಪರಿಚಿತವಾದ ಸ್ವಾರ್ಥವನ್ನು ಅರಿಯದವರಾರು? ಹೀಗಿರಲು ಸ್ವಾರ್ಥವೆಂದರೆ—ತನ್ನ ಅರ್ಥ, ತನಗೆ ಬೇಕಾದ ಒಡವೆಯೆಂದು ಮರಳಿ ಹೇಳಬೇಕೆ?

ಸ್ವಾರ್ಥದಲ್ಲಿ ಎರಡು ಬಗೆಗಳಿವೆ: (೧) ನೀಚ—ಇಲ್ಲವೆ **ಸಂಕುಚಿತ ಸ್ವಾರ್ಥವು** ಒಂದು. (೨) ಉಚ್ಚ—ಇಲ್ಲವೆ **ವಿಶಾಲ ಸ್ವಾರ್ಥ** ಇನ್ನೊಂದು. ಒಂದರಿಂದ ಅಳಿಗಾಲ, ಇನ್ನೊಂದರಿಂದ ಬೆಳಿಗಾಲ; ಒಂದು ಕಾಯುವುದು, ಇನ್ನೊಂದು ಕೊಲ್ಲುವುದು. ತನ್ನ ಸ್ವಾರ್ಥಸಾಧನೆಯಲ್ಲಿ ಅನ್ಯರ ಹಿತದ ಹವನವಾದರೂ ಅಡ್ಡಿಯಿಲ್ಲ, ಅದನ್ನು ಪಡೆದೇ ತೀರಬೇಕು, ಅದೇ ತಮ್ಮ ಕರ್ತವ್ಯವೆಂದು ಹೊರಡುವುದು ನೀಚ ಸ್ವಾರ್ಥ. ಅದಕ್ಕೆ ಅನ್ಯರ ಪರಿವೆ

ಇಲ್ಲ. ತಾನು, ತನ್ನ ಇಷ್ಟಾರ್ಥ—ಇಷ್ಟೇ ಅದರ ಸಂಕುಚಿತ ದೃಷ್ಟಿಗೆ ಕಾಣುವುದು. ಇದು ಅಸಂಸ್ಕೃತಿಯ ಕುರುಹು.

ವಿಶಾಲ ಸ್ವಾರ್ಥವು ಇದಕ್ಕೂ ಭಿನ್ನವಾದುದು. ಅದು ಅನ್ಯರ ಹಿತಕ್ಕೆ ಅವಿರೋಧವಾಗಿ ತನ್ನ ಹಿತವನ್ನು ಪಡೆಯಲೆಳಸುತ್ತದೆ. '**ಬಾಳು-ಬಾಳಗೊಡು**' ಕಿಂಬಹುನಾ, ಬಾಳಗೊಟ್ಟು ಬಾಳು! ಎಂಬುದು ಅದರ ಗುರಿ. ಇದು ಉನ್ನತವಾದ-ಬೆಳೆವ ಸುಸಂಸ್ಕೃತಿಯ ಲಕ್ಷಣ. ಈ ಉಚ್ಚ ಸ್ವಾರ್ಥದಿಂದಲೇ ನಿಸ್ಸ್ವಾರ್ಥವೃತ್ತಿಯು ಜನಿಸುವುದುಂಟು. ಇದರಿಂದಲೇ ಮಾನವನ ಪ್ರಗತಿಗೆ ಪ್ರಾರಂಭ. ಇಲ್ಲಿಯವರೆಗಿನ ಅವರ ಜೀವನವು ಪಶು ಜೀವನವು. ಈಗವನು ಮಾನವನಾದುದು.

೩. **ಸ್ವಾರ್ಥತ್ಯಾಗ:—** ನಿಜವಾಗಿ ಆಲೋಚಿಸಿದರೆ ಜಗತ್ತಿನಲ್ಲಿ ಸ್ವಾರ್ಥತ್ಯಾಗವೆಂಬುದು ಇಲ್ಲವೇ ಇಲ್ಲ. ನಾವು ಯಾವುದಕ್ಕೆ ಇಂದು ಸ್ವಾರ್ಥತ್ಯಾಗವೆನ್ನುವೆವೋ, ಅದು ತ್ಯಾಗವಲ್ಲ; ಸಾಧನೆ. ಮೇಲ್ತರಗತಿಯ ಸ್ವಾರ್ಥಕ್ಕಾಗಿ ಕೆಳತರಗತಿಯ ಸ್ವಾರ್ಥವನ್ನು ತ್ಯಜಿಸುವುದಕ್ಕೆ ಈ ಹೆಸರು. ಅದು ಒಂದು ಬಗೆಯಿಂದ ಉಚ್ಚ ಸ್ವಾರ್ಥವೇ!

ಸ್ವಾರ್ಥವು ಹಿಗ್ಗದೆ ತ್ಯಾಗವೇ ಸಾಧ್ಯವಿಲ್ಲ. ಕುಲಕ್ಕಾಗಿ ತನ್ನನ್ನೂ, ಊರಿಗಾಗಿ ಕುಲವನ್ನೂ, ನಾಡಿಗಾಗಿ ಊರನ್ನೂ, ವಿಶ್ವಕ್ಕಾಗಿ ನಾಡನ್ನೂ, ಪರಮಾತ್ಮನಿಗಾಗಿ ಇಡೀ ವಿಶ್ವವನ್ನೂ ತ್ಯಜಿಸಿದವರೇನೂ ಕಡಿಮೆಯಿಲ್ಲ. ಆದರೆ ಒಂದನ್ನು ಬಿಡುವಾಗ ಅವರು ಅದಕ್ಕೂ ಹಿರಿದಾದ ಮಾತನ್ನು ಪಡೆವರು. ಮುಂದಿನ ಗುರಿಯೊಡನೆ ಬೆರೆತಾಗ ಹಿಂದಿನದು ಅವರಿಂದ ಸಹಜವಾಗಿ ಅಳಿಯುವುದು. ಆಗವರಿಗೆ ಅವರ ತ್ಯಾಗದ ಕಲ್ಪನೆಯೂ ಕೂಡ ಬರುವುದಿಲ್ಲ. ಅಷ್ಟು ಅನಾಯಾಸವಾಗಿ ತಿಳಿಯದೇ ನಡೆಯುವುದು ತ್ಯಾಗ. ಹೀಗೆ ಅಗಲಿಕೆಯ ಅಳುವಿನ ಅನಿಸಿಕೆಯಿಲ್ಲದೇ ಆದ ತ್ಯಾಗವೇ ನಿಜವಾದ ತ್ಯಾಗ. ಅದಕ್ಕೆ ಸ್ವಾರ್ಥತ್ಯಾಗವೆನ್ನಬೇಕೋ, ಸ್ವಾರ್ಥಸಾಧನೆಯೆನ್ನಬೇಕೋ ಹೇಳಲು ಬರುವಂತಿಲ್ಲ. ಅದು ಸ್ವಾರ್ಥತ್ಯಾಗವೂ ಅಹುದು—ಸ್ವಾರ್ಥ ಸಾಧನೆಯೂ ಅಹುದು. ಹೆಸರು ನೋಡುವವರ ದೃಷ್ಟಿಯನ್ನವಲಂಬಿಸಿದೆ ಅವರ ಕೃತಿಯನ್ನಲ್ಲ. ಕೃತಿಯೊಂದು ಹೆಸರು ಎರಡು.

೪. **ಉಪಸಂಹಾರ:—** ಇಂಥ ಸ್ವಾರ್ಥತ್ಯಾಗವನ್ನು ಮಾಡುವ ಸ್ವಾರ್ಥಸಾಧಕರು ನಾಡಿಗೆ ಭೂಷಣರು—ಆದರ್ಶರು! ಅವರ ಇರವೇ ನಾಡಿನ ಏಳ್ಗೆಯ ಒರವು.

## ೮. ಪರೋಪಕಾರ.

೧. ಉಪಕ್ರಮ :-ಪರಾರ್ಥವು ಸ್ವಾರ್ಥವಾದವನೇ ಸಜ್ಜನರಲ್ಲಿ ಮಿಗಿಲಾದವನು.

೨. ಅಂದರೇನು ?:—ತನ್ನಂತೆ ಪರರು ಎಂದು ಬಗೆದು ಅವರ ಹಿತವನ್ನು ಸಾಧಿಸಲು ತನು–ಮನ–ಧನವನ್ನು ಅರ್ಪಿಸುವುದು.

೩. ಮಹಿಮೆ :—ದಯವು ಧರ್ಮದ ಮೂಲ. ಉಪಕಾರ ಧರ್ಮವು ಪರಮಾತ್ಮನ ಶ್ರೇಷ್ಠ ಧರ್ಮ. ಅನ್ಯರ ಹಿತದಲ್ಲಿಯೇ ತನ್ನ ಹಿತ. ಸ್ವಾರ್ಥತ್ಯಾಗವು ಹಿರಿತನದ ಕುರುಹು.

೪. ಉಪಸಂಹಾರ :—They alone live, who live for oters ; the rest are more dead than alive. ಪರರಿಗಾಗಿ ಬಾಳುವವರ ಬಾಳೇ ಬಾಳು. ಉಳಿದವರ ಬಾಳು ಹಾಳು.

### ಪರೋಪಕಾರ.

೧. **ಉಪಕ್ರಮ :**—'**ಹಸಿದರ ಮೊಗಮಂ ನೋಡಂ**' ನಮ್ಮ ***ಆದಿಗೊಂಡ.** 'ಹಸುಗೂಸುಗಳ್ಗೆ ಹಾಲಂ, ಹಸಿದರ್ಗೆ ಅನ್ನಮಂ ಸಲಿಸುವ ಬೆಸನವು' ಅವನದು. ಕೆರೆ ಕಟ್ಟಿಸುವುದು–ಅರವಟ್ಟಿಗೆಯನ್ನಿಡುವುದು, ಆರಾಮ ತೋಟವನ್ನು ಮಾಡಿಸುವುದು, ಇವನ್ನುಳಿದು ಇನ್ನೊಂದು ಕೆಲಸವಿದ್ದಿಲ್ಲವಂತೆ ಅವನಿಗೆ. ಇಂಥ ಹಿರಿಯರ ನಾಡವರಿಗೆ ಪರೋಪಕಾರದ ಪಾಠವನ್ನು ಹೇಳಬೇಕೆ ?

೨. **ಎಂದರೇನು ? :**—ಎರಡನೆಯವರ ಅರ್ಥವನ್ನು, ಹಿತವನ್ನು ಸಾಧಿಸಿ ಅವರಿಗೆ ಉಪಕಾರವನ್ನು ಮಾಡುವುದು ಪರೋಪಕಾರಿಯ ಆದ್ಯ ಕರ್ತವ್ಯ. ಅವನಿಗೆ ತನ್ನಂತೆ ಅನ್ಯರು. ಅವರ ಹಿತವೇ ತನ್ನ ಹಿತವು. ಅದನ್ನು ಸಾಧಿಸಲು, ಅವನು ತನ್ನ ತನು–ಮನ–ಧನವನ್ನು ಅರ್ಪಿಸಲು ಸದಾ ಸಿದ್ಧನು.

೩. **ಏಕೆ ? :**–ತನ್ನ ಕಲ್ಯಾಣವನ್ನು ಬದಿಗಿರಿಸಿ ಅನ್ಯರ ಹಿತಕ್ಕಾಗಿ ನಾವು ಅದೇತಕ್ಕೆ ಹೆಣಗಬೇಕು ? ಹಾಗೆ ಮಾಡುವುದೆಂದರೆ ಅದೊಂದು ಶುದ್ಧ ಆತ್ಮಘಾತವಲ್ಲವೇ, ಮೂರ್ಖತನವಲ್ಲವೇ ! ಅದರಿಂದೇನು ಪ್ರಯೋಜನ ? ಎಂದು ಇಂದಿನ ಬಣಗು ಬುದ್ಧಿವಂತರು (?) ಕೇಳಬಹುದು.

ಮಾನವನು ಸಮಾಜದಲ್ಲಿರುವ ಪ್ರಾಣಿ. ಇವನಿಗೆ ಸದಾ ಅನ್ಯರ ನೆರವಿನ ಅವಶ್ಯಕತೆ. ಅದಿಲ್ಲದೆ ಇವನ ಯಾವ ಕೆಲಸವೂ ಸಾಗದು. ಇವನ

* ಇವನೊಬ್ಬ ದಾನಶೂರನು.

ಸುಖ-ದುಃಖದಲ್ಲಿ ಅನ್ಯರು ಪಾಲುಗಾರರಾದರೆ, ಸುಖವು ಇಮ್ಮಡಿ ಬೆಳೆವು ದುಃಖವು ಅರ್ಧಕ್ಕಿಳಿಯುವುದು. ಇವನ ರಕ್ಷಣೆ ಪೋಷಣೆಯು ಕೆಲಸಕ್ಕಿಗೆ ಅನ್ಯರ ಸಹಾಯವನ್ನು ಅಪೇಕ್ಷಿಸುವುದು. ಹೀಗಿರಲು ಸದೈವ ಉಪಕಾರ ವನ್ನು ಅಪೇಕ್ಷಿಸುವವನು, ಅದನ್ನಷ್ಟೇ ತತ್ಪರತೆಯಿಂದ ಸಲ್ಲಿಸಬೇಕಲ್ಲವೇ ?

ಉಪಕಾರವು ಅಂತರಂಗವನ್ನು ಹಿಗ್ಗಿಸುವುದು. ಬೇರೆಯವರ ಬವಣೆ ಯಿಂದ ಕೋಮಲ ಹೃದಯವು ಅಳುಕಿ, ತನ್ನ ಒಳಗಿನ ನೋವನ್ನು ಅಲ್ಲ ಗಳೆಯಲು ಅದು ಉಪಕಾರದ ರೂಪವನ್ನು ತಾಳುವುದು. ಈ ವೇರೆಗೆ ಪ್ರತಿಫಲವನ್ನು ಬಯಸದ ಪರಾರ್ಥಪ್ರವೀಣನು ಪರಮಾರ್ಥ ಸಾಧನದ ಒಂದು ಮೆಟ್ಟಿಲನ್ನು ಏರುವನು. ಇದಕ್ಕಾಗಿಯೇ, '**ದಯವೇ ಧರ್ಮದ ಮೂಲವಯ್ಯ ; ಉಪಕಾರ-ಧರ್ಮವೇ ಪರಮಾತ್ಮನ ಪರಧರ್ಮ**' ವೆಂದು ಹಿರಿಯರು ಉಸುರಿರುವರು.

ಪರಾರ್ಥವು ಸ್ವಾರ್ಥವಾದವನೇ ನಿಜವಾದ ಹಿರಿಯ. ಪರಾರ್ಥಕ್ಕಾಗಿ ಸ್ವಾರ್ಥದ ತ್ಯಾಗದಲ್ಲಿಯೇ ನಿಜವಾದ ಹಿರಿತನ.

೪. **ಹೇಗೆ ?** :—ಆದರೆ ಇದನ್ನು ಸಾಧಿಸುವುದೆಂತು ? ಅದರ ಒಂದು ರೀತಿಯನ್ನು ಹಿಂದೆ ಅರುಹಿದ್ದಾಗಿದೆ. ಪರಾರ್ಥವು ನಿಷ್ಕಾಮವಿರ ಬೇಕು. ಅದಕ್ಕೆ ವಿವೇಕದ ಬೆಂಬಲ ಬೇಕು. ಪರಾರ್ಥವನ್ನು ಮಾಡುವ ಪೂರ್ವದಲ್ಲಿ, ನಾವು ಸಾಧಿಸಲಿರುವುದು ಸರಿಯಾದ ಪರಾರ್ಥವೋ, ಅದ ರಿಂದವರ ನಿಜವಾದ ಕಲ್ಯಾಣವಾಗುವುದೋ, ಇತ್ಯಾದಿ ಸಂಗತಿಗಳನ್ನು ಚೆನ್ನಾಗಿ ಪರಿಶೀಲಿಸಬೇಕು. ಮತ್ತು ಸಾಧ್ಯವಿದ್ದಷ್ಟು ನಾವು ಅನ್ಯರನ್ನು ಸ್ವಾವಲಂಬಿಗಳನ್ನಾಗಿ ಮಾಡಲು ಹೆಣಗಬೇಕು. ಆ ದೃಷ್ಟಿಯಿಂದವರಿಗೆ ನಾವು ನೆರವನ್ನೀಯಬೇಕು. ಇಲ್ಲದೆ ಹೋದರೆ ನಮ್ಮ ದಾನವು ಅನ್ಯರಲ್ಲಿ ಅಲಸಿಕೆಯನ್ನು ಬೆಳೆಯಿಸಿ ಅವರಲ್ಲಿ ದೈನ್ಯದ ವ್ಯಸನವನ್ನು ಬೇರೂರಿಸಿದ ದೋಷಕ್ಕೆ ನಮ್ಮನ್ನು ಗುರಿಮಾಡಬಹುದು.

'ಕೊಟ್ಟು ಕುದಿಯಲು ಬೇಡ-ಕೊಟ್ಟು ಆಡಿಕೊಳ್ಳಬೇಡ ! ಕೊಟ್ಟು ನಾ ಕೆಟ್ಟೆನೆನಬೇಡ' ಎಂದು ಉಸುರಿರುವ ಸರ್ವಜ್ಞ. ಸಿಟ್ಟಾಗಿ ಕೊಡ ಬಾರದು. ಗರ್ವದಿಂದ ಕೊಡಬಾರದು. ದುಃಖದಿಂದ ಕೊಡಬಾರದು. ಆನಂದದಿಂದ ಕೊಡಬೇಕು. ಕರ್ತವ್ಯಬುದ್ಧಿಯಿಂದ ಕೊಡಬೇಕು.

೫. **ಉಪಸಂಹಾರ** :—They alone live, who live for

others, the rest are more dead than alive. ಪರರಿಗಾಗಿ ಬಾಳುವವರ ಬಾಳೇ ನಿಜವಾದ ಬಾಳು; ಉಳಿದವರ ಬಾಳು—ಬಾಳಲ್ಲ, ಹಾಳು!

## ೯. ಭಕ್ತಿ.

೧. **ಉಪಕ್ರಮ:**—ಭಕ್ತಿಯೇ ಮುಕ್ತಿಯ ಜನನಿ. ಅದೇ ನಿಜವಾದ ಪರಮಾರ್ಥ.

೨. **ಎಂದರೇನು?:**—ಪರಮಾತ್ಮನಲ್ಲಿಯ ಉತ್ಕಟವಾದ ಒಲವು-ಪ್ರೀತಿ.

೩. **ಮಾಡುವುದೇತಕ್ಕೆ?:**-(೧) ಪರಮಾತ್ಮನು ಜೀವನವನ್ನು ಕೊಟ್ಟಿರುವ; ಪಾಲನವನ್ನು ಮಾಡಲಿರುವ. ಕೃತಜ್ಞತೆಯನ್ನು ತೋರಿಸುವುದು ನಮ್ಮ ಕರ್ತವ್ಯ. (೨) ಅವನೇ ಬಲದ ಆಗರ; ಆನಂದದ ಸಾಗರ. ಭಕ್ತಿಯಿಂದ ಅವು ದೊರೆಯುವವು.

೪. **ಮಾಡುವುದೆಂತು?:**— ಒಳ್ಳೆಯ ಗ್ರಂಥಗಳನ್ನೋದಿ. ಒಳ್ಳೆಯವರ ಸಹವಾಸದಲ್ಲಿ ನಿಂತು. ಒಳ್ಳೆಯ ಕರ್ಮಗಳನ್ನು ಮಾಡಿ. ಅವನ ಸ್ಮರಣೆಯನ್ನು ಮಾಡಿ.

೫. **ಉಪಸಂಹಾರ:**—Trust in God and do the right. ದೇವರನ್ನು ನಂಬಿ ಸರಿಯಾದುದನ್ನು ಮಾಡಿರಿ!

## ಭಕ್ತಿ.

೧. **ಉಪಕ್ರಮ:**— ಮಾನವನ ಅನೇಕ ಬಯಕೆಗಳಲ್ಲಿ ತೀರ ಶ್ರೇಷ್ಠವಾದುದಾವುದು? ಯಾವುದನ್ನು ಸಾಧಿಸಿದರೆ ಎಲ್ಲವನ್ನೂ ಸಾಧಿಸಿದಂತಾಗುವುದು? ಅದರ ಸಾಧನವಾವುದು? ಇತ್ಯಾದಿಗಳನ್ನು ನಿಶ್ಚಯಿಸುವುದು ಪ್ರತಿಯೊಬ್ಬನ ಕರ್ತವ್ಯ.

೨. **ಎಂದರೇನು?:** —ಪರಮಾತ್ಮನೇ ನಮ್ಮ **ಪರಮ ಅರ್ಥ**, ಎಲ್ಲಕ್ಕೂ ಮಿಗಿಲಾದ ಅರ್ಥ. ಅವನನ್ನು ಅತ್ಯುತ್ಕಟವಾಗಿ ಪ್ರೀತಿಸುವುದೇ ಭಕ್ತಿ. ನಾವು ನಮ್ಮ ತಂದೆ-ತಾಯಿಂದಿರನ್ನು ಗುರು-ಹಿರಿಯರನ್ನು ಬೇರೆ ಬೇರೆ ಪ್ರಿಯ ಒಡವೆಗಳನ್ನು ಯಾವ ರೀತಿಯಿಂದ ಎಷ್ಟು ಪ್ರಬಲವಾಗಿ ಪ್ರೀತಿಸುವೆವೋ ಅದೇ ರೀತಿಯಿಂದ ಅದಕ್ಕೂ ಹೆಚ್ಚು ಪ್ರಬಲವಾಗಿ ಪರಮಾತ್ಮನನ್ನು ಪ್ರೀತಿಸುವುದೇ ಭಕ್ತಿಯು.

೩. **ಏಕೆ?:**—ನಾವು ಪರಮಾತ್ಮನನ್ನು ಅದೇಕೆ ಪ್ರೀತಿಸಬೇಕು? ಅದರಿಂದ ನಮಗೆ ದೊರೆಯುವುದೇನು? ಪರಮಾತ್ಮನು ನಮಗೆ ಜೀವನವನ್ನು ದಯಪಾಲಿಸಿರುವನು; ನಮ್ಮನ್ನು ಸಾಕುವನು, ಸಲಹುವನು; ನಮ್ಮ ಬಾಳಿಗೆ ಅತ್ಯವಶ್ಯವಾದ ಗಾಳಿ-ನೀರು-ಅನ್ನಗಳನ್ನು ವಿಪುಲವಾಗಿ ನೀಡಿರುವ.

ಹೀಗಿರಲು ಆತನಿಗೆ ನಮ್ಮ ಕೃತಜ್ಞತೆಯನ್ನಾದರೂ ನಾವು ಸಲ್ಲಿಸಬೇಡವೇ ?

**ಅನ್ನವನು ಕೊಟ್ಟವಗೆ ಎಲ್ಲವನು ನೀಡುವೆವು**
**ಜನ್ಮ ಕೊಟ್ಟವಗಿನ್ನು ಮರೆಯಬಹುದೇ ?**

ಇಂಥವನನ್ನು ಭಜಿಸುವುದು ನಮ್ಮ ಕರ್ತವ್ಯವಲ್ಲವೇ ?

ಮೇಲಾಗಿ ಪರಮಾತ್ಮನೇ ಬಲದ ಆಗರ-ಆನಂದದ ಸಾಗರ. ನಮ್ಮ ಬಾಳ್ವೆ ಚೆನ್ನಾಗಿ ಸಾಗಬೇಕಾದರೆ, ವೈಭವಪೂರ್ಣವಾಗಬೇಕಾದರೆ, ನಮಗೆ ಮಿಗಿಲಾದ ಬಲವು ಬೇಕು. ಹೆಚ್ಚಿನ ಆನಂದವು ಬೇಕು. ಅವನ್ನು ಪಡೆಯುವುದು ದೇವನಿಂದಲ್ಲದೆ ಇನ್ನಾರಿಂದ ? **ಅವನ್ನವನು** ನಮಗೆ ಸಲ್ಲಿಸಬೇಕಾದರೆ ನಮ್ಮ ಸೇವೆಯಿಂದ ಅವನಲ್ಲಿಯ ಕರುಣವು ಜಾಗೃತವಾಗಬೇಕಲ್ಲವೇ ? ನಾವವನನ್ನು ಭಕ್ತಿಯಿಂದ ಭಜಿಸಿದೆವೆಂದರೆ ಕರುಣಾಸಾಗರನಾದ ಆತನು ಅವನ್ನೆಲ್ಲ ನಮಗೆ ಕರುಣಿಸದಿರನು. ಅನಂತ ಕೈಗಳಿಂದ ಆತನು ನೀಡಲು ಮುಂದುವರಿದಾಗ ಎರಡು ಕೈಗಳಿಂದ ನಾವು ಎಷ್ಟೆಂದು ಸ್ವೀಕರಿಸಬಹುದು !

**೪. ಹೇಗೆ ? :—** ಭಕ್ತಿಯನ್ನು ಎರಡು ವಿಧದಿಂದ ಮಾಡುವುದುಂಟು. ಒಂದು **ಅಪ್ರತ್ಯಕ್ಷ.** ಒಂದು **ಪ್ರತ್ಯಕ್ಷ. ಸತ್-ಶ್ರವಣ, ಸತ್-ಸಂಗ, ಸತ್-ಕರ್ಮ.** ಇವು ಮೊದಲನೆಯ ವರ್ಗಕ್ಕೆ ಸೇರಿದವುಗಳು. ಪರಮಾತ್ಮನ ಮಹಿಮೆಯನ್ನು ಬಣ್ಣಿಸುವ ಒಳ್ಳೆಯ ಗ್ರಂಥಗಳನ್ನೋದಿ, ಒಳ್ಳೆಯ ಕೀರ್ತನೆ-ಉಪನ್ಯಾಸಗಳನ್ನು ಕೇಳಿ, ನಮ್ಮಲ್ಲಿಯ ಭಕ್ತಿಭಾವನನ್ನು ಜಾಗೃತಗೊಳಿಸುವುದು ಮೊದಲನೆಯ ಕೆಲಸ. ಮುಂದೆ ಹಿರಿಯರ ಪ್ರತ್ಯಕ್ಷ ಸಹವಾಸದಲ್ಲಿ ನಿಂತು ಅವರ ಮೇಲ್ಪಂಕ್ತಿಯನ್ನು ತೀಡಲು ಯತ್ನಿಸತಕ್ಕದ್ದು. ಅವರ ಆದರ್ಶವು ನಮ್ಮನ್ನು ಸಂತತವಾಗಿ ಮೇಲಕ್ಕೆ ಸೆಳೆಯುವುದು. ಕೆಳಗೆ ಬೀಳಗೊಡುವುದಿಲ್ಲ. ಅದರಿಂದ ಸ್ಫೂರ್ತಿಗೊಂಡು ಒಳ್ಳೆಯ ಕೆಲಸದಲ್ಲಿಯೆ ನಾವು ಸದಾ ತೊಡಗಿದೆವೆಂದರೆ ನಮ್ಮಲ್ಲಿ ಸತ್-ಪ್ರವೃತ್ತಿಯು ಇನ್ನಿಷ್ಟು ಬಲಿಯುವುದು.

**ಪರಮಾತ್ಮನ ನೆನವು ಭಕ್ತಿಯ ಪ್ರತ್ಯಕ್ಷ ರೀತಿ.** ಬಲ್ಲವರಿಂದ ಅದರ ರೀತಿಯನ್ನರಿತು ಎಡೆಬಿಡದೆ ಪರಮಾತ್ಮನನ್ನು ನೆನೆಯುವುದು ಭಕ್ತಿಯ ಹಿರಿಯ ಬಗೆ. ಅದರಿಂದ ಅವನು ಆವಿರ್ಭವಿಸಿ '**ಅನುಭಾವಯತಿ ಭಕ್ತಾನ್**' ಭಕ್ತರಿಗೆ ಕಾಣಿಸಿಕೊಳ್ಳುವನು. ಅವರನ್ನು ಕರುಣಿಸುವನು.

ಅವರ ಜೀವನವು ಸಫಲವಾಗುವುದು. ಅವರು ಸಂತಸದ ಕಡಲಲ್ಲಿ ಮುಳುಗುವರು.

೫. **ಉಪಸಂಹಾರ** :—ಆದುದರಿಂದ ಓರ್ವ ಆಂಗ್ಲ ಕವಿಯು ಉಸುರಿದ ಮೇರೆಗೆ ನಾವು '**ದೇವರನ್ನು ನಂಬಬೇಕು. ಒಳ್ಳೆಯುದನ್ನು** (ಭಕ್ತಿಯನ್ನು) **ಮಾಡಬೇಕು.** 'Trust in God and do the right' ಇದೇ ನಮ್ಮ ಗುರಿ! ಇದೇ ನಮ್ಮ ದಾರಿ!

## ೧೦. ಸತ್ಸಂಗ.

೧. ಉಪಕ್ರಮ:—ಜತೆಯಂತೆ ಮತಿ. ಶೀಲವು ಪರಿಸರದ ಫಲ. ಅನುಕರಣವು ಮಾನವನ ಸಹಜ ಧರ್ಮ.

೨. **ಎಂದರೇನು ?**:—ಸಜ್ಜನರ ಸಹವಾಸ ; ಅವರ ಜತೆಯಲ್ಲಿರೋಣ.

೩. **ಪ್ರಭಾವ**:—ಸುತ್ತಲು ಒಳ್ಳೆಯ ಆದರ್ಶ ವಾತಾವರಣ. ಸಹಜವಾಗಿ-ಅನಾಯಾಸವಾಗಿ ಪರಿಣಾಮ. ಹಿರಿಯರಿಂದ ಕಿರಿಯರಿಗೆ ಸ್ಫೂರ್ತಿ. ಉಪದೇಶಕ್ಕಿಂತ ಉದಾಹರಣೆ ಮೇಲು. ಮರ-ಬಳ್ಳಿ ; ಗಾಳಿ-ಹುಡಿ ; ಹೂ-ದಾರ.

೪. **ಉಪಸಂಹಾರ** :— ಜೀವನವೇ ಪಾವನವಾಗುವುದು. ಪ್ರಯತ್ನವಿಲ್ಲದೆ ಪ್ರಗತಿ. '**ಸಾಧನವಿಲ್ಲದೆ ಸನ್ಮಾರ್ಗ**'—ಶ್ರೀ ರಾಮದಾಸರು.

## ಸತ್ಸಂಗ.

೧. **ಉಪಕ್ರಮ** :—ಅನುಕರಣವು ಮಾನವನ ಸಹಜ ಪ್ರವೃತ್ತಿ. ಅವನು ಕಲಿಯುವುದು ಅನುಕರಣದಿಂದ, ಬಲಿಯುವುದು ಅನುಕರಣದಿಂದ. ಅವನನುಕರಿಸುವುದು ಪರಿಸರದವರನ್ನಲ್ಲದೆ ಇನ್ನಾರನ್ನು ? ಅವನದು **ಜತೆಯಂತೆ ಮತಿ**. ಆದುದರಿಂದ ಅವನ ಶೀಲವು ವಿಶೇಷವಾಗಿ ಅವನ ಪರಿಸರದ ಫಲ.

೨. **ಎಂದರೇನು ?** :—ಒಳ್ಳೆಯವರ ಸಹವಾಸವೇ ಸತ್ಸಂಗ. ಈ ಒಳ್ಳೆಯವರೆಂದರಾರು ? ವಿಪುಲ ಧನವುಳ್ಳವರೇ ? ಚುರುಕುಬುದ್ಧಿಯುಳ್ಳವರೇ ? ಕಸುವುಳ್ಳ ದೇಹವುಳ್ಳವರೇ ? ಇವರಾರು ಅಲ್ಲ. ಒಳ್ಳೆಯವರೆಂದರೆ ಒಳ್ಳೆಯ ಸ್ವಭಾವವುಳ್ಳವರು. ಒಳ್ಳೆಯ ಶೀಲವುಳ್ಳವರು, ಒಳ್ಳೆಯ ನಡತೆಯುಳ್ಳವರು. ಇವರೇ **ಸತ್-ಜನರು.** ಇವರ ಸಂಗವೇ ಸತ್ಸಂಗ.

೩. **ಬೇಕೇತಕ್ಕೆ ?** :— ಸಜ್ಜನರು ಕೆಲವೊಂದು ಆದರ್ಶಗಳ ಮೂರ್ತಿಗಳು. ಇವರ ಸುತ್ತಲು ಒಂದು ಬಗೆಯ ಆದರ್ಶ ವಾತಾವರಣವು ಪಸರಿಸಿರುವುದು. ಇವರ ನಡೆ-ನುಡಿ-ಎಲ್ಲದರಲ್ಲಿ ಅದು ಒಡಮೂಡಿರುವುದು.

ಇಂಥವರ ಹತ್ತಿರ ಇರುವುದರಿಂದ ಅವರ ಪರಿಣಾಮವು ನಮ್ಮ ಮನಸ್ಸಿನ ಮೇಲೆ ಅನಾಯಾಸವಾಗಿ ಆಗುವುದು. ನಾವವರಂತೆ ನಡೆಯಲು ಸಹಜ ವಾಗಿ ಕಲಿಯುವೆವು.

ಈ ಮೇರೆಗೆ ಹಿರಿಯರಿಂದ ಕಿರಿಯರಿಗೆ ಸ್ಫೂರ್ತಿ ದೊರೆಯುವುದು. **ಉಪದೇಶಕ್ಕಿಂತ ಉದಾಹರಣೆಯೆ ಮೇಲಾದದ್ದಿ**ರುವುದರಿಂದ ದೊರೆತ ಚೇತನವು ನಮ್ಮಲ್ಲಿ ಆಳವಾಗಿ ಇಳಿಯುವುದು. '**ಒಳ್ಳಿದರ ಒಡನಾಡಿ ಕಳ್ಳನೊಳ್ಳಿದನಕ್ಕು.**' ಮರವು ಬಳ್ಳಿಯನ್ನು ಮೇಲಕ್ಕೆತ್ತುವುದು; ಗಾಳಿಯು ಕಸಕ್ಕೆ ಬಾನಿನ ಸೊಬಗನ್ನು ತೋರಿಸುವುದು ; ಹೂಗಳ ಜೊತೆಯಲ್ಲಿ ದಾರವು ಮಾಹನೀಯರ ಕೊರಳನ್ನಲಂಕರಿಸುವುದು, ಮುಡಿಯನ್ನು ಮಂಡಿಸುವುದು.

ಸಜ್ಜನರು ನಮ್ಮಲ್ಲಿಯ ಕೀಳ್ಮೆಯನ್ನು ಕಳೆದು ನಮ್ಮನ್ನು ಉನ್ನತ ಗುರಿಯೆಡೆಗೆ ಒಯ್ಯುವರು. ಅವರ ಜತೆಯಲ್ಲಿ ಈ **ಉನ್ನತಿ ಪಥವು** ನಮಗೆ ದುಃಖಪ್ರದವಾಗದೆ ಸುಖಪ್ರದವಾಗುವುದು. ಆದುದರಿಂದಲೇ ಸತ್ಸಂಗವು ಸಹಜವಾಗಿ ಸನ್ಮಾರ್ಗವನ್ನು ತೋರಿಸುವುದು ಎಂದು ಹಿರಿಯರ ಮತ.

೪. **ಹೇಗೆ? :**—ಆದರೆ ಈ ಸತ್ಸಂಗವನ್ನು ಪಡೆವುದೆಂತು? ಅಲ್ಲಿ ನಾವು ನಡೆವುದೆಂತು? ಆದರ್ಶ ಜೀವನದ ಪ್ರಬಲವಾದ ಬಯಕೆಯು ನಮಗೆ **ಸಂತರನ್ನು** ತೋರಿಸುವುದು. ಅವರು ಸಜ್ಜನರಹುದೋ ಅಲ್ಲವೋ ಎಂಬುದನ್ನು ಸೂಕ್ಷ್ಮರೀತಿಯಿಂದ ಕಂಡುಹಿಡಿದು ತರುವಾಯ ಅವರ ಬಳಿ ಸಲ್ಲಲು ಪ್ರಾರಂಭಿಸಬೇಕು. ನಮ್ಮ ನಮ್ರತೆಯಿಂದ ಅವರ ಹೃದಯವು ತೆರೆಯಿತೆಂದರೆ, ಅವರ ಅಂತರಂಗದ ಪರಿಚಯವು ನಮಗಾಗತೊಡಗುವುದು. ಕೊಬ್ಬಿದವರ ಪಾಲಿಗೆ ಬರಿಯ ಬೊಬ್ಬೆಯ ಹಬ್ಬ, ಇನ್ನೊಂದಿಲ್ಲ.

ವಿನಯದಿಂದವರ ಬಳಿ ನಿಂತು, ಅವರಲ್ಲಿಯ ಗುಣಗಳನ್ನಷ್ಟೆ ಸ್ವೀಕರಿಸ ತಕ್ಕದ್ದು. '**ನಮ್ಮಲ್ಲಿಯ ಸುಚರಿತಗಳನ್ನಷ್ಟೇ ನೀವು ಸ್ವೀಕರಿಸಿರಿ! ಇನ್ನುಳಿದ ವಿಷಯಗಳನ್ನಲ್ಲ!**' ಎಂದು ನಮ್ಮ ಉಪನಿಷತ್ತುಗಳ ಮುನಿಗಳ ಉಪದೇಶವಿದೆ. ಎಷ್ಟು ಯಥಾರ್ಥ ಮಾತಿದು! ಯಾಕೆಂದರೆ ಈ ಜಗತ್ತಿನಲ್ಲಿ ಪೂರ್ಣತೆಯೂ ತೀರ ವಿರಲ. ಗುಣದೋಷಗಳ ಬೆರಕೆಯೆ ಎಲ್ಲರಲ್ಲಿ. ಗುಣ ಗಳು ಹೆಚ್ಚಿದ್ದವರು ಹಿರಿಯರು; ದೋಷಗಳು ವಿಪುಲವಾಗಿದ್ದವರು ಕೀಳರು. ಆದುದರಿಂದ ನಾವು ಆರಿಸಿದ ಹಿರಿಯರಲ್ಲಿಯೂ ದೋಷಗಳಿರುವುದು ಸಹಜ.

ಮತ್ತು ದೋಷಗಳ ಅನುಕರಣವು ಅಷ್ಟೇ ಸಹಜ. ಅದಕ್ಕಾಗಿ ನಾವು ಪ್ರಯತ್ನಪೂರ್ವಕವಾಗಿ ದೋಷಗಳನ್ನು ತೊರೆದು ಗುಣಗಳನ್ನು ಅರಸುವುದು.

೫. **ಉಪಸಂಹಾರ:**—ಹೀಗೆ ನಾವು ಮಾಡಿದೆವೆಂದರೆ ನಮ್ಮ ಜೀವನವು ಪಾವನವಾಗುವುದು. ಪ್ರಯತ್ನವಿಲ್ಲದೆ ನಮ್ಮ ಪ್ರಗತಿಯಾಗುವುದು. **ಸಾಧನವಿಲ್ಲದೆ ನಮಗೆ ಸನ್ಮಾರ್ಗ ದೊರೆಯುವುದು** ಎಂದು ಶ್ರೀ ಸಮರ್ಥರ ಆಶ್ವಾಸನ.

## ೨ ನೆಯ ಗುಂಪು–ಸಮಸ್ಯೆಗಳು.

## ೧. ಜೀವನದ ಆದರ್ಶ.

೧. **ಉಪಕ್ರಮ:**—ಆದರ್ಶದ ಮಹತ್ವ:—ಗಾಳಿಯ ಚುಕ್ಕಾಣಿಯಿದ್ದಂತೆ. ಅದು ಮೇಲಕ್ಕೆತ್ತುವುದು. ಪ್ರವಾಸಿಯು ತಾನು ಮುಟ್ಟಬೇಕಾದ ಸ್ಥಲವನ್ನು ಮೊದಲು ಗೊತ್ತುಪಡಿಸಬೇಕು.

೨. **ಎಂದರೇನು?:**—ಆದರ್ಶವೆಂದರೆ ಗುರಿ. ನಮ್ಮ ಜೀವನದ ಪ್ರವಾಹವು ಯಾವ ಮಹಾಸಾಗರವನ್ನು ಸೇರಬೇಕು? ಎಲ್ಲಿ ಹೋಗುವುದರಿಂದ ಮುಂದೆ ಸಾಗುವ ಆಕಾಂಕ್ಷೆಯು ಅಳಿಯುವುದೋ ಅದೇ ಗುರಿ.

೩. **ಯಾವುದಿದೆ?:**—ಹೆಣ್ಣು, ಹೊನ್ನು, ಮಣ್ಣು, ಎಲ್ಲರೂ ಇವನ್ನೆಯೆ ಬಯಸುವರು. ಇವುಗಳಿಗಾಗಿ ಹೆಣಗುವರು. ಮೇಲಿನ ನಿಕಷವನ್ನುಪಯೋಗಿಸಿದರೆ ಇವುಗಳ ಸ್ಥಾನವೆಲ್ಲಿ?

೪. **ಯಾವುದಿರಬೇಕು?:**—

ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।
ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥

ಪರಾರ್ಥ ಪರಮಾರ್ಥ.

೫. **ಉಪಸಂಹಾರ:**—ಆದರ್ಶ ಜೀವಿಗಳೇ ಸಮಾಜದ ಉದ್ಧಾರಕರು.

## ಜೀವನದ ಆದರ್ಶ.

೧. **ಉಪಕ್ರಮ:**—ಪ್ರವಾಸಿಯು ತಾನು ಹೋಗಬೇಕಾದ ಸ್ಥಲವನ್ನು ಮೊದಲು ಗೊತ್ತುಮಾಡಿ ತರುವಾಯ ಅದರೆಡೆಗೆ ನೇರವಾಗಿ ಸಾಗುವನು. ಅದೇ ಗೊತ್ತಿಲ್ಲದವನು ಅತ್ತಿತ್ತ ಸುತ್ತಾಡಿ ಎತ್ತಲೋ ಸಾಗುವನು. ಅವನದು ಪ್ರವಾಸದಲ್ಲಿ ಅಲೆದಾಟ. ಈ ಸುತ್ತಾಟದಲ್ಲಿಯೇ ಅವನೊಂದು ದಿನ ಸತ್ತುಹೋಗುವುದುಂಟು.

೨. **ಎಂದರೇನು?:**—ನಮ್ಮ ಜೀವನವು ಒಂದು ಪ್ರವಾಸ. ನಾವು ಎಲ್ಲಿಂದಲೋ ಬಂದು ಎಲ್ಲಿಯೋ ತೆರಳುವೆವು. ಗುರಿಯು ಗೊತ್ತಿದ್ದವರು

ಸರಿಯಾಗಿ ಆದರೆಡೆಗೆ ಸಾಗುವರು. ಉಳಿದವರ ಜೀವನವು ಚುಕ್ಕಾಣಿಯಿಲ್ಲದ ಹಡಗಿನ ಹೊರಳಾಟ. ಅದು ಅದಾವ ಬಂಡೆಗಳಿಗೆ ತಾಗಿ ಅದೆಂದು ಒಡೆಯುವುದೋ ಹೇಳುವವರಾರು? ಆದುದರಿಂದ ನಮ್ಮ ಜೀವನ ವಾಹಿನಿಯು ಯಾವ ಮಹಾಸಾಗರವನ್ನು ಸೇರಬೇಕು? ಎಲ್ಲಿ ಸಾಗುವುದರಿಂದ ಮುಂದುವರಿಯುವ ಬಯಕೆಯು ಉಳಿಯಲಿಕ್ಕಿಲ್ಲ? ಇಂಥ ಗುರಿಯನ್ನು, ಆದರ್ಶವನ್ನು, ನಿಶ್ಚಯಿಸುವುದು ನಮ್ಮೆಲ್ಲರ ಕರ್ತವ್ಯವಲ್ಲವೇ?

೩. **ಯಾವುದಾಗಿದೆ? :—** ಇಂದು ನಮ್ಮ ಗುರಿಯು ಯಾವುದಾಗಿದೆ! ನಿಜವಾಗಿ ಗುರಿಯನ್ನರಿತು ಹೊರಟವರು ತೀರ ವಿರಲ! ಆದಕಾರಣ ನಮ್ಮ ಜೀವನವು ಎತ್ತ ಸಾಗಿದೆ ಎಂದು ವಿಚಾರಿಸುವುದೇ ಹೆಚ್ಚು ಉಚಿತ. ಪೃಥಕ್ಕರಣ ಮಾಡಿದರೆ ನಮಗೇನು ತೋರುವುದು? ನಮ್ಮ ಹಿಂದಿನ ಹಿರಿಯರು ಉಸುರಿದಂತೆ, **ಹೆಣ್ಣು, ಹೊನ್ನು, ಮಣ್ಣು** ಇವೇ ನಮ್ಮನ್ನು ಸೆಳೆಯುವ ಆದರ್ಶಗಳು. ನಮ್ಮಲ್ಲಿಯ ಕೆಲವರು ಹೆಣ್ಣಿಗಾಗಿ, ಕೆಲವರು ಹೊನ್ನಿಗಾಗಿ, ಬೇರೆ ಕೆಲವರು ಮಣ್ಣಿಗಾಗಿ ಮನ್ನಣೆಗಾಗಿ ಹೆಣಗುತ್ತಿರುವರು. ಎಲ್ಲರೂ ಬಯಸುವುದು ಅವನ್ನೆಯೆ. ಎಲ್ಲರೂ ಹೋರಾಡುವುದು ಅವಕ್ಕಾಗಿಯೇ!

ಎಂದಿನಿಂದಲೂ '**ಜೀವನ ಕಲಹವು**' ನಡೆದುದು ಇದಕ್ಕಾಗಿಯೇ; ಅದು ಜೀವನಕ್ಕಾಗಿ ಅಲ್ಲ. ಬಹುಕಾಲ ಬಾಳಬೇಕು; ಚೆನ್ನಾಗಿ ಬಾಳಬೇಕು, ಉನ್ನತವಾಗಿ ಬಾಳಬೇಕು. ಇದು ಮಾನವನ ಗುರಿಯಾಗಿದ್ದಂತೆ ಕಾಣುವುದಿಲ್ಲ. **ಆದಷ್ಟು ಬೇಗ, ಆದಷ್ಟು ಹೆಚ್ಚು ಇಂದ್ರಿಯ ಸೌಖ್ಯವನ್ನುಣ್ಣುವುದು ಮಾನವನ ಬಲವಾದ ಬಯಕೆ.** ಇದಕ್ಕಾಗಿ ಅವನ ಯತ್ನ. ಇದರಲ್ಲಿಯೆ ಅವನ ಕೊನೆ.

೪. **ಯಾವುದಾಗಿರಬೇಕು? :— ಚಿರಸುಖವು – ಅಳಿಯದ ಆನಂದವು** ಮಾನವನ ಗುರಿಯಾಗಿರಬೇಕು. 'ಆವುದನ್ನು ಮೀರಿದ ಲಾಭವಿಲ್ಲವೋ ಆವುದನ್ನು ಪಡೆದವನಿಗೆ ದುಃಖವಿಲ್ಲವೋ' ಇಂಥ ಸ್ಥಿರವಾದ ಗುರಿ ನಮ್ಮನ್ನು ಮೇಲಕ್ಕೆತ್ತುವುದು. ವಿಷಯ ಸುಖವು ಅಚಿರವಾದುದು. ಅದರ ಭೋಗದಿಂದ ಬಲವು ಕುಂದುವುದು, ನಮ್ಮ ಅಸಂತೋಷವು ಹೆಚ್ಚಾಗುವುದು. ಆದುದರಿಂದ ಅದನ್ನರಸದೆ **ಚಿರವಾದ ಶಾಂತಿಯನ್ನು** ಪಡೆಯಲು ಯತ್ನಿಸುವುದು ಎಲ್ಲರ ಕರ್ತವ್ಯ.

ಈ **ಚಿರಸುಖವು** ನೆಲೆಸಿರುವುದು ಪರಮಾತ್ಮನಲ್ಲಿ. **ಅವನೇ ಸುಖದ ಆಗರ, ಸಂತಸದ ಸಾಗರ.** ಅದಕ್ಕಾಗಿ ಪರಮಾತ್ಮಪ್ರಾಪ್ತಿಯೇ ಅವನ್ನು ಪಡೆಯುವ ಒಂದೇ ಒಂದು ಸಾಧನ. ಅದೇ ನಮ್ಮ ಹಿರಿಗುರಿಯು, ಜೀವನದ ಆದರ್ಶವು ಆಗಿರಬೇಕು.

೫. **ಉಪಸಂಹಾರ:**—ಈ ಬಗೆಯ ಆದರ್ಶವನ್ನು ಹಿಂಬಾಲಿಸುವ ಜೀವನವು ಎಲ್ಲರಿಗೂ ಆದರ್ಶಭೂತವಾಗದಿರದು. ಇಂಥವರೆ ಸಮಾಜದ ಆದರ್ಶ ಹಿರಿಯರು, ಉನ್ನತ ಉದ್ಧಾರಕರು.

## ೨. ಆದರ್ಶ ಹಿರಿಯರು.

೧. **ಉಪಕ್ರಮ:**—ಹಿರಿಯರೇ ಕಿರಿಯರಿಗೆ ಮೇಲ್ಪಂಕ್ತಿ. ಅವರು ವರ್ತಿಸಿದಂತೆ ಇವರು ನಡೆಯುವರು. ಅವರಂತೆ ಇವರು.

೨. **ಅವರ ಲಕ್ಷಣ:**—ಮೈಬಲವಲ್ಲ, ಬುದ್ಧಿ ಬಲವಲ್ಲ, ಧನಬಲವಲ್ಲ, ಜನಬಲವಲ್ಲ, ಬಿರುದುಗಳಲ್ಲ, ಸೌಂದರ್ಯವಲ್ಲ. ಅಂತರಂಗದ ಕೋಮಲತೆ-ಪಾವಿತ್ರ್ಯ-ವೈಶಾಲ್ಯ-ಶೀಲ ಬಲವೇ ಹಿರಿತನದ ಹಿರಿಕುರುಹು.

೩. **ಅವರ ಪ್ರಭಾವ:**— ಅವರಿಂದ ಸ್ಫೂರ್ತಿ, ವ್ಯಕ್ತಿಯ, ಸಮಾಜದ, ರಾಷ್ಟ್ರದ, ಉದ್ಧಾರ. ಅವರೇ ಸಮಾಜದ ಮುಂದಾಳುಗಳು. ಅವರಿಲ್ಲದಿದ್ದರೆ ಸಮಾಜವು ಕೊಳೆಯುವುದು, ಅಳಿಯುವುದು.

೪. **ಅವರ ಬರವು:**—ಸಮಾಜಕ್ಕೆ ಬೇಕಾದರೆ ಅವರು ಬರುವರು. 'ಸತ್ಯವಂತರು ಸತ್ತರೆಂದೆನಬೇಡ! ಹೆತ್ತ ತಾಯಿ ಮಗನ ಕರೆವಂತೆ ಅವರು' ನಮ್ಮನ್ನುದ್ಧರಿಸುವರು.

೫. **ಉಪಸಂಹಾರ:**—ಆದುದರಿಂದ ಹಿರಿಯರ ಆದರ್ಶವನ್ನು ಎದುರಿಗಿಟ್ಟು ಆದರ್ಶ ಹಿರಿಯರಾಗಲು ಪ್ರಯತ್ನಿಸಬೇಕು.

## ಆದರ್ಶ ಹಿರಿಯರು.

೧. **ಉಪಕ್ರಮ:** — ಹಿರಿಯರೇ ಯಾವಾಗಲೂ ಕಿರಿಯರಿಗೆ ಮೇಲ್ಪಂಕ್ತಿ. ಅವರು ನಡೆದಂತೆ ಇವರು ನಡೆಯುವರು. ಅವರು ನುಡಿದಂತೆ ಇವರು ನುಡಿಯುವರು. ಕಿರಿಯರು ಹಿರಿಯರ ಪಡಿನುಡಿ, ಪಡಿನೆಳಲು. ಸರಿಯಾದ ಹಿರಿಯರಿದ್ದಲ್ಲಿ, ಸರಿಯಾದ ಕಿರಿಯರಿರುವರು. ಆದುದರಿಂದ ನಮ್ಮ ಹಿರಿತನದ ಕಲ್ಪನೆಯು ಸರಿಯಾದುದಿರುವುದು ಅತ್ಯವಶ್ಯ.

೨. **ಅವರ ಕುರುಹು:**—ನಿಜವಾದ ಹಿರಿಯರಾರು? ಅವರ ಹಿರಿ ಕುರುಹು ಆವುದು? ಹಿರಿತನದ ಯಥಾರ್ಥವಾದ ಲಕ್ಷಣವು, ಮೈ

ಬಲವಲ್ಲ; ಬುದ್ಧಿಬಲವಲ್ಲ; ಧನಬಲವಲ್ಲ; ಬಿರುದಿನ ಬಲವಲ್ಲ; ಸೊಬಗಿನ ಐಸಿರಿಯಲ್ಲ. ಇವುಗಳೆಲ್ಲಾವುದೂ ನಿಜವಾದ ಹಿರಿಯರ ಲಕ್ಷಣವಲ್ಲ. ಇವನ್ನು ವಿಪುಲವಾಗಿ ಪಡೆದ ಅನೇಕರು ತೀರ ಕೀಳ-ಹುಳುಗಳಾಗಿರುವ ಸಂಭವವುಂಟು. ನೀಚ ಸ್ವಾರ್ಥದ ಕೋಳಿಸಿನಲ್ಲಿ ಸಿಂತು, ಇವರು ಬೇರೆ ಬೇರೆ ಅಂಟುರೋಗಗಳ ಜನರಾಗಿ-ಸಮಾಜದ ಆರೋಗ್ಯವನ್ನೂ ಶಾಂತಿಯನ್ನೂ ಕೆಡಿಸುವುದುಂಟು.

**ಆಳವಾದ ವಿವೇಕ, ಅಗಲವಾದ ಹೃದಯ, ನಿಮಲವಾದ ಚಾರಿತ್ರ್ಯ** ಇವೇ ನಿಜವಾದ ಹಿರಿಯರ ನಿಶ್ಚಿತವಾದ ಲಕ್ಷಣಗಳು. ಇಂಥವರೇ ಹಿರಿಯರೆಂದರಿಯಬೇಕು, ಮಿಕ್ಕವರು ಕೀಳ-ಕಿರಿಯರು.

**೩. ಇವರ ಪ್ರಭಾವ:**—ಇಂಥ ಹಿರಿಯರು ನವ ಜೀವನದ, ನವ ಸ್ಫೂರ್ತಿಯ ಚಿಲುಮೆಗಳು. ಜನಸಾಮಾನ್ಯರು ಇವರಿಂದ ನವಚೈತನ್ಯವನ್ನು ಪಡೆದು ನವಕಾರ್ಯವನ್ನು ನೆರವೇರಿಸಲು ಸಮರ್ಥರಾಗುವರು. ಇವರ ಸಾನ್ನಿಧ್ಯದಿಂದ ಕಿರಿಯರು ಕೂಡ ಹಿರಿಯರಾಗುವರು. ಪರುಷದ ಕೇವಲ ಸ್ಪರ್ಶದಿಂದ ಕಬ್ಬಿಣವು ಹೊನ್ನಾಗುವುದಿಲ್ಲವೇ? ಇವರ ಉಜ್ವಲ ಉದಾಹರಣೆಯು ಅನೇಕರಲ್ಲಿ ಮೇಲಿನಂತೆ ಅದ್ಭುತ ಮಾರ್ಪಾಟನ್ನು ಮಾಡುವುದುಂಟು.

ಇವರೇ ವ್ಯಕ್ತಿಯಂತೆ ಸಮಾಜವನ್ನೂ ರಾಷ್ಟ್ರವನ್ನೂ ಉದ್ಧರಿಸುವರು. ಇವರ ಮೇಲ್ಪಂಕ್ತಿಯೆ ಅವರನ್ನು ಮೇಲಕ್ಕೆತ್ತುವುದು. ಆದರ್ಶದ ಮೂರ್ತಿಗಳಾದ ಇವರು ರಾಷ್ಟ್ರದ ಎದುರು ಯೋಗ್ಯವಾದ ಆದರ್ಶಗಳನ್ನಿಟ್ಟು ಅದನ್ನು ಕೆಳಕ್ಕೆ ಬೀಳಗೊಡುವುದಿಲ್ಲ. ಇವರಿಲ್ಲದೆ ಹೋದರೆ ಸಮಾಜವು ಕೀಳ್ಮೆಯಲ್ಲಿ ಕೊಳೆಯುವುದು, ಅತಿ ಬೇಗ ಅಳಿಯುವುದು.

**೪. ಇವರ ಬರವು:**—ಯಾವ ಕಾಲದಲ್ಲಿಯೆ ಆಗಲಿ, ಇಂಥ ಮಹನೀಯರು ಪ್ರತಿಯೊಂದು ಸಮಾಜದಲ್ಲಿ ಇದ್ದೇ ಇರುವರು. ಆದರೆ ಸಾಮಾನ್ಯವಾಗಿ ಇವರಿರುವುದು ಮರೆಯಾಗಿ. ಮುಂದೆ ಬಂದು ಮೆರೆಯುವುದು ಇವರ ಸ್ವಭಾವಕ್ಕೆ ಸರಿಹೋಗದ ಮಾತು. ತನ್ನ ವಿಲಾಸದಲ್ಲಿಯೆ ವಿಲೀನವಾದ ಸಮಾಜವು ಇವರನ್ನು ಉಪೇಕ್ಷಿಸಿ, ಬೇರೆ ಕೀಳು ಆದರ್ಶಗಳನ್ನು ಹಿಂಬಾಲಿಸುವುದು. ಮುಂದೆ ಕೆಲಕಾಲ ಕಳೆದ ಮೇಲೆ ಅದು ಅವುಗಳ ಕಟು ಫಲಗಳನ್ನುಣ್ಣುವ ಸಮಯವೊದಗಿತೆಂದರೆ ತುಂಬಾ ಗೋಳಾಡಿ, ತರುವಾಯ ಇವರ

ನ್ನರಸಲು ತೊಡಗುವುದು, ಆತುರದಿಂದ ಇವರ ಬರವನ್ನು ಕಾಯುತ್ತ ಕುಳಿತುಕೊಳ್ಳುವುದು. ಆಗ ಇವರ ಪ್ರಕಟನ—ಆಗಮನ. ಮರಳಿ ಸಮಾಜದ ಸುಸ್ಥಿತಿ—ಉದ್ಧಾರ.

"**ಸತ್ಯವಂತರು** ನೀವು ಸತ್ತರೆಂದೆನಬೇಡ" ಎನ್ನುವ ಸರ್ವಜ್ಞ. "ಹೆತ್ತಮ್ಮ ಮಗನ ಕರೆವಂತೆ ಅವರು ನಿನ್ನನ್ನೆತ್ತಿಕೊಂಬುವರು. ಹೆದರಬೇಡ" ಎಂದುಸುರುವನವನು. ಇವರಿರುವವರೆಗೆ ನಮಗೆ ಉದ್ಧಾರವೆ ಆಶೆ.

೫. **ಉಪಸಂಹಾರ**:—ಆದುದರಿಂದ ಹಿರಿಯರ ಆದರ್ಶವನ್ನಿದುರಿಟ್ಟುಕೊಂಡು ಆದರ್ಶ ಹಿರಿಯರಾಗಲು ಯತ್ನಿಸಿದವರು ಹಿರಿದಾದ ಕಾರ್ಯವನ್ನು ಮಾಡಲು ಸಮರ್ಥರಾಗದಿರರು.

## ೩. ಗೆಲವಿನ ಗುಟ್ಟು.

೧. **ಉಪಕ್ರಮ**:—ಎಲ್ಲರಿಗೆ ಗೆಲವು ಬೇಕು. ಸೋಲು ಬೇಡ. ಆದರೆ ಗೆಲವಿನ ಗುಟ್ಟನ್ನರಿತವರು ವಿರಲ. ಅದಕ್ಕೆ ಅದಾವ ಸಂಗತಿಗಳು ಅತ್ಯವಶ್ಯ ?

೨. **ವಿವೇಕ**:—ಯಾವ ವಿಷಯದಲ್ಲಿ ಗೆಲವು ಬೇಕಾಗಿದೆಯೋ ಅದರ ಸಾಂಗ-ಉಪಾಂಗ-ಪರಿಜ್ಞಾನ. ಗೆಲವಿಗೆ ಬೇಕಾದ ಸಾಧನಗಳ ಪೂರ್ಣ ಪರಿಚಯ. ತನ್ನ ಸಾಮರ್ಥ್ಯದ ಅರಿವು.

೩. **ತ್ಯಾಗ**:—ಅದನ್ನು ಪಡೆಯಲು ಮಾಡಬೇಕಾದ ತ್ಯಾಗದ ಸಿದ್ಧತೆ. ಕೊಡದೆ ಪಡೆಯಲು ಬರುವಂತಿಲ್ಲ. ತ್ಯಾಗದಿಂದಲೇ ಗೆಲವಿನ ಯೋಗ-ಭೋಗ.

೪. **ನಿಶ್ಚಯ**:—ಗೆಲವನ್ನು ಪಡೆದೇ ತೀರುವೆನೆಂಬ ದೃಢ ಸಂಕಲ್ಪ. ಅದರಲ್ಲಿ ಅವಿಚಲಿತ ಸ್ಥೈರ್ಯ.

೫. **ಪ್ರಯತ್ನ**:—ಸಂತತವಾದ ಪ್ರಯತ್ನವನ್ನು ಪುನಃ ಪುನಃ ದಕ್ಷತೆಯಿಂದ ಸಾಗಿಸಬೇಕು.

೬. **ಉಪಸಂಹಾರ**:—ಮೇಲಿನ ನಾಲ್ಕು ಗುಣಗಳಲ್ಲಿಯೆ ಗೆಲವು ಅಡಗಿರುವುದು. ಇವಿದ್ದವರಿಗೆ ಗೆಲವು ಊಳಿಗದಾಳು.

## ೪. ಜೀವನ ಕಲೆ.

೧. **ಉಪಕ್ರಮ**:—ಜೀವನಕಲಹ. ಕಲಹವೆತ್ತ! ಕಲೆಯೆತ್ತ! ಕಲಹದಲ್ಲಿ ಕಲೆಯು ಸಾಧ್ಯವೇ ?

೨. **ಕಲೆಯ ಗುರಿ**:—ಯಂತ್ರಕಲೆ ಮೈಸುಖವನ್ನು ನೀಡುವುದು; ಕುಶಲಕಲೆ ಮನವನ್ನು ತಣಿಸುವುದು; ಸೌಂದರ್ಯೋಪಾಸನೆಯು ಅದರ ಸಾಧನ.

೩. **ಜೀವನಕಲೆ**:—ಜೀವನವೇ ಕಲೆಯಾಗಬೇಕು. ಸೌಂದರ್ಯೋಪಾಸನೆಯನ್ನು ಮಾಡಬೇಕು. ಜೀವನವು ಅಂತರ್ಬಾಹ್ಯ ಸುಂದರವಾಗಬೇಕು.

೪. ಬಾಹ್ಯಸೌಂದರ್ಯ :—ಮನೆ, ಪೈರು, ನಡೆ, ನುಡಿ, ಸುಂದರ. ಅದರಲ್ಲಿ ಕೃತ್ರಿಮತೆ ಇರದೆ ಸ್ವಾಭಾವಿಕತೆ ಇರಬೇಕು.

೫. ಅಂತಃಸೌಂದರ್ಯ :—ಸ್ವಭಾವದಲ್ಲಿ ಬದಲು-ಆತ್ಮವಿಕಾಸದಿಂದ ಸಾಧ್ಯ-ಸುಶೀಲ.

೬. ಉಪಸಂಹಾರ :—ಇಂಥ ಮಾದರಿಯ ಸಜೀವ ಕಲಾಕೃತಿಗಳು ಇಡೀ ನಾಡನ್ನೆಯೇ, ವಿಶ್ವವನ್ನೆಯೇ, ಸಿಂಗರಿಸದಿರವು.

## ೫. ಸಂಕಟಿಗಳ ಸೌಭಾಗ್ಯ.

೧. ಉಪಕ್ರಮ :—ಆಪದಃ ಸಂತು ನಃ ಶಶ್ವತ್ ಏನ ಸಂಸ್ಮರ್ಯತೆ ಹರಿಃ | (ಏತರಿಂದ ಹರಿಯ ನೆನಪಾಗುವುದೊ ಆ ಆಪತ್ತುಗಳು ನನ್ನೆಡೆ ಸಂತತವಾಗಿ ಇರಲಿ) — ಕುಂತಿದೇವಿಯ ಬೇಡಿಕೆ.

೨. ವಿರೋಧ :—ಸಂಕಟವು ದೌರ್ಭಾಗ್ಯದ ಕುರುಹು, ಅಲ್ಲಿ ಸೌಭಾಗ್ಯವೆಲ್ಲಿ ಯದು ? ತೋರಿಕೆಗೆ ಇದು ಸರಿಯಾದುದು. ಆಳವಾದ ವಿಚಾರದಿಂದ ಇದು ಅಳಿಯುವುದು. ಸಂಕಟವು ಅನೇಕ ದೃಷ್ಟಿಯಿಂದ ಉಪಯುಕ್ತ.

೩. ಶಕ್ತಿಸಂವರ್ಧನ :—ಆಂತರಿಕ ಶಕ್ತಿಗಳಿಗೆ ವ್ಯಾಯಾಮ. ತಾಳ್ಮೆ, ಧೈರ್ಯ, ಸಾಹಸಗಳ ಉದಯ. ಮಾನವನು ಪ್ರಬಲನಾಗುವನು- ಪೂರ್ಣನಾಗುವನು.

೪. ಪರೀಕ್ಷಾಕಾಲ :—ಒರೆಗಲ್ಲು- ನಮ್ಮ ಯೋಗ್ಯತೆ ನಮಗೆ ತಿಳಿಯುವುದು ಅಗ್ನಿಯಲ್ಲಿ ಬಂಗಾರ, ಮೇಲಾದದ್ದು ಹೆಚ್ಚಿಗೆ ಹೊಳೆಯುವುದು, ಕೀಳಾದದ್ದು ಹೆಚ್ಚಿಗೆ ಕಪ್ಪಾಗುವುದು.

೫. ಪರಮಾತ್ಮನ ನೆನವು :—ಅಹಂಕಾರನಾಶ-ಅಸುರವೃತ್ತಿಯಳಿದು ದೈವೀ ವೃತ್ತಿಯ ಉದಯ. ಭಕ್ತಿಯ ಬೆಳೆ.

೬. ಉಪಸಂಹಾರ:—ಸುಖಂ ಹಿ ದುಃಖಾನ್ಯನುಭೂಯ ಶೋಭತೇ | ಸಂಕಟವು ಸಂತಸದ ಬೆಲೆಯನ್ನು ಹೆಚ್ಚಿಸುವುದು.

## ೩ ನೆಯ ಗುಂಪು—ತತ್ವಗಳು.

## ಮುಹೂರ್ತಂ ಜ್ವಲಿತಂ ಶ್ರೇಯಃ

## (ಅರಗಳಿಗೆಯಾದರೂ ಹೊಳೆಯುವುದೇ ಮೇಲು)

ಉಪಕ್ರಮ :—'ಅದೊಂದು ಬೆಳಕಿನ ಬಳ್ಳಿಯಿತ್ತು, ಮಿಂಚಿನ ಮಲರಿತ್ತು' ಒಂದು ಮಗುವಿನ ಬಗ್ಗೆ ಓರ್ವ ಕವಿಯ ಅಭಿಪ್ರಾಯ. ಇಂಥ ಬಾಳೇ ಬಾಳು.

೨. ವಿಶದೀಕರಣ :—ಬಹುಕಾಲ ಕೊಳೆಯುವುದಕ್ಕಿಂತ, ಕೆಲಕಾಲ ಹೊಳೆಯುವುದು ಮೇಲು. ಕಾಲಕ್ಕೆ ಬೆಲೆಯಿಲ್ಲ; ಕಾಂತಿಗೆ ಬೆಲೆ, ತೇಜಸ್ಸಿಗೆ ಮಹತ್ವ.

೩. ಏಕೆ ? :—

೧ನೆಯ ಕಾರಣ :—ಅನ್ಯರಿಗೆ ಹಿತ. ಹೂವಿನಿಂದ ಸಂತಸ. ಮಿಂಚಿನಿಂದ

ಬೆಳಕು. ತೇಜಸ್ಸುಳ್ಳವರಿಂದ ನೆರವು. ಅದೇ ಕತ್ತಲೆಯಿಂದ ಕುರುಡತನ, ಹೊಗೆಯಿಂದ ತಾಪ.

೨ನೆಯ ಕಾರಣ:—ತನಗೆ ಕೀರ್ತಿ-ಅಭಿಮಾನಸ್ಸು. ಅದರಿಂದಲೇ ಜನ್ಮಸಾಫಲ್ಯ.

೪. ಉಪಸಂಹಾರ:—ಸಾಧನದ ಬಾಳಿರಲಿ, ಗಳಿಗೆಯೊಂದರ ಬಾಳು. ಹಂಗಿನಲ್ಲಿಯ ಬಂಜೆಜೀವನದಿಂದೇನು ಪ್ರಯೋಜನ?

## ಮುಹೂರ್ತಂ ಜ್ವಲಿತಂ ಶ್ರೇಯಃ

**೧. ಉಪಕ್ರಮ:**—'ಅದೊಂದು ಬೆಳಕಿನ ಬಳ್ಳಿ; ಮಿಂಚಿನ ಮಲರು ಆ ಕಳೆದ ಮುತ್ತು,' ಎಂದೋರ್ವನು, ಮರೆಯಾದ ಮುದ್ದು ಮಗುವಿನ ವಿಷಯವಾಗಿ ಉಸುರಿದ ದುಃಖೋದ್ಗಾರಗಳು. ಈ ಬಗೆಯಾಗಿ ಪ್ರಿಯ ಜನರ ಎದೆಯಲ್ಲಿ ನೆಲೆಯಾಗಿ ನೆಲಸುವುದೇ ನಿಜವಾದ ಜೀವನ. ಅದು ಮರಣವಲ್ಲ, ಇಂಥ ಬಾಳೇ ಬಾಳಲ್ಲವೇ?

**೨. ವಿಶದೀಕರಣ:**—ಚಿರಂತನವಾಗಿ ಹೊಗೆಸುತ್ತ ಬಾಳುವುದಕ್ಕಿಂತ ಅರಗಳಿಗೆ ಪ್ರಜ್ವಲಿತವಾಗಿ ಇದ್ದು ಅಳಿಯುವುದು ಮೇಲು. ಇದು ಮೇಲಿನ ಸಂಸ್ಕೃತ ಒಳ್ನುಡಿಯ ತಾತ್ಪರ್ಯ. ಬಹುಕಾಲ ಕೊಳೆಯುವುದಕ್ಕಿಂತ ಕೆಲಕಾಲ ಹೊಳೆಯುವುದು ಒಳಿತಲ್ಲವೇ? ಕಾಗೆ ಬಲಿಯನ್ನುಂಡು ಸಾವಿರ ವರ್ಷ ಬಾಳಿದರೇನು? ಅದರಿಂದ ಅದಾರಿಗೆ ಸುಖ, ಸಮಾಧಾನ? ಕೋಗಿಲೆಯ ಅರಗಳಿಗೆಯ ಸಹವಾಸದಲ್ಲಿ ಸಂತಸದ ಸುರಿಮಳೆ. ಅಲರು ಅರಳುವುದು ಒಂದರಗಳಿಗೆ. ಆದರೆ ಅಷ್ಟರಲ್ಲಿ ಅದೆಷ್ಟು ಕಂಪನ್ನು ಬೀರುವುದು? ಅದೆಷ್ಟು ಜನರನ್ನು ತಣಿಸುವುದು? ಕಾಲಕ್ಕೆ ಬೆಲೆಯಿಲ್ಲ, ಕಾಂತಿಗೆ ಬೆಲೆ—ಶಾಂತಿಗೆ ಬೆಲೆ.

**೩. ಏಕೆ?:**— ಹೀಗೇಕೆ ಇರಬೇಕು? ಕಾರಣವು ತೀರ ಸ್ಫುಟವಾಗಿರುವುದು. ಸಾಮಾನ್ಯವಾಗಿ ತನಗೂ, ಅನ್ಯರಿಗೂ, ಪ್ರಿಯವಾದುದೂ-ಹಿತವಾದುದೂ ಬೆಲೆಯುಳ್ಳದ್ದೆಂದು ಜನರ ಅಭಿಪ್ರಾಯ. ಅಪ್ರಿಯವಾದುದನ್ನು—ಅಹಿತಕರವಾದುದನ್ನು ಅದಾರು ಕೊಂಡಾಡುವರು? ಅದರಲ್ಲಿ ತನ್ನ ಹಿತಕ್ಕಿಂತ ಅನ್ಯರ ಹಿತಕ್ಕೆ ಬೆಲೆ ಹೆಚ್ಚು.

ಉಜ್ವಲ ವಸ್ತುಗಳು ಕೆಲಕಾಲ ಬಾಳಿದರೂ ಅದರಿಂದ ಜನತೆಗೆ ಸುಖ, ಶಾಂತಿಗಳು ಲಭಿಸುವುವು. ಅವುಗಳ ಇರವಿನಿಂದ ಜನರ ಕಲ್ಯಾಣವಾಗುವುದು. ಬೆಳಕು ಅಲ್ಪ ಕಾಲ ಬೆಳಗಿದರೂ ಅದಾರಿಗೆ ಹೊಸ ಕಣ್ಣನ್ನು ಕೊಡು

ವುದಿಲ್ಲ? ಮಿಗಿಲಾದ ಸಂತೋಷವನ್ನು ನೀಡುವುದಿಲ್ಲ? ಅದೇ ದೀರ್ಘಕಾಲ ಪಸರಿಸಿದ ಕತ್ತಲೆಯಿಂದ ಯಾರಿಗೆ ಸಮಾಧಾನ? ಯಾರಿಗೆ ಉಪಕಾರ? ಅದೇ ಮೇರೆಗೆ ತೇಜಸ್ವಿಗಳಾದ ವಿಭೂತಿಗಳು ತಮ್ಮ ಕಿರು-ಬಾಳಿನಲ್ಲಿಯೂ ಅದ್ಭುತಕಾರ್ಯವನ್ನು ನಿರ್ವಹಿಸಿ, ಜನತೆಯ ಅನಂತ ಕಲ್ಯಾಣವನ್ನು ಸಾಧಿಸುವುದುಂಟು. ಅವರ ಚರಿತ್ರೆಗಳು ಮುಂದಿನವರಿಗೆ ಸ್ಫೂರ್ತಿಯ ಸೆಲೆಗಳಾಗುವುದುಂಟು.

ತನ್ನ ಅದ್ಭುತ ಪರಾಕ್ರಮದಿಂದ **ಅಭಿಮನ್ಯು ಬಾಲನು** ಅಲ್ಪ ವಯಸ್ಸಿನಲ್ಲಿಯೆ ವೀರಸ್ವರ್ಗವನ್ನು ಪಡೆದು ಅಲ್ಲಿಂದ ಮುಂದಿನ ಬಾಲವೀರರಿಗೆಲ್ಲ ಆದರ್ಶಪ್ರಾಯನಾದನು. **ಶಂಕರಾಚಾರ್ಯರು** ತಮ್ಮ ಎಳೆತನದಲ್ಲಿಯೇ ಆರ್ಯಧರ್ಮದ ಪುನರುಜ್ಜೀವನವನ್ನು ಮಾಡಲಿಲ್ಲವೇ? ಇಷ್ಟು ಹಿಂದೇಕೆ? ಇಂದಿನ ಯುಗದಲ್ಲಿಯೇ ನಮ್ಮ **ವಿವೇಕಾನಂದರು** ಇದನ್ನೆಯೆ ಮಾಡಲಿಲ್ಲವೆ? ನಮ್ಮ ಹಿಂದೂ ಧರ್ಮದ ವಿಜಯಧ್ವಜವನ್ನು ಪ್ರಪಂಚದಲ್ಲೆಲ್ಲ ಮೆರೆಯಿಸಿದಾಗ ಅವರ ವಯಸ್ಸು ಅದೆಷ್ಟಿತ್ತು? ಈ ರೀತಿಯಿಂದ ಎಳೆ ವಯಸ್ಸಿನಲ್ಲಿಯೆ ಪ್ರಚಂಡಕಾರ್ಯವನ್ನು ನೆರವೇರಿಸಿದ ಮಹನೀಯರಿಗೆ ನಮ್ಮಲ್ಲಿ ಕೊರತೆಯಿಲ್ಲ. **ಅವರ ಬಾಳು ಕಿರಿದಾದರೂ, ಬೆಳಕು ಹಿರಿದು.**

ಇಂಥವರು ಜನತೆಯ ಹಿತವನ್ನು ಸಾಧಿಸಿ ತಮ್ಮ ಕೀರ್ತಿಯನ್ನು ಅಜರಾಮರ ಮಾಡಿದ್ದುಂಟು. **'ದೇಹವು ಅಳಿದರೂ ಕೀರ್ತಿಯು ಉಳಿಯಬೇಕು'** ಎಂದು ಮಹನೀಯರು ಉಸುರಿರುವರು. ಈ ಮಣ್ಣಿನ ಶರೀರಕ್ಕಿಂತ ಕೀರ್ತಿ-ಶರೀರವೇ ಮೇಲಾದದ್ದು. ಸತ್ಕೀರ್ತಿಯಿಂದಲೇ ನಮ್ಮ ಜನ್ಮದ ಸಾಫಲ್ಯ.

೪. **ಉಪಸಂಹಾರ:**— ಆದುದರಿಂದ **ಸಾಹಸದ ಬಾಳಿರಲಿ!** ಅದು ಗಳಿಗೆಯೊಂದರ ಬಾಳಿದ್ದರೂ ನಡೆಯಬಹುದು. ಹಂಗಿನಲ್ಲಿ ಕಳೆದ ಶತವರುಷದ ಬಂಜೆ ಜೀವನದಿಂದ ಏನು ಫಲ? ಕೆಲಕಾಲವೇಕಾಗಲೊಲ್ಲದು, **ಹುಲಿಯಾಗಿ ಬಾಳಬೇಕು, ಕಲಿಯಾಗಿ ಜೀವಿಸಬೇಕು.**

## (ಕೆಲ ರೂಪರೇಖೆಗಳು)

### ೨. ಬಿತ್ತಿದ್ದನ್ನು ಬೆಳೆದುಕೋ!

೧. **ಉಪಕ್ರಮ:**— ಪ್ರಕೃತಿಯು ಮಾನವನ ಆದಿ ಗುರು. ಆಕೆಯು ನಿರೀ

ಕ್ಷಣದಿಂದ ಮಾನವನು ಅನೇಕ ಪಾಠಗಳನ್ನು ಕಲಿಯುವ. ಅವುಗಳಲ್ಲಿ ಮೇಲಿನದು ಒಂದು.

**೨. ಅದರ ವ್ಯಾಪ್ತಿ:**— ಬೀಜಕ್ಕೆ ಸರಿಯಾದ ಫಲ-ಉದಾಹರಣೆಗಳು. ಗೋದಿ-ಮಾವು.

**೩. ಅದರಿಂದ ಸೂಚನೆ:**— ಕ್ರಿಯೆಯಂತೆ ಪ್ರತಿಕ್ರಿಯೆ. ಧ್ವನಿಯಂತೆ ಪ್ರತಿಧ್ವನಿ. ಬೆಲೆಯಂತೆ ಒಡವೆ. ಪ್ರೀತಿಗೆ ಪ್ರೀತಿ. ದ್ವೇಷಕ್ಕೆ ದ್ವೇಷ. ಕರ್ಮದಂತೆ ಫಲ. ಒಳ್ಳೆಯ ನಡತೆಯಿಂದ ಸುಖ, ಕೆಡುಕಿನಿಂದ ಕೇಡು.

**೪. ಉಪಸಂಹಾರ:**— ಸತ್ಕರ್ಮದಿಂದ ಸತ್‌ಫಲವನ್ನು ಪಡೆಯಬೇಕು. ಅಸತ್ತು ಸತ್ತನ್ನು ಕೊಡಲಾರದು.'

## ೩. ನಾಳೆ ಎಂಬುವನ ಮನೆ ಹಾಳು.

**೧. ಉಪಕ್ರಮ:**— ಕಾಲನಿಗೆ ಹಿಂಗುರುಳಿಲ್ಲ, ಮುಂಗುರುಳುಂಟು. ಹಿಂದಿನಿಂದ ಹಿಡಿಯಲಾಗುವುದಿಲ್ಲ. ಮುಂಚಿತವಾಗಿಯೇ ಹಿಡಿಯಬೇಕು. (We must catch time by the forlock)

**೨. ಇದರ ವಿಶದೀಕರಣ:**— ಇಂದಿನ ಕೆಲಸವನ್ನು ನಾಳೆ ಮಾಡಲೆಳಸದೆ, ನಾಳಿನದನ್ನೆಯೆ ಇಂದು ಮಾಡಬೇಕು. 'ಸಕಾಲಕ್ಕೆ ಹಾಕಿದ ಒಂದು ಹೊಲಿಗೆಯು ಹತ್ತನ್ನು ಉಳಿಸುವುದು.' ಇಂದಿನದನ್ನು ಮುಂದೆ ಇಡುತ್ತ ಹೋದರೆ, ನಮ್ಮ ಕಾರ್ಯ ಹಾನಿಯಾಗುವುದು.

**೩. ಆಲಸ್ಯದ ಬೆಳೆವಣಿಗೆ:**— ಈ ರೂಢಿಯಿಂದ ನಮ್ಮಲ್ಲಿಯ ಚಟುವಟಿಕೆಯು ಕಡಿಮೆಯಾಗಿ, ಆಲಸ್ಯವು ಹೆಚ್ಚುವುದು.

**೪. ಕೆಲಸದ ಹೆಚ್ಚಳ:**— ಕೆಲಸದ ಹೊರೆಯು ಹೆಚ್ಚುವುದು. ಎಲ್ಲವನ್ನೂ ಸರಿಯಾಗಿ ಸಾಗಿಸಲು ತೊಂದರೆ.

**೫. ಪರಿಸ್ಥಿತಿಯಲ್ಲಿ ಬದಲು:**— ಇಂದಿನ ಅನುಕೂಲತೆಯು ನಾಳೆಯಿರುವುದಿಲ್ಲ. ಪ್ರತಿಕೂಲ ಪರಿಸ್ಥಿತಿಯಿಂದ ತಡೆಗಳು.

**೬. ಉಪಸಂಹಾರ:**— ಇವೆಲ್ಲವುಗಳ ಫಲವಾಗಿ ಕೆಲಸವು ಕೆಟ್ಟು ನಮ್ಮ ಮನೆಯು ಹಾಳಾಗುವುದು.

## ೪. ಜಾತಿಹೀನರ ಮನೆಯ ಜ್ಯೋತಿ ತಾ ಹೀನವೇ ?

**೧. ಉಪಕ್ರಮ:**— ಗುಣಿಗಳಲ್ಲಿ ಗುಣವು ಪೂಜ್ಯವಾದುದು, ಲಿಂಗವಲ್ಲ, ವಯಸ್ಸಲ್ಲ! ಗುಣವಿಲ್ಲದ ಮನುಜನು ಹೆಣವಿದ್ದಂತೆ.

**೨. ವಿಶದೀಕರಣ:**— ಜಾತಿಯಿಂದ ಜ್ಯೋತಿಯು ಮಲಿನವಾಗುವುದಿಲ್ಲ. ಜ್ಯೋತಿಗೆ ಸ್ವಯಂಸಿದ್ಧವಾದ ಹೊಳಪು. ಅದು ಹೊರಗಣ ಸಂಗತಿಗಳಿಂದ ಅಲಿಪ್ತ. ಕೀಳುಜಾತಿಯವರಲ್ಲಿಯ ಮೇಲುಗುಣಗಳು ಗೌರವಾಸ್ಪದ.

೩. ಮೇಲು-ಕೀಳುಗಳು :— ವಸ್ತುವಿನ ಮೇಲ್ಮೆಯು ಅದರ ಗುಣದಲ್ಲಿ; ಬಾಹ್ಯ ಪರಿಸರದಲ್ಲಿಲ್ಲ. ಕಮಲ, ಗುಲಾಬಿ, ಕಸ್ತೂರಿ. ಇಂದಿನ ಕಲ್ಪನೆಗಳು ತಪ್ಪು ಸಿದ್ಧಾಂತವನ್ನಾಶ್ರಯಿಸಿವೆ. ಅವನ್ನು ತಿದ್ದುವುದವಶ್ಯ. ಅವುಗಳಿಂದ ನಾಡಿನ ಹಾನಿ.

೪. ಗುಣಗ್ರಹಣ :— ಗುಣವನ್ನರಸಿ ಉಳಿದುದನ್ನು ಮರೆಯಬೇಕು.

೫. ಉಪಸಂಹಾರ: — ಕುಲಂ ಕುಲಮಲ್ತು, ಛಲಂ ಕುಲಂ.

## ೫. ಹಳೆಯ ರೀತಿಯು ಅಳಿದು ಹೊಳೆಯುವುದು ಹೊಸದಲ್ಲಿ

೧. ಉಪಕ್ರಮ :— ಸಾಮರಸ್ಯವು ಜಗದ ಜೀವಾಳ. ಅದಿರುವವರೆಗೆ ಇಲ್ಲಿ ಶಾಂತಿ; ಇಲ್ಲದಿರೆ ಅಶಾಂತಿ. ಅಳಿದ ಸಾಮರಸ್ಯವನ್ನು ಮರಳಿ ಉಂಟುಮಾಡಲು ಹೊಸ ನೀತಿ ರೀತಿಗಳು ಬರಬೇಕಾಗುವವು.

೨. ವಿವರಣ :— ಕಾಲ ಕಾಲಕ್ಕೆ ಪ್ರಪಂಚದಲ್ಲಿ ಪ್ರಚಲಿತವಾಗಿದ್ದ ರೀತಿಗಳಲ್ಲಿ ಬದಲು. ಇದು ಜಗತ್ತಿನ ರೀತಿ. ಹೊಸ ಯುಗಕ್ಕೆ ಹೊಸ ಯುಗಧರ್ಮ.

೩. ಏಕೆ? :— ೧ನೆಯ ಕಾರಣ-ಹಳೆಯದು ಬಹುಕಾಲ ಕಳೆದದ್ದರಿಂದ ಹಾಳಾಗುವುದು. ಅದರಲ್ಲಿ ಹುರುಳು ಮರೆಯಾಗಿ ಬಾಹ್ಯರೂಪವು ಉಳಿಯುವುದು. ಇದು ನಿಸರ್ಗದ ನಿಯಮ.

೨ನೆಯ ಕಾರಣ:— ನವಯುಗದಲ್ಲಿ ನವಪರಿಸ್ಥಿತಿ. ಅದಕ್ಕೆ ತಕ್ಕ ರೀತಿಯಿದ್ದರೆ ಅದರಿಂದ ಅದಕ್ಕೆ ಉಪಯೋಗ. ಇಲ್ಲವೆ ಹೋದರೆ ಆ ನಾಡಿನ ಪ್ರಗತಿಗೆ ತಡೆ.

೪. ಉಪಸಂಹಾರ:— ಹೊಸದನ್ನು ಕಂಡು ಹೆದರುವ ಕಾರಣವಿಲ್ಲ. ಬದಲು (ಪರಿವರ್ತನೆ) ಜೀವನದ ಹಿರಿಕುರುಹು.

## ೪ನೆಯ ಗುಂಪು:— ವಿವಾದಗಳು.

## ೧ ಹಕ್ಕೊ-ಕರ್ತವ್ಯವೊ?

೧. ಉಪಕ್ರಮ :— 'ಹಕ್ಕು' ಎಂಬುದು ಇಂದಿನವರ ನಾಲಿಗೆಯ ಮೇಲೆ ನಲಿದಾಡುವ ಶಬ್ದವು. ಬಾಲ-ವೃದ್ಧರು, ಬಡವ-ಬಲ್ಲಿದರು, ಸ್ತ್ರೀ-ಪುರುಷರು, ಎಲ್ಲರೂ 'ಹಕ್ಕಿ'ನ ಪೂಜಕರು. ಕರ್ತವ್ಯಬುದ್ಧಿಯು ಇಂದು ಮರೆಯಾಗಿದೆ.

೨. ಹಕ್ಕೆಂದರೇನು:— ನಾವು ಪಡೆಯಲೇ ಬೇಕಾದ ಕೆಲಸ. ಇವು ಕೆಲವು ಜನ್ಮಸಿದ್ಧ; ಕೆಲವು ಕರ್ಮಸಿದ್ಧ; ಅವು ದೊರೆಯದಿದ್ದರೆ ನಮ್ಮ ಬಾಳು ಹಾಳು.

೩. ಕರ್ತವ್ಯವೆಂದರೇನು? :— ನಾವು ಮಾಡಲೇ ಬೇಕಾದ ಕೆಲಸ. ಇವು ಕೆಲವು ಜನ್ಮ-ಜನ್ಯ, ಕೆಲವು ಕರ್ಮ-ಜನ್ಯ. ಅವನ್ನು ನಾವು ಮಾಡಲಿಲ್ಲವೆಂದರೆ ನಮ್ಮ ಅಹಿತ. ಸಮಾಜದ ಅಹಿತ.

೪. ಇವುಗಳ ತುಲನೆ:-ಹಕ್ಕು ಸೊಕ್ಕಿನ ಸೆಲೆ. ಅಸಂತೋಷದ ನೆಲೆ; ಕಲಹದ ತವರೂರು. ಕರ್ತವ್ಯವು ವಿನಯದ ಮನೆ; ವಿವೇಕದ ತೆನೆ; ಶಾಂತಿಯ ಸೊನೆ.

೫. ಉಪಸಂಹಾರ:— ನಾವು ಧರ್ಮಪ್ರಧಾನರು; ಕರ್ತವ್ಯ ಕುಶಲರು. ಮಾಡಿದವನಿಗೆ ಜೀವನದ ಹಕ್ಕು; ಕರ್ತವ್ಯವೇ ಹಕ್ಕನ್ನು ಪಡೆಯುವ ಸಾಧನವಾಗಬೇಕು.

## ಹಕ್ಕೋ—ಕರ್ತವ್ಯವೋ?

೧. **ಉಪಕ್ರಮ:**— '**ಹಕ್ಕು**' ಇಂದಿನವರ ಜೀವನದ ಪ್ರೇರಕ ಶಕ್ತಿ. ಎಲ್ಲರ ನಾಲಿಗೆಯ ಮೇಲೆ ನಲಿದಾಡುವ ಶಬ್ದವದು; ಎಲ್ಲರ ತಲೆಯಲ್ಲಿ ಸುಳಿದಾಡುವ ಕಲ್ಪನೆಯದು. ಬಾಲರಿರಲಿ, ವೃದ್ಧರಿರಲಿ; ಬಡವರಿರಲಿ, ಬಲ್ಲಿದರಿರಲಿ, ಸ್ತ್ರೀಯರಿರಲಿ; ಪುರುಷರಿರಲಿ;—ಎಲ್ಲರೂ '**ಹಕ್ಕಿನ**' ಪೂಜಕರು. **ಕರ್ತವ್ಯದ** ಕಲ್ಪನೆಯು ಇಂದು ಕನಸಿನ ವಿಷಯವಾಗಿದೆ.

೨. **ಹಕ್ಕೆಂದರೇನು?:**— ಇಂಥ ಸಮಯದಲ್ಲಿ ಇವುಗಳ ಸರಿಯಾದ ಪರಿಚಯವಿರುವುದು ಅತ್ಯವಶ್ಯ. **ನಮಗೆ ಸಲ್ಲಬೇಕಾದ ಸಂಗತಿಯೇ ನಮ್ಮ 'ಹಕ್ಕು'.** ನಾವು ಸುಖವಾಗಿ ಬಾಳಬೇಕಾದರೆ ನಮಗೆ ಯಾವ ಯಾವ ವಿಷಯಗಳು ಅತ್ಯಗತ್ಯವಾದವುಗಳೋ ಅವನ್ನೆಲ್ಲ ಪಡೆಯುವುದು ನಮ್ಮ 'ಹಕ್ಕು'. ಅವನ್ನು ನಮ್ಮಿಂದ ಯಾರಾದರೂ ಕಸಿದುಕೊಂಡರೆ ಅವರು ನಮ್ಮ ಪವಿತ್ರವಾದ 'ಹಕ್ಕನ್ನು' ಕಾಲ್ಕೆಳಗೆ ತುಳಿದ ದ್ರೋಹಿಗಳು. ಅಂಥವರನ್ನು ಎದುರಿಸುವುದು, ಚದುರಿಸುವುದು ನಮ್ಮ 'ಹಕ್ಕು.'

ಹಕ್ಕುಗಳಲ್ಲಿ ಕೆಲವು **ಜನ್ಮಸಿದ್ಧ; ಕೆಲವು ಕರ್ಮಸಿದ್ಧ.** ಜನ್ಮಸಿದ್ಧ ಹಕ್ಕುಗಳು ನಾವು ಜನಿಸಿದಂದಿನಿಂದ ನಮಗೆ ದೊರೆತವುಗಳು. ಬಾಳುವುದು ಅಂಥದೊಂದು ಹಕ್ಕು; ಬೆಳೆಯುವುದು ಇನ್ನೊಂದು. ಕರ್ಮಸಿದ್ಧ ಹಕ್ಕುಗಳು ಸಮಾಜದಲ್ಲಿಯ ನಮ್ಮ ಕರ್ಮವನ್ನು—ನಮ್ಮ ಸ್ಥಾನವನ್ನು ಅವಲಂಬಿಸಿವೆ. ನಾವು ಕೂಲಿಯವರಿದ್ದರೆ ನಮಗೆ ಕೂಲಿಯವರ ಹಕ್ಕು ದೊರೆಯುವುದು. ಒಕ್ಕಲಿಗರಿದ್ದರೆ ಒಕ್ಕಲಿಗರ ಹಕ್ಕು ದೊರೆಯುವುದು. ಉಳಿದ ಉದ್ಯೋಗದಲ್ಲಿಯೂ ಇದೇ ರೀತಿ.

ಇಂಥ ಅನೇಕ ಹಕ್ಕುಗಳನ್ನು ಇದ್ದರೆ ಉಪಯೋಗಿಸಬೇಕು, ಇಲ್ಲದಿದ್ದರೆ ಪಡೆಯಲು ಹೆಣಗಬೇಕು. ಅದರಿಂದಲೇ ನಿಜವಾದ ಸುಖ—ಅದರಲ್ಲಿಯೆ ನಿಜವಾದ ಕಲ್ಯಾಣ ಎಂಬುದು ಇಂದಿನ ಮಹನೀಯರ ಮತ.

೩. **ಕರ್ತವ್ಯವೆಂದರೇನು?:**— ಮನುಷ್ಯನಿಗೆ ಅನೇಕ ಹಕ್ಕುಗಳಿದ್ದಂತೆ ವಿವಿಧ ಕರ್ತವ್ಯಗಳು ಇವೆ. **ಕರ್ತವ್ಯವೆಂದರೆ ಮಾಡತಕ್ಕ ಕೆಲಸ.**

ಹಕ್ಕುಗಳಂತೆ ಕರ್ತವ್ಯಗಳು ಎರಡು ವಿಧ. **ಜನ್ಮಜನ್ಯ** ಒಂದು,-**ಕರ್ಮಜನ್ಯ** ಇನ್ನೊಂದು. ಮನುಷ್ಯನು ಹುಟ್ಟಿದಂದಿನಿಂದ ಹಲವು ಕರ್ತವ್ಯಗಳು ಅವನನ್ನು ಹಿಂಬಾಲಿಸುವವು. ಬಾಲ್ಯದಲ್ಲಿ ಮಗುವಿನ ಕರ್ತವ್ಯ, ತಾರುಣ್ಯದಲ್ಲಿ ಪತಿಯ ಕರ್ತವ್ಯ, ಪ್ರೌಢನಾದ ಮೇಲೆ ಪಿತನ ಕರ್ತವ್ಯ, ಇವು ಜನ್ಮಜನ್ಯ. ವಿದ್ಯಾರ್ಥಿಯ ಕರ್ತವ್ಯ, ನಾಗರಿಕನ ಕರ್ತವ್ಯ ಇವು ಕರ್ಮಜನ್ಯ.

ಇವುಗಳಿಗೆ ನಮ್ಮ ಹಿರಿಯರು **ಧರ್ಮವೆಂದು** ಕರೆಯುತ್ತಿದ್ದರು. ಪ್ರತಿಯೊಬ್ಬನು **ಸ್ವಧರ್ಮವನ್ನು ನೆರವೇರಿಸಿ** ತನ್ನ ಹಾಗು ಸಮಾಜದ ಕಲ್ಯಾಣವನ್ನು ಮಾಡಿಕೊಳ್ಳಬೇಕೆಂದು ಅವರ ಮತ. '**ಸ್ವಧರ್ಮೇ ನಿಧನಂ ಶ್ರೇಯಃ। ಪರಧರ್ಮೋ ಭಯಾವಹಃ**'! ತನ್ನ ಧರ್ಮದಲ್ಲಿಯೇ ಸಾಯುವುದೊಳಿತು. ಅನ್ಯರ ಧರ್ಮವು ಭಯಜನಕವು. ಸ್ವಧರ್ಮದಿಂದ ಜನ-ಜನಾರ್ದನನನ್ನು ಪೂಜಿಸಿರಿ! ಎಂದು **ಭಗವಂತನ** ಸಂದೇಶ. ಅದರಿಂದಲೇ ನಮ್ಮ ಹಿತ, ಅನ್ಯರ ಹಿತ!

**೪. ಇವುಗಳ ತುಲನೆ:**— ಇಂದಿನ ಹಕ್ಕನ್ನಾಶ್ರಯಿಸಿದ ಸಮಾಜಗಳನ್ನು ಸ್ವಲ್ಪ ಸೂಕ್ಷ್ಮರೀತಿಯಿಂದ ಅವಲೋಕಿಸಿದರೆ ನಾವಲ್ಲಿ ಕಾಣುವುದೇನನ್ನು? **ಹಕ್ಕು ಸೊಕ್ಕಿನ ಸೆಲೆ-ಅಸಂತೋಷದ ನೆಲೆ-ಕಲಹದ ಬಲೆಯಾದುದನ್ನೆಯೆ** ಅಲ್ಲವೇ? ಅದೇ ಕರ್ತವ್ಯದಕ್ಷನಾದ ನಮ್ಮ ಹಿಂದಿನ ಸಮಾಜವನ್ನು ನೋಡಿ! ಅಲ್ಲಿ **ಕರ್ತವ್ಯವು ವಿನಯದ ಮನೆ-ವಿವೇಕದ ತೆನೆ-ಶಾಂತಿಯ ಸೊನೆಯಾದುದು** ತೋರುವುದಿಲ್ಲವೇ? ಹಕ್ಕಿಗಾಗಿ ಹೆಣಗುವವರು ಕಲಹದ ಕುಲಿಮೆಯೊಳಗಿಂದ ಹಾಯ್ದು ಸಂತಸದ ಮಂದಿರವನ್ನು ಕಾಣಬೇಕು. ಕರ್ತವ್ಯರತರಾದವರು ಪ್ರೀತಿಯ ಕುಂಜದೊಳಗಿಂದ ಹಾಯ್ದು ಶಾಂತಿಯ ಸದನವನ್ನು ಸೇರುವರು. ಒಬ್ಬರಿಗೆ ಸಂತಸವು ಅನಿಶ್ಚಿತ-ಇನ್ನೊಬ್ಬರಿಗೆ ಅದು ನಿಶ್ಚಿತ. ಒಂದು ರಾಜಸ ಕಾಲುದಾರಿ; ಇನ್ನೊಂದು ಸಾತ್ವಿಕ ರಾಜಪಥ. ಪ್ರತಿಯೊಬ್ಬರೂ ತಮ್ಮ ತಮ್ಮ ಪ್ರಕೃತಿಯಂತೆ ತಮಗೆ ಸರಿದೋರುವ ದಾರಿಯನ್ನು ಅರಸಬೇಕು.

**೫. ಉಪಸಂಹಾರ:**— ಆದರೂ ಒಂದು ದೃಷ್ಟಿಯಿಂದ ನೋಡಿದರೆ **ಮಾಡಿದವರಿಗೇನೇ ಬೇಡುವ ಹಕ್ಕು ಇದೆ-ಇರಬೇಕು.** ಕರ್ತವ್ಯವೇ ಹಕ್ಕನ್ನು ಪಡೆಯುವ ಸಾಧನವಾಗಬೇಕು. ಇವೆರಡರ ಮಧುರ ಮಿಲನದಿಂದಲೇ ನಮ್ಮ ಇಷ್ಟಾರ್ಥವು ಸಿದ್ಧವಾಗಬಹುದು.

## (ಕೆಲ ರೂಪರೇಷೆಗಳು)

### ೨. ಶಕ್ತಿಯೊ-ಯುಕ್ತಿಯೋ?

೧. **ಉಪಕ್ರಮ:**— ತಾತ್ವಿಕ ಉದ್ದೇಶ-ನಮ್ಮ ಜೀವನದಲ್ಲಿ ಇವುಗಳ ಸ್ಥಾನ ನಿರ್ಣಯ. ಇವುಗಳ ಬಲಾಬಲ ನಿಶ್ಚಯ.

೨. **ಶಕ್ತಿ ಯುಕ್ತಿಗಳು:**— ಒಂದು ಶಾರೀರಿಕ–ಒಂದು ಬೌದ್ಧಿಕ ವಿಷಯ. ಒಂದು ಕೆಲಸದ ಗತಿಯನ್ನು ಹೆಚ್ಚಿಸುವುದು; ಇನ್ನೊಂದು ಅದರ ರೀತಿಯನ್ನು ಸೂಚಿಸುವುದು. ಸಾಮಾನ್ಯವಾಗಿ ಇವು ಕೂಡಿಯೇ ಇರುವುವು. ಪರಸ್ಪರರಿಂದ ಅಗಲಿದಾಗ ಇವುಗಳ ಬಲವನ್ನರಿತು ಬೆಲೆ ಕಟ್ಟುವುದು.

೩. **ಯುಕ್ತಿಯಿಲ್ಲದ ಶಕ್ತಿ:**— ಕೋಣನ ಶಕ್ತಿಯಂತೆ–ಮುಂಬರ ದಂಭದಂತೆ–ಟಗರಿನ ಚರಿತದಂತೆ–ಗುರಿಯನ್ನು ತಾಗಿದರೆ ತಾಗಿತು; ತಪ್ಪಿದರೆ ಹೋದರೆ ಇಲ್ಲ. ಶಕ್ತಿತ್ವದ ಅಪವ್ಯಯ.

೪. **ಶಕ್ತಿಯಿಲ್ಲದ ಯುಕ್ತಿ:**— ಬಂಜೆ–ಬಡತನ ಬಯಕೆಯಂತೆ–ಜೀವನ್ಮೃತ-ಹುಟ್ಟಿದೊಡನೆಯೆ ಸಾವು–ಬಿಸೊಮ್ಮನ್ನ ಯತ್ನವನ್ನು-ಅನೇಕ ಸಲ ಸೋಲು.

೫. **ಉಪಸಂಹಾರ:**— ಆದುದರಿಂದ ಎರಡರ ಸುಂದರ ಮಿಲನದಲ್ಲಿಯೇ ಕಾರ್ಯಸಿದ್ಧಿ.

### ೩. ಹಿಂಸೆಯೋ-ಅಹಿಂಸೆಯೋ?

೧. **ಉಪಕ್ರಮ:**— ಮಹಾತ್ಮರ ಉದಯದಿಂದ ಈ ವಿಷಯಕ್ಕೆ ಚಾಲನೆ. 'ಅಹಿಂಸೆಯು' ಮರಳಿ ಪರಮಧರ್ಮವಾಗಬೇಕೆಂಬ ಅವರ ನವಸಂದೇಶ.

೨. **ಹಿಂಸೆಯ ರೀತಿ:**— ದ್ವೇಷದ ಆಶ್ರಯ-ಸಬಲರು ದುರ್ಬಲರನ್ನು ಹಿಂಸಿಸಿ ತಮ್ಮ ಕಾರ್ಯವನ್ನು ನೆರವೇರಿಸುವರು. ಕೊಲೆ, ಸುಲಿಗೆ, ಯುದ್ಧ, ಸಂಹಾರ, ಅಶಾಂತಿ.

೩. **ಅಹಿಂಸೆಯ ರೀತಿ:**— ಪ್ರೇಮದ ಆಶ್ರಯ–ಸಬಲರು ಆತ್ಮಾಹುತಿಯಿಂದ ತಮ್ಮ ಕಾರ್ಯವನ್ನು ಕೈಗೂಡಲಿಸುವರು.-ಸತ್ಯಾಗ್ರಹ-ಅಸ್ತ್ರದ ಸಂಹಾರವಿಲ್ಲ, ಯುದ್ಧವಿಲ್ಲ, ಶಾಂತಿನಿರ್ಮಿತಿ.

೪. **ಇವುಗಳ ಸ್ಥಾನ:**— (೧) **ವ್ಯಕ್ತಿಜೀವನದಲ್ಲಿ:**— ಸಾಮಾನ್ಯಜೀವನದಲ್ಲಿ ಹಿಂಸೆಗೆ ಪ್ರಾಧಾನ್ಯ. ಉನ್ನತ ಜೀವನದಲ್ಲಿ ಅಹಿಂಸೆಗೆ ಮೇಲಿನ ಸ್ಥಲ. (೨) **ರಾಷ್ಟ್ರಜೀವನದಲ್ಲಿ:**— ಹಿಂಸೆಗೆ ಪ್ರಾಧಾನ್ಯ. ಅಹಿಂಸೆಯ ಪ್ರಭಾವವು ಪ್ರಯೋಗದಿಂದ ಸಿದ್ಧವಾಗುವುದು.

೫. **ಉಪಸಂಹಾರ:**— ಹಿಂಸೆಯು ಇಂದು ಅನಿವಾರ್ಯ ಆಪತ್ತೆಂದು, ಅಹಿಂಸೆಯು ಅಪೇಕ್ಷಣೀಯವಾದ ಉಪಕಾರ.

### ೪. ಹಳ್ಳಿಗಳು? ಪಟ್ಟಣಗಳು?

೧. **ಉಪಕ್ರಮ:**— 'Back to village' 'ಹೊರಳಿ ಹಳ್ಳಿಗಳೆಡೆಗೆ' ಎಂಬ ಕೂಗು ಅಲ್ಲಲ್ಲಿ. ಪಟ್ಟಣದ ಕಾಲವಳಿದು ಇಂದು ಹಳ್ಳಿಗಳ ಯುಗವು ಬರಲಿದೆ.

೨. ಹಳ್ಳಿಯ ಜೀವನ:— ಸಹಜಜೀವನ, ಸಂಘಜೀವನ, ನಿರ್ಮಲ ಹವೆ, ಸ್ವಚ್ಛಂದ ಸೊಬಗು.

೩. ಪಟ್ಟಣ ಜೀವನ:—ಕೃತ್ರಿಮತೆ, ಶಿಕ್ಷಣದ ಅನುಕೂಲತೆ, ವಿಲಾಸಜೀವನ, ವೈವಿಧ್ಯ, ವೈಶಾಲ್ಯ.

೪. ಇವುಗಳ ತುಲನೆ:— ಒಂದು ಸಹಜ-ಒಂದು ಕೃತ್ರಿಮ. ಒಂದು ದೇವಕೃತ-ಒಂದು ಮಾನವಕೃತ. ಒಂದರಲ್ಲಿ ಮಾನವನಿರ್ಮಿತ ಗುಣದೋಷಗಳಿಲ್ಲ; ಇನ್ನೊಂದರಲ್ಲಿ ದೇವನಿರ್ಮಿತ ಗುಣದೋಷಗಳಿಲ್ಲ.

೫. ಉಪಸಂಹಾರ:— ನಮಗೆ ಎರಡರ ಗುಣಗಳು ಬೇಕು. ಅದಕ್ಕಾಗಿ ನಾವು ಚಿಕ್ಕ ಚಿಕ್ಕ ನಗರಗಳನ್ನು ನಿರ್ಮಿಸಿ ಎರಡರ ಗುಣಗಳ ಸಂಮೇಲನವನ್ನು ಮಾಡಬೇಕು.

## ೪. ಶಠಂಪ್ರತಿ ಶಾಠ್ಯಂ–ಶಠಂಪ್ರತಿ ಸತ್ಯಂ? (ಕಪಟಿಯೊಡನೆ ಕಪಟವೊ ಸತ್ಯವೊ?)

೧. ಉಪಕ್ರಮ:— ಜಗತ್ತಿನಲ್ಲಿ ಸಜ್ಜನರಂತೆ ದುರ್ಜನರು ಸಾಕಷ್ಟಿರುವರು. ಅವರೇ ಬಹುಸಂಖ್ಯಾಕರೆನ್ನಲು ಅಡ್ಡಿಯಿಲ್ಲ. ಅವರೊಡನೆ ವ್ಯವಹರಿಸುವ ರೀತಿಗಳೆರಡು ಅನಾದಿಕಾಲದಿಂದ ನಡೆದುಬಂದಿವೆ.

೨. ಇವುಗಳ ವಿವರಣ:— ಮುಯ್ಯಿಕ್ಕೆ ಮುಯ್ಯಿ. ದುರುಳರನ್ನು ದುರುಳತನದಿಂದಲೇ ಎದುರಿಸಬೇಕೆಂದು ಒಂದು ರೀತಿ; ಅವರನ್ನು ಸತ್ಯದಿಂದಲೇ ಗೆಲ್ಲಬೇಕೆಂಬುದು ಎರಡನೆಯದು.

೩. ಇವುಗಳ ತುಲನೆ:— ಒಂದು ಸಾಮಾನ್ಯರಿಗೆ ಸಾಧ್ಯ; ಇನ್ನೊಂದು ಅಸಾಮಾನ್ಯರಿಗೆ ಸಾಧ್ಯ. ದುರುಳರಿಗೆ ದಂಡ, ಸರಳರಿಗೆ ಸತ್ಯ ಇದು ಸಹಜ ರೀತಿ. ದುರುಳನನ್ನು ಸತ್ಯದಿಂದ ಸತ್ಕರಿಸುವುದು ಕತ್ತೆಗೆ ಹೂರಣ ಮೇಯಿಸಿದಂತೆ; ಹಾವಿಗೆ ಹಾಲು ಎರೆದಂತೆ.

೪. ಉಪಸಂಹಾರ:— ಜಾಣನಿಗೆ ಮಾತಿನ ಪೆಟ್ಟು-ಕೋಣನಿಗೆ ದೊಣ್ಣೆಯ ಪೆಟ್ಟು-ಇದೇ ಯೋಗ್ಯ.

## ೫. ಹಿರಿಯರ ಕೆಲ ನಿಬಂಧಗಳು:—

### ೧. ಇತಿಹಾಸ.

೧. ಉಪಕ್ರಮ:— ‘ಆದರ್ಶವೇ ಕರ್ಮಜೀವನದ ಪಂಚಪ್ರಾಣ. ....ಈಗ ನಾವು ಏನಾದರೂ ಆಗಿದ್ದರೆ ಅದು ಆದರ್ಶದಿಂದಲೆ. ಇನ್ನು ಏನಾದರೂ ಆಗುವೆವಾದರೆ ಅದೂ ಆದರ್ಶದಿಂದಲೆ. ನಮ್ಮ ಬಾಳುವೆಯ ಕಡಿವಾಣವೆ ಅದರ ಕೈಯಲ್ಲಿದೆ’ ಎಂಬುದು ವಿವೇಕಾನಂದರ ವೀರವಾಣಿಯು.

೨. ಎಂದರೇನು?:— ಇತಿಹಾಸವೆಂದರೆ ರೂಪುಗೊಂಡ

ಆದರ್ಶ. ಇತಿಹಾಸವೆಂದರೆ ವೇದಶಾಸ್ತ್ರಗಳ ಪ್ರತ್ಯಕ್ಷ ವ್ಯಾಖ್ಯಾನ. ಕರ್ಮಿ ಯಾದ ಮನುಜನು ಯಾವಾಗಲೂ ಮೇಲ್ಪಂಕ್ತಿಯ ಕಡೆಗೆ ಕಣ್ಣಿಟ್ಟು ಸಾಗುವನು. **ಮೇಲ್ಪಂಕ್ತಿ (ಆದರ್ಶ) ಇಲ್ಲದ ಕರ್ಮವು ಗುರಿಯಿಲ್ಲದ ಗುಂಡಿನಂತೆ.** ಕರ್ಮದ ಗಾಳಿಯಲ್ಲಿ ಅಲೆದಾಡುತ್ತಿರುವ ಇತಿಹಾಸದ ಪತಾಕೆಯು ಬಗೆಬಗೆಯ ಬಣ್ಣದೋರಿ ಜೀವನದ ಗತಿಯನ್ನು ಹಿಗ್ಗಿಸಲೂ ಬಹುದು, ತಗ್ಗಿಸಲೂ ಬಹುದು.

**ಇತಿಹಾಸವು ನೆನಪಿನ ಸರಪಳಿ.** ಇದು ಒಂದು ಸ್ಮೃತಿ. **ಮನುಸ್ಮೃತಿಯು** ಅಂದಿನ ಧರ್ಮಗ್ರಂಥ. ಈ '**ಮನುಜಸ್ಮೃತಿ**'ಯು ಇಂದಿನ ಧರ್ಮಗ್ರಂಥ. ಏಕೆಂದರೆ **ಅಂದಿನದು ಮನುಯುಗ, ಇಂದಿನದು ಮನುಜಯುಗ.** 'ಯುಗವು ಬದಲಾಗಬೇಕು.' ಗುರು **ಅರವಿಂದರು** ಇದನ್ನೇ **ಯುಗಧರ್ಮ**ವೆಂದು ಹೇಳುತ್ತಾರೆ.

**ನೆನ**ಪಿಲ್ಲದೆ ನಾವು ಬಾಳಲೇ ಅರಿವು. ಹೆಜ್ಜೆಹೆಜ್ಜೆಗೂ **ನೆನ**ಪಿನ ಅಗತ್ಯ. **ನೆನಪು** ಧಾರೆಗಟ್ಟಿ **ನೆನ**ವಾಯಿತು. **ಕರ್ಮ** ಧಾರೆಗಟ್ಟಿ **ಧರ್ಮ**ವಾಯಿತು. ಕರ್ಮಕ್ಕೆ ನೆನಪೇ ಜೀವ. ಧರ್ಮಕ್ಕೆ ನೆನವೇ ಜೀವ. ಆದುದರಿಂದ ನೆನವಿನ ನೆಲೆಯಾದ ನೆನಪೇ ಧರ್ಮಕರ್ಮಗಳ ಸೆಲೆ.

**೩. ಪುರಾಣ-ಇತಿಹಾಸಗಳು**:— ನಮ್ಮ ಹಿಂದಿನವರಿಗೆ ಪುರಾಣವೇ ಇತಿಹಾಸವಾಗಿತ್ತು, ಆದರೆ ಇಂದಿನವರಿಗೆ ಇತಿಹಾಸವೇ ಪುರಾಣವಾಗಿಬಿಟ್ಟಿದೆ. **ಪುರಾಣಪುರುಷರು ಭಾವಲೋಕದ ಜೀವರೇ.** ಅಂತೆಯೇ ಇತಿಹಾಸವು **ಪೌರುಷ**ವನ್ನು ಬೋಧಿಸಿದರೆ ಪುರಾಣವು **ಅಪೌರುಷೇಯದ** ಕಡೆಗೆ ಎಳೆಯುತ್ತಿದೆ.

ಭವದಲ್ಲಿ ಮುಳುಗಿದ ಇಂದಿನ ಭವಿಯುಗವು **ಭಾವ**ಕ್ಕೆ ಎರವಾಗಿದೆ. ಅಂದಿನವರು ಮೌನವ್ಯಾಖ್ಯಾನದಿಂದ ಛಿನ್ನಸಂಶಯರಾಗುತ್ತಿದ್ದರು. ಇಂದಿನವರಿಗೆ ಮೇಜೂ, ಮನೆಯೂ ಕೂಡಿಯೇ ಗುಡುಗಿಡುವ ಲೆಕ್ಚರು ಬೇಕು. **ಇಂದಿನದು ಶಬ್ದಯುಗ, ಅಂದಿನದು ಭಾವಯುಗ.** ಶಬ್ದ ಬಂದು ಭಾವವನ್ನು ಕೊಂದಿತೆಂದು **ಬೈಬಲ್ಲಿನಲ್ಲಿ**ದೆ.

ಶಬ್ದದಾಚೆಗೆ ಭಾವರಾಜ್ಯವಿಹುದಯ್ಯ !
ಶಾಬ್ದಿಕರು ಬೇಗ ಭಾವಿಕರಾಗಲಯ್ಯ !

ಎಂದು ಈಗೀಗ ಬಾಯ್ಬಿಂದ ನವಯುಗದ ಕೋಗಿಲೆಗಳು **ಯುಗ**

ಧರ್ಮದ ‘**ಪ್ರಣವ**’ ಮಂತ್ರವನ್ನು ಬಾಯ್ಬಿಟ್ಟು ಹಾಡುತ್ತಲಿವೆ. ಇಂದಿನ ‘**ಅಸು-ಭವ**’ ಗಾಮಿಯಾದ ಯುಗವು ಅಂದಿನ ‘**ಅನುಭಾವ**’ ಮಂಟಪ ಸೇರಲಿಕ್ಕೆ ಇತಿಹಾಸದ ಕಡೆಗೆ ಹೊರಳಿ ನೋಡಬೇಕಾದುದು ತೀರ ಅಗತ್ಯ.

೪. **ಅದರ ಬೋಧೆ:— ಒಬ್ಬನ ಬಾಳ್ವೆ ಇನ್ನೊಬ್ಬರಿಗೆ ಕೈಗನ್ನಡಿ.** (ಕೆಳಗೆ ಬಿದ್ದ ರುಮಾಲನ್ನು ನೋಡಿ ತನ್ನ ತಲೆಗೆ ಕೈ ಒಯ್ಯುವುದು ಮನುಷ್ಯನ ಸ್ವಭಾವ.) ಹಿಂದಿನ ಬಾಳ್ವೆ ಮುಂದಿನ ಮುಂಗುರಿ. ಅದು ಮೇಲಾಗಿರಬಹುದು, ಕೀಳಾಗಿರಬಹುದು. ಮೇಲು ಬಾಳ್ವೆಯ ಎಳೆತದಲ್ಲಿ **ಸಾರೂಪ್ಯ.** ಕೀಳುಬಾಳ್ವೆಯ ಕಿಚ್ಚಿನಲ್ಲಿ **ಸಾಮರಸ್ಯ.** ಒಂದು ಪಡಿಯಚ್ಚಾದರೆ, ಇನ್ನೊಂದು ಅಗ್ಗಿಷ್ಟಿಗೆ. ಎರಡರ ಮೇಳದಿಂದಲೇ ಮೂರ್ತಿನಿರ್ಮಾಣ. ಬಾಳ್ವೆಯನ್ನು ಕೆತ್ತಿ ಕೊರೆದು ಪಡಿಯಚ್ಚುಗೊಳಿಸಿದರು ಪುರಾಣ ಮುನಿಗಳು, ಇತಿಹಾಸಕಾರರು. ಅದರಲ್ಲಿ ಎರಕಹೊಯ್ದು ತಮ್ಮನ್ನೇ ಮೂರ್ತಿಗೊಳಿಸಿ ತೋರಿದರು ಶರಣರು! ಮಹಾತ್ಮರು!!

೫. **ಉಪಸಂಹಾರ:**— ಹಿಂದಿನವರು ಮುಂದಿನವರನ್ನು ತಮ್ಮ ಹಿಂದೆ ಹಿಂದೆ ಹರಿಯ ಹಚ್ಚಿದರು. ಆದರೆ ತಾವು ಮಾತ್ರ ಯಾರ ಹಿಂದೆಯೂ ಹರಿಯಲಿಲ್ಲ. ಅವರು ನಡೆದದ್ದೇ ಹಾದಿಯಾಯಿತು. ನುಡಿದದ್ದೇ ವೇದವಾಯಿತು! ಅವರಲ್ಲೇನಿತ್ತು? ನಮ್ಮಲ್ಲೇನಿಲ್ಲ? ಈ ಒಗಟನ್ನೊಡೆಯುವ ಕೀಲಿಯೇ ಇತಿಹಾಸ.

—ಮಧುರ ಚೆನ್ನ.

## ೨. ನಗೆ.

೧. **ಉಪಕ್ರಮ:**— ಮಾನವ ಸ್ವಭಾವವೊಂದು ನಗೆಯ ಹುತ್ತ. ಜ್ಞಾನಿ ಅಜ್ಞಾನಿಯ ಕಂಡು ನಗುವಂತೆ, ತನ್ನ ಹುಚ್ಚುತನದ ಅರಿವಾದಾಗ, ತಾನಾಗಿ ಚಿಮ್ಮಿ ಬರುವ ರಸನಗೆಯ ಊಟೆಯೊಂದು ಮಾನವನ ಹೃದಯಾಂತರಾಳದಲ್ಲಿದೆ. ಆ ರಸದಲ್ಲಿ ಜಳಕಹೊಂದಿ ಮಾಸಿದ ಮನವು ಮಡಿಯಾಗುವುದು.

೨. **ನಗೆಯ ಬಗೆ:**— ನಗೆ ಎರಡು ಬಗೆ. ಒಂದು ಕೊಲ್ಲುವುದು, ಒಂದು ಕಾಯುವುದು. ಮಾನವ ಹೃದಯಸಾಗರದಲ್ಲುಂಟಾದ ಈ ಎರಡು ನಗೆಗಳಲ್ಲಿ ಒಂದು ವಿಷ, ಒಂದು ಅಮೃತ. ಅಮೃತಮಯವಾದ ನಗೆಯು **‘ನಕ್ಕು ನಗಿಸುವ ನಗೆ,’ ಲೇಸುನಗೆ; ರಸನಗೆ.** ವಿಷಮಯವಾದ ನಗೆಯು **ಹೇಸಿನಗೆ, ರಸಾಭಾಸ.** ಮಂದಿಯ ಕೇಡಿನಲ್ಲಿ ಪಾಡು ಕಾಣುವ

ಈ ನಗೆಯೇ ಇಂದಿನ ಬದುಕಿನ ಊಟದಲ್ಲಿ ಉಪ್ಪಿನಕಾಯಿ. ಊಟಕ್ಕೆ ತಕ್ಕ ಉಪ್ಪಿನಕಾಯಿ!

ನಗೆಯು ಸುಖದ ಕುರುಹು. ಸುಖದ ವಿವಿಧ ಬಗೆಗಳಂತೆ, ನಗೆಯ ವಿವಿಧ ಬಗೆಗಳೂ ಇವೆ. ತರಳತನದ ಹುಡುಗಾಟದಲ್ಲಿ ಹುಟ್ಟಿ, ಹರೆಯದ ಹುಮ್ಮಸದಲ್ಲಿ ಹೂತು, ವಯಸ್ಸು ಬೆಳೆದಂತೆ, ಕುಹಕ, ವ್ಯಂಗ, ಸರಸ, ವಿನೋದಗಳಲ್ಲಿ ಬಣ್ಣಬಣ್ಣವಾಗಿ, ಇಳಿವಯಸ್ಸಿನಲ್ಲಿ ಮುಗುಳಾಗಿ, ಮುಪ್ಪಿನಲ್ಲಿ ಕಣ್ಣಲ್ಲಿ ಕರಗಿ, ಮುಕ್ತರ ಮುಖದಲ್ಲಿಯೇ ತನ್ನ ಮುದ್ರೆಯನ್ನೊತ್ತಿ, ದೇವದೇವತೆಗಳಲ್ಲಿಯೂ ಅದು ಮುಗುಳದೆ ಬೆಳಗುವುದು. ಬುದ್ಧನ ಸ್ಮಿತ, **ರಾಮನ** ಸರಸ, **ಕೃಷ್ಣನ** ಹಾಸ್ಯ ಇವುಗಳು **ಭಾಸನ** ಹಾಸ, **ಕಾಳಿದಾಸನ** ವಿನೋದ. **ಬೀರಬಲ್ಲನ ಚತುರೋಕ್ತಿ, ತೆನ್ನಾಲಿಯ** ಕುಚೇಷ್ಟೆಗಳಷ್ಟೆ ಜನಜನಿತವಾಗಿವೆ. ನಗೆಯು ಬಡವಬಲ್ಲಿದನೆಂಬ ಭೇದವಿಲ್ಲದೆ ಎಲ್ಲರನ್ನೂ ಸಿಂಗರಿಸುವ ಒಡವೆ; ತಣಿಸುವ ವಸ್ತು.

೩. **ಪರಿಣಾಮ :**— ನಗೆಯಲ್ಲಿ ಮುಖ ಅಗಲವಾಗುವುದು, ಕಣ್ಣು ಹಿಗ್ಗುವುವು. ತುಟಿ ಮಿನುಗುವುದು, ಹಲ್ಲು ಮಿಂಚುವುವು. ಗಲ್ಲ ಬೆಳಗುವುವು, ಎದೆ ಉಕ್ಕುವುದು, ಪಕ್ಕಡಿ ನುಗ್ಗುವುವು, ಹೊಟ್ಟೆ ತುಂಬುವುದು, ಮೈ ಅಲುಗುವುದು, ನುಡಿ ನಡುಗುವುದು, ಕೈ ಮೀರಿ ಹೋದಾಗ ಕಣ್ಣು ನೀರಿಳಿಯುವುದು, ಪಕ್ಕಡಿ ಬಿರಿಯುವಂತೆ, ಹೊಟ್ಟೆ ಹುಣ್ಣಾಗುವಂತೆ ನೋಯುವುದು, ಉಗುಳು ತುಂತುರಿಗೆಯ್ಯುವುದು, ಅಟ್ಟಹಾಸದಿಂದ ಶಬ್ದ ಕೇಳಿದು ನೆಗೆಯುವುದು.

೪. **ನಗೆಯ ವೈವಿಧ್ಯ :**— ಮುಗುಳು ನಗೆಯು ಹುಡುಗರ ಹುಟ್ಟುಗುಣ, ಹರೆಯದವರ ಸಿಂಗಾರ, ಮುಕ್ತನ ಸಿದ್ಧಿ, ರಸಿಕರ ಸಾಧನೆ, ದೇವನ ಕುರುಹು. ಹೂನಗೆಯು ಸರಸದ ಮುಗುಳು, ಸಾಹಿತ್ಯದ ಪ್ರಾಣ, ವಾದ ವಿನೋದದ ಜೀವಾಳ. ನಗೆಯಾಟವು ವೀರರ ಶಸ್ತ್ರ, ವಾದಿಗಳ ಅಸ್ತ್ರ, ಪ್ರತಿಷ್ಠಿತರ ಶಾಸ್ತ್ರ. ಬಿರುಸು ನಗೆಯು ಧೂರ್ತರ ಕೈದು, ಕುಹಕಿಗಳ ಕೊಂಡೆಯು, ಕಿವಿ ಕಚ್ಚುವವರ ಅನ್ನ. ಕೆಲವರ ನಗೆಯು ಹುಡುಗರ ಹುಡುಗಾಟ, ಹುಚ್ಚರ ಹಣೆಬರಹ. ಹುಚ್ಚುನಗೆಯು ಹುಂಬರ ವಿಲಾಸ, ನಗದೆ ನಗಿಸುವುದು ಚದುರರ ರೀತಿ. ನಕ್ಕು ನಗಿಸುವುದು ವಿದೂಷಕರ ಪರಿಪಾಠ. ನಗೆಗೀಡಾಗುವುದು ಎಬಡರ ಹಾದಿ.

ಮೂರು ಸಲ ನಗುವ ಸುಂದರ ಕಲೆ ಗೊತ್ತಿರಬಹುದು. ಒಮ್ಮೆ ಹತ್ತಿರ ಕೂತ ಹನ್ನೊಂದೆಂದು ನಗುವವರ ಕೂಡ ನಗುವರು. ಕೆಲಹೊತ್ತಿನ ಮೇಲೆ ಮಂದಬುದ್ಧಿಯಲ್ಲಿ ಪ್ರಕಾಶಬಿದ್ದು. ಮಾತು ತಿಳಿದು ನಗುವುದು; ಆ ಮೇಲೆ ಮೊದಲಿನ ನಗೆಯ ಮೌಢ್ಯವನ್ನು ನೆನಸಿ, ಆ ಮೇಲಿನ ತಿಳುವಳಿಕೆಯ ಆಢ್ಯತೆಯನ್ನು ತಿಳಿದು ತನಗೆ ತಾನೆ ನಗುವುದು.

**೫. ಉಪಸಂಹಾರ:**— ನಗೆಯೊಂದು ಬೆಳಕು. ರಸಿಕರ ಹಾಸ್ಯ-ವಿನೋದದಲ್ಲಿ ಮಿಂಚಿನ ಸಂಚಾರವಿರುವುದು. ತಿಳಿಯುವವರಿಗೆ ಬುದ್ಧಿ ಸಂಸ್ಕಾರ ಮಾತ್ರ ಬೇಕು.

— ದ. ರಾ. ಬೇಂದ್ರೆ.

## ೩. ನಮ್ಮ ಏಳಿಗೆ

**೧. ಉಪಕ್ರಮ:**—'ಹಿರಿಯರ ಹೆಗ್ಗಳಿಕೆಯನು ಹೇಳುವವನೊಬ್ಬ ಶತಮೂರ್ಖ' ಎಂಬುದೊಂದು ಗಾದೆ. ಆದುದರಿಂದ ನಮ್ಮ ಪೂರ್ವಜರು ಹಾಗಿದ್ದರು, ನಮ್ಮ ನಾಡು ಹಿಂದಕ್ಕೆ ಅಷ್ಟಿತ್ತು, ಎಂದು ಮೊದಲಾಗಿ ದೊಡ್ಡಿತೆಯ ನಗಾರಿಯನ್ನು ಎಷ್ಟು ಬಾಜಿಸಿದರೇನು? ಹಾಗೆ ಹೇಳಿಕೊಳ್ಳುವವರ ಈಗಿನ ಕರುಣಾಸ್ಪದ ಸ್ಥಿತಿಯು ಮಾತ್ರ ಇನ್ನಷ್ಟು ಬೈಲಿಗೆ ಬರುವುದು. ಸರಿ. ಇದೇನು ತೀರ ಸುಳ್ಳಲ್ಲ.

**೨. ಇತಿಹಾಸ:**— ಆದರೆ ತಾವು ಏನಿದ್ದೆವು, ಈಗ ಏನಾಗಿರುವೆವು ಎಂಬುದನ್ನು ಸರಿಯಾಗಿ ಅರಿತುಕೊಳ್ಳುವುದಕ್ಕೆ ಐತಿಹಾಸಿಕ ಸತ್ಯದ ವಿದ್ಯುದ್ದೀಪದ ಆವಶ್ಯಕತೆಯಿದೆ; ಇದು ಕೈಯಲ್ಲಿ ಇರದಿದ್ದರೆ ಭವಿಷ್ಯತ್ಕಾಲದ ಕಗ್ಗತ್ತಲಲ್ಲಿ ಮುಂದುಗಾಣದೆ ಮುಗ್ಗರಿಸಿ ಬೀಳಬೇಕಾಗುವುದು, ದಾರಿತೋರದೆ ಬಳಲಬೇಕಾಗುವುದು. ಕರ್ಣಾಟದ ಸಂಪೂರ್ಣ ಇತಿಹಾಸವು ಬೆಳಕಿಗೆ ಇನ್ನೂ ಬಾರದೆ ಇದ್ದುದೆ ಕನ್ನಡರು ಹಿಂದುಳಿಯುವುದಕ್ಕೆ ಮುಖ್ಯ ಕಾರಣ.

ಕರ್ಣಾಟ ಇತಿಹಾಸವು ಆದರ್ಶ ಸ್ಫೂರ್ತಿ ಉತ್ಸಾಹಗಳ ಆಗರವಾಗಿದ್ದರೂ ಕನ್ನಡ ತರುಣರ ಕಿವಿಯಲ್ಲಿ ಅದರ ಕಹಳೆಯನ್ನು ಮೊಳಗಿಸಲು ಯಾವ ಟಾಡ್ ಸಾಹೇಬನೂ ಹುಟ್ಟಲಿಲ್ಲ. ಟಾಡ್‌ನ ಇತಿಹಾಸವನ್ನು ಓದಿ ರಜಪೂತ ಕಥಾ ಪ್ರಸಂಗಗಳ ಮೇಲೆ ನಮ್ಮಲ್ಲಿ ಕಥೆ ಕಾದಂಬರಿಗಳು. ಆದರೆ ನಮ್ಮ ಕಥೆ ನಮಗೆ ಗೊತ್ತಿಲ್ಲ. ಕನ್ನಡ ನುಡಿಯ ಪ್ರಾಚೀನತೆಯನ್ನು ಸಿದ್ಧಪಡಿಸಲು ನಮಗೆ ಯಾವ 'ಕಾಲ್ಡವೆಲ'ನೂ ದೊರೆಯಲಿಲ್ಲ. ಆದುದರಿಂದ ಸಂಸ್ಕೃತದವರ ನಂತರ ಹಿಂದುಸ್ಥಾನದಲ್ಲಿ ಗಣ್ಯರು ಯಾರು? ದ್ರವಿಡರು.

ಐತಿಹಾಸಿಕ ಸತ್ಯದ ಬೆಳಕು ಇಲ್ಲದೆ ಕನ್ನಡರು ದಿಗ್ಭ್ರಾಂತರಾಗಿದ್ದಾರೆ. 'ಆಂಧ್ರ' 'ಮಹಾರಾಷ್ಟ್ರ' ಇಂತಹ ಹೆಸರು ಸುಡಿಗಳಿಗೆ ಕನ್ನಡರು ಸುಮ್ಮನೆ ಮೋಸ ಹೋಗಿದ್ದಾರೆ. ತಮ್ಮ ಅರಿವು ತಮಗೆ ಇಲ್ಲದೆ ಬಳಲುತ್ತಿರುವ ಈಗಿನ ಸ್ಥಿತಿಯು ಹೃದಯ ಭೇದಕವಾಗಿದೆ.

**೩. ಭವಿಷ್ಯ**:— ಆದರೆ ಕನ್ನಡದ ಭವಿಷ್ಯತ್ಕಾಲವು ಉಜ್ವಲವಾಗಿದೆ. ಕನ್ನಡರು ಆತ್ಮವಿಶ್ವಾಸವುಳ್ಳವರಾದರೆ ಏನನ್ನು ಮಾಡಬಲ್ಲರೆಂಬುದನ್ನು ಜಗತ್ತಿಗೆ ಮನಗಾಣಿಸಿಕೊಡಲು ಇತಿಹಾಸವು ಸಿದ್ಧವಿದೆ. ಈಗ ಕೊರತೆಯಿರುವುದೇನು? ಶ್ರದ್ಧೆ ಬೇಕು. ಆತ್ಮವಿಶ್ವಾಸಬೇಕು. ಅಹಂಕಾರವಲ್ಲ. ಉನ್ಮಾದ ಮದೋನ್ಮತ್ತ ವೃತ್ತಿಯಲ್ಲ; ಬೇಕಾಗಿರುವುದು ಜ್ಞಾನಸಹಿತ ನಿಷ್ಠೆ, ಕೃತಜ್ಞತೆ.

**೪. ಅಖಂಡದೃಷ್ಟಿ**:— ಕತಕ್ಕರಿಂದ ಕನ್ನಡವು ಹಾಳಾಯಿತು. ತಾವು ಕೊಂಕಣಸ್ಥರು, ಅಯ್ಯರರು, ಅಯ್ಯಂಗಾರರು, ಮರಾಠಿಗರು, ಮುಸಲ್ಮಾನರು, ಎಂದು ಕನ್ನಡದ ಉಪ್ಪುಂಡವರಲ್ಲಿಯೇ ಕನ್ನಡಕ್ಕೆ ತಿರುಗಿ ಬಿದ್ದವರುಂಟು. ಧಾರ್ಮಿಕ ದುರಾಗ್ರಹಗಳಿಂದಲೂ ಕನ್ನಡಕ್ಕೆ ಆದ ಹಾನಿಯು ಎಣಿಸಲಾರದಷ್ಟು. ಕನ್ನಡದಲ್ಲಿ ಶ್ರದ್ಧೆಯನ್ನು ವಹಿಸುವವನಿಗೆ ಮತವಿಚಾರಗಳೂ ಅಡ್ಡಬರಲಾರವು.

ಈಗ ಸಹ ಕನ್ನಡರು ಪರಪ್ರಾಂತಗಳಲ್ಲಿ ಹೋಗಿ ಪ್ರಖ್ಯಾತರಾದವರು ಕಡಿಮೆಯಿಲ್ಲ. ಕಡಿಮೆ ಇರುವುದು ಒಂದೇ ಮಾತು. ಅದು ತಾವು ಕನ್ನಡರು ಎಂದು ಹೇಳುವುದನ್ನಷ್ಟು ನಮ್ಮವರು ಮರೆಯುತ್ತಾರೆ. ಹೀಗೆಲ್ಲ ಅನವಸ್ಥೆ! ಅವ್ಯವಸ್ಥೆ! ತಾಳಗೆಟ್ಟ ನುಡಿ! ಮೇಳಗೆಟ್ಟ ನಡತೆ! ಅಖಂಡ ಕರ್ಣಾಟದ ದೃಷ್ಟಿಯಿಲ್ಲ.

ಈ ಕೀಳುನಡತೆಯು ನಮ್ಮಲ್ಲಿಂದ ಪೂರ್ಣವಾಗಿ ಹೋಗದಿದ್ದರೆ ಕನ್ನಡವು ಬದುಕುವ ಆಶೆ ಇಲ್ಲ. ನಾವು ಕರ್ಣಾಟದಲ್ಲಿರುವಾಗ ಒಳಭಾಗಗಳನ್ನು ಹೇಳಿಕೊಳ್ಳಬಹುದು. ಆದರೆ ಹೊರಗೆ ಹೋದಾಗ 'ಕನ್ನಡ' ಎಂಬ ಅಖಂಡ ಅದ್ವಯ ಅವಿಭಾಜ್ಯ ನಾಮವನ್ನು ಹೇಳಬೇಕು. ಈ ಹೆಸರಿನಲ್ಲಿಯೇ ಹಿಗ್ಗಬೇಕು. ಈ ಹೆಸರಿನಲ್ಲಿಯೇ ನಲಿಯಬೇಕು.

**೫. ಉಪಸಂಹಾರ**:—ಕನ್ನಡವೆಂಬುದೇ ನಮ್ಮ ಸಂಜೀವನಿಮಂತ್ರ; ಮೃತ್ಯುಂಜಯ ಜಪ. ಅಲ್ಲದೆ ಬೇರೆ ಚಿಲ್ಲರೆಗಳ ಆರಾಧನೆಯು ನಮಗೆ ಚೆಲ್ಲಾಪಿಲ್ಲಿ ಮಾಡಲು ಮಾತ್ರ ಕಾರಣ, ಬುದ್ಧಿಭೇದಕ್ಕೆ ಔತಣ. ಆದುದ

ರಿಂದ ನಮ್ಮ ಏಳಿಗೆಯಾಗಬೇಕಾಗಿದ್ದರೆ, 'ಕನ್ನಡ' ದ ಆಹಿಂದ ನಾವು ಸ್ಮರಣೆಯೊಂದೇ ದಾರಿಯಲ್ಲವೆ?

— ಶಂ. ಬಾ. ಜೋಶಿ

## ೪. ಸ್ವಾರ್ಥತ್ಯಾಗ

**೧. ಉಪಕ್ರಮ:**— ನೀವು ದಧೀಚಿಯ ಕಥೆ ಕೇಳಿರಬೇಕು. ರಾಕ್ಷಸರನ್ನು ವಧಿಸಲು ಆಯುಧವನ್ನು ಮಾಡಲೆಂದು ಆ ಋಷಿಯು ತನ್ನ ಎಲುಬನ್ನೇ ಕಿತ್ತು ಕೊಟ್ಟನಂತೆ. ಶಿಬಿಚಕ್ರವರ್ತಿಯು ಪಾರಿವಾಳವೊಂದನ್ನು ಕಾಯಲು, ಗಿಡುಗನಿಗೆ ತನ್ನ ಶರೀರದ ಮಾಂಸವನ್ನು ಕಿತ್ತುಕೊಟ್ಟನಂತೆ. ಈ ತೆರನ ಬುದ್ಧಿಯು ಎಲ್ಲ ದೇಶದ ಮಹಾತ್ಮರನ್ನು ಒಲಿಸಿದಂತೆ ಕಾಣುವುದು.

**೨. ಈ ಭಾವನೆಯ ಮೂಲ:**—ಜನರು ಹೀಗೆ ಏಕೆ ಮಾಡುತ್ತಾರೆ? ಈ ತ್ಯಾಗಬುದ್ಧಿಯಿಂದ ಅವರಿಗೇನು ಲಾಭ? ಇದು ನಿಜಕ್ಕೂ ಪರೋಪಕಾರವೇ? ಸಾವಿರಾರು ಜನರು ತಾವು ಸಾವಿಗೆ ಮೈಯೊಡ್ಡಿ, ಪರರನ್ನು ಉಳಿಸಲು ಯತ್ನಿಸುವರೇಕೆ? ಪ್ರತಿಪ್ರಾಣಿಯು ತಾನು ಮೊದಲಿಗೆ ಬದುಕುವುದು ದೊಡ್ಡ ಕೆಲಸವಲ್ಲವೇ?

ನಾವೆಲ್ಲರು ಸಂತೋಷವಾಗಿರಲು ಇಷ್ಟಪಡುತ್ತೇವೆ. ಯಾರೂ ಬೇಸರಗೊಂಡಿರುವುದಕ್ಕೂ, ಅಳುತ್ತಿರುವುದಕ್ಕೂ ಇಷ್ಟ ಪಡುವುದಿಲ್ಲ. ನಮ್ಮ ಸಂತೋಷವು ಕೆಲವು ಮಟ್ಟಿಗೆ ನಮ್ಮ ಆವರಣವನ್ನು ಹೊಂದಿದೆ. ನಮ್ಮ ಹೊರಗಿರುವ ಬಯಲು ಹಸುರಾಗಿದ್ದಾಗ ನಮಗೆ ಉಲ್ಲಾಸವಾಗುವುದು. ಗಗನದಲ್ಲಿ ಕಾರ್ಮುಗಿಲು ಕವಿದಾಗ ಮನಸ್ಸು ಮುಗ್ಗುವುದು. ಚೆಲುವಿನ ಒಡವೆಗಳು ನಮ್ಮಲ್ಲಿ ಆನಂದವನ್ನು ಪ್ರೇರಿಸುವುವು. ಒಂದು ಹಕ್ಕಿ ಹಾರುವುದನ್ನು, ಮೊಲ ನೆಗೆಯುವುದನ್ನು ಕಂಡರೆ ನಮಗೆಷ್ಟು ಸಂತೋಷವಾಗುವುದಿಲ್ಲ? ಬದಲು ನಮ್ಮ ಸುತ್ತಲು ದುಃಖ ತುಂಬಿದ್ದರೆ ನಮಗೆ ವ್ಯಥೆಯಲ್ಲದೆ ಬೇರೆಯಿಲ್ಲ. ಅದಕ್ಕಾಗಿ ಮನುಷ್ಯನು ತಾನು ಕಷ್ಟಪಟ್ಟರೂ, ಪರರಿಗೆ ಸಂತೋಷ ದೊರೆಯುವಂತೆ ಮಾಡುವನು. ಪರರು ನಗಲು ನಮಗೂ ನಗು ಅಲ್ಲವೇ?

**೩. ಅದೇಯ ಸ್ವಾರ್ಥ:** — ಹೀಗಿರಲು ಪರರಿಗಾಗಿ ಬಾಳುವುದೆಂದರೆ ನಿಜಕ್ಕೂ ಒಂದು ಸ್ವಾರ್ಥವೇ. ಪರರು ಸಂತೋಷಪಟ್ಟರೆ ನಮಗೆ ಸಂತೋಷವಿದೆಯೆಂಬುದೇ ಅದರ ಗುಟ್ಟು. ನೀವು ಸಿದ್ಧಾರ್ಥನ ಬಾಲ್ಯದ ಕಥೆಯನ್ನು ಕೇಳಿದ್ದೀರಿ. ಅವನು ತನ್ನ ಸ್ನೇಹಿತನಿಂದ ಗಾಯಗೊಂಡ ಹಂಸ

ವನ್ನು ಒದುಕಿಸಿದನು. ಅವರ ವ್ಯಥೆಯನ್ನು ಕಳೆದನು. ಅವನಿಗೆ ಹೆಚ್ಚಿನ ಸಂತೋಷವಾಯಿತು.

ಆದ್ದರಿಂದಲೇ ಯಾರು ಪ್ರಪಂಚದ ಸುಖವನ್ನು ಹೆಚ್ಚಿಸಲು ಯತ್ನಿಸುತ್ತಾರೊ ಅವರು ತಮ್ಮ ಸುಖವನ್ನು ಹೆಚ್ಚಿಸಿಕೊಳ್ಳುತ್ತಾರೆ. ಪರೋಪಕಾರವು ಪ್ರಥಮತಃ ತಮ್ಮ ಉಪಕಾರವು. ಈ ತಿಳಿವಳಿಕೆ ಇಲ್ಲದ ಜನರು ಹೊರಗೆ ದುಃಖವನ್ನು ಹೆಚ್ಚಿಸುತ್ತಾರೆ. ತಮಗಾಗಿ ಹಲವು ಪ್ರಾಣಿಗಳನ್ನು ಕೊಲ್ಲುತ್ತಾರೆ. ಅವುಗಳ ಕುಣಿತ, ಬಣ್ಣಗಳಿಂದ ಜಗತ್ತಿಗೆ ದೊರೆಯುವ ಆನಂದವನ್ನು ಅಪಹರಿಸುತ್ತಾರೆ. ಆದುದರಿಂದ ಪ್ರಪಂಚವು ಬಡವಾಗುವುದು. ಮನುಷ್ಯನ ಆನಂದವೂ ಬಡವಾಗುವುದು.

೪. **ಉಪಸಂಹಾರ :**— ಆದುದರಿಂದ ಹಿರಿಯರು 'ಪರೋಪಕಾರಃ ಪುಣ್ಯಾಯ, ಪಾಪಾಯ ಪರಪೀಡನಂ' ಉಪಕಾರದಿಂದ ಪುಣ್ಯ—ಅಪಕಾರದಿಂದ ಪಾಪ; 'ತ್ಯಕ್ತೇನ ಭುಂಜೀಥಾಃ ; ತ್ಯಾಗದಲ್ಲಿ ಭೋಗ್ಯ ನೋಡು;' ಎಂದು ಸಾರಿರುವರು. ಅದೆಷ್ಟು ಯಥಾರ್ಥವಾದ ನುಡಿಯವು ?

## ೫. ಕಲಿಯುವ ಅವಶ್ಯಕತೆ

೧. **ಉಪಕ್ರಮ :**—ಯಾವಾಗ ನೋಡಿದರೂ ಜನರು ಸ್ವಾತಂತ್ರ್ಯವನ್ನು ಕುರಿತು ಮಾತನಾಡುತ್ತಾರೆ. ಎಲ್ಲವನ್ನು ತಾವೇ ಸ್ವತಂತ್ರವಾಗಿ ಕಂಡು ಹಿಡಿಯಬೇಕೆನ್ನುತ್ತಾರೆ. ಅವರು ಹೇಳುವ ಮಾತೇನೆಂದು ನನಗೆ ತಿಳಿಯದೆ ಇದೆ.

೨. **ಹಿಂದಿನವರ ಋಣ :**— ನಾವು ಹುಟ್ಟಿದೊಡನೆ ಪ್ರಪಂಚವು ನಮ್ಮ ಮೇಲೆ ತನ್ನ ಪ್ರಭಾವವನ್ನು ಬೀರುತ್ತದೆ. ಇದು ಕೊನೆಯವರೆಗೂ ನಡೆಯುತ್ತ ಇರುತ್ತದೆ. ನಮ್ಮ ಶಕ್ತಿ, ಉತ್ಸಾಹ, ಬುದ್ಧಿ ಇವು ಹೊರತು ನಾವು ನಮ್ಮದೆಂದು ಕರೆಯಬಹುದಾದುದು ಏನಿದೆ ? ಮಹಾನುಭಾವರಾದ ಪೂರ್ವಿಕರಿಂದಲೂ ಜತೆಯವರಿಂದಲೂ ನಾನು ಪಡೆದಿರುವುದನ್ನೆಲ್ಲ ನಾನು ಹೇಳಿದರೆ, ನನ್ನದೆಂದು ಉಳಿಯಬಹುದಾದ್ದು ಅತ್ಯಲ್ಪ.

೩. **ಗುರುಶಿಷ್ಯರು :**— ಎಲ್ಲ ಕಲೆಯಲ್ಲಿಯೂ ಗುರುಶಿಷ್ಯ ಪರಂಪರೆ ಇದ್ದೇ ಇರಬೇಕು. ಕಲೆಯಲ್ಲಿ ವಿಶಾರದನಾದ ಯಾವನನ್ನು ಕಂಡಾಗಲೂ ನೋಡು. ಅವನು ತನ್ನ ಪೂರ್ವಿಕರಿಂದ ಗುಣಗಳನ್ನು ಗ್ರಹಿಸಿರುವನೆಂಬುದು ಕಾಣುವುದು. ಅದರಿಂದಲೇ ಅವನು ಹಿರಿಯನಾಗಿರುವನು. 'ರಾಫೇಲಿನ್'

ಸಂಘ ಚಿತ್ರಕಾರರು ಆಕಾಶದಿಂದ ಧುಮ್ಮಿಕ್ಕಿಲ್ಲವಿಲ್ಲ. ಪೂರ್ವದ ಕಲೆಯಲ್ಲಿ ಉತ್ತಮವಾದುದರಲ್ಲಿ ತಮ್ಮ ಪ್ರೇರಣೆ ಪಡೆದಿರುವರು. ಅವರು ಹೀಗೆ ಮಾಡದೆ ಇದ್ದರೆ ಅವರ ವಿಷಯ ಮಾತನಾಡಬೇಕಾದ ಸಂದರ್ಭವೇ ಬರುತ್ತಿರಲಿಲ್ಲ.

೪. **ಕಲಿಯದೆ ಪ್ರಗತಿಯಿಲ್ಲ:**— ಆದರೆ ನಾವು ಮುದುಕರಾದವರು ಹೇಳಿದ ಮಾತಿಗೆ ಏಕೆ ಕಿವಿಗೊಡಬೇಕೇನು? ಒಬ್ಬನು ತನ್ನ ಸಮಾಚಾರ ತನಗೇ ಚೆನ್ನಾಗಿ ತಿಳಿದಿದೆ ಎಂದುಕೊಂಡಿರುತ್ತಾನೆ. ಅನೇಕರು ಹೀಗೆ ತಮಗೆ ತೋರಿದ ದಾರಿಯಲ್ಲೇ ನಡೆದು ತೀರಾ ಕೆಡುತ್ತಾರೆ. ಇನ್ನು ಕೆಲವರು ದಾರಿ ತಪ್ಪಿ ಆ ಮೇಲೆ ಸರಿಯಾದ ದಾರಿಗೆ ಬರುತ್ತಾರೆ. ನಾವು ದಾರಿತಪ್ಪಿ ತೊಳಲಿ ಸರಿಯಾದ ದಾರಿಯನ್ನು ಕಂಡು ಹಿಡಿದು ಫಲವೇನು, ಹಿರಿಯರು ಅದರಲ್ಲಿ ನಡೆಯುತ್ತಿದ್ದರೆ? ಎಲ್ಲರೂ ತಪ್ಪು ದಾರಿಯಲ್ಲಿ ನಡೆದು ಅದು ತಪ್ಪೆಂದು ತಿಳಿದುಕೊಂಡು ಆ ಮೇಲೆ ಸರಿಯಾದ ದಾರಿಗೆ ಬರುವುದಾದರೆ ಜನ ಮುಂದುವರಿಯುವ ಸಂಭವವೇ ಇಲ್ಲ.

೫. **ಕಲಿಯುವ ಮಹತ್ವ:**— ಎಂಥ ಬುದ್ಧಿಯುಳ್ಳವನೇ ಆಗಲಿ, ತನ್ನೊಳಗಿಂದಲೇ ಎಲ್ಲವನ್ನೂ ತರುವೆನೆಂದರೆ ಬಹಳ ಕೆಲಸ ಮಾಡಲಾರನು. ನಾವು ಯಾವ ಗುರುವನ್ನೂ ನೋಡಿ ಕಲಿಯಲಿಲ್ಲ, ಸ್ವಬುದ್ಧಿಯಿಂದಲೇ ಎಲ್ಲವನ್ನೂ ಮಾಡಿದೆವು. ಎಂದು ಕೊಚ್ಚಿಕೊಳ್ಳುವ ಕಲೋಪಾಸಕರನ್ನು ನಾನು ನೋಡಿದ್ದೇನೆ. ಮೂರ್ಖರು! ಇವರು ಹೇಳುವುದು ಸಾಧ್ಯವಾದೀತೆ! ಹೆಜ್ಜೆ ಹೆಜ್ಜೆಗೂ ಪ್ರಪಂಚವು ಇವರಿಗೆ ಬುದ್ಧಿ ಕಲಿಸದೇ ಬಿಡುವುದೇ? ಇವರ ದಡ್ಡತನ ಎಷ್ಟೆ ಆದರೂ ಇವರಿಗೆ ಸ್ವಲ್ಪ ಒಳ್ಳೆಯದನ್ನು ಮಾಡದೆ ಇರುವುದೇ?

ಇತರರ ಮಾತು ಹಾಗಿರಲಿ, ನನ್ನ ಮಾತನ್ನು ನಾನು ಹೇಳಬಹುದು. ನನಗೆ ಜಂಭವಿಲ್ಲ. ಬಹಳ ವರ್ಷದ ನನ್ನ ಬಾಳಿನಲ್ಲಿ ಹೇಳಿಕೊಳ್ಳಬಹುದಾದ ಹಲವು ಕೆಲಸವನ್ನು ನಾನು ಮಾಡಿರುವುದು ನಿಜವಾದ ಮಾತು. ಆದರೆ ಸತ್ಯವಾಗಿ ನುಡಿಯುವುದಾದರೆ ಸುತ್ತಣ ಪ್ರಪಂಚದಲ್ಲಿರುವುದನ್ನು ಕಣ್ಣು, ಕಿವಿ ಬಿಟ್ಟು ನೋಡುವುದರಲ್ಲಿ ಕೇಳುವುದರಲ್ಲಿ ಇಷ್ಟು: ವಿಚಾರಿಸಿ ತಿಳಿಯುವ, ಒಳ್ಳೆಯದು ಕೆಟ್ಟದೆನ್ನುವ, ನೋಡಿಕೇಳಿದ್ದನ್ನು ಸ್ವಲ್ಪ ಚನ್ನಾಗಿ ಹೇಳುವ ಶಕ್ತಿ; ಇಷ್ಟು ಹೊರತು ನನ್ನದೆನ್ನುವುದು ಇದರಲ್ಲೇನಿತ್ತು. ?

೬. - **ಉಪಸಂಹಾರ:**—ಆದುದರಿಂದ ನನ್ನ ಕೃತಿಗಳು ಕೇವಲ ನನ್ನೊಬ್ಬನ ಬುದ್ಧಿಯಿಂದ ಮಾತ್ರ ಆದವು ಎನ್ನುವುದು ತಪ್ಪು. ನನ್ನ ಸುತ್ತಣ ನೂರು

ಜನ ನೂರು ಸನ್ನಿವೇಶಗಳಿಂದ ಆದುವು ಅವು.

—ಗಟೆ (ಭಾಷಾಂತರಕಾರರು ಶ್ರೀನಿವಾಸರು.)

## ೬. ಬಡತನದ ಬಾಳು

**೧. ಉಪಕ್ರಮ :**— 'ಬಡತನದ ಬಾಳು' ಎಂದರೆ ಮೈಗೆ ಮುಳ್ಳು ಬರುವವು. ಮಹಾರೋಗಿಯನ್ನು ಮುಟ್ಟಿಸಿಕೊಳ್ಳದಂತೆ, ಬಡತನದ ಸ್ಪರ್ಶವೂ ತನಗಾಗಬಾರದೆಂದು ಎಲ್ಲರು ಯತ್ನಿಸುವರು. 'ಬಡತನವೆಂಬುದು ಕಡೆ ತನಕಿರಲಿ' ಎಂದು ಹಾಡಿಕೊಂಡ ದಾಸರುಂಟು. ಆದರೆ ಇದು ದಾಸರ ಮಾತು ಎಂದು ನಾವು ಮರೆಯಕೂಡದು. ಬಡತನವೇ ದಿವ್ಯವೆಂದು ಹೇಳುವುದಿದ್ದರೆ ವಿಷ್ಣುವಿನ ಹೆಂಡತಿಯು 'ಇದಿ' ಯಾಗಬೇಕಾಗಿತ್ತು; ಲಕ್ಷ್ಮಿಯಲ್ಲ.

**೨. ಪರಿಣಾಮ :**— ಒಂದು ಸಮಾಜದಲ್ಲಿ ಬಡವರಿರುವುದು ಆ ಸಮಾಜಕ್ಕೆ ಕೊರತೆ. ಬಡತನವು ಸಾಂಕ್ರಮಿಕ ರೋಗ, ಆದರೆ, ಪ್ಲೇಗುಗೀಗುಗಳಂತಲ್ಲ. ಪ್ಲೇಗಿನ ಸಂಪರ್ಕದಿಂದ ಪ್ಲೇಗೆ ಬರುವವಲ್ಲದೆ ಕಾಲರಾ ಬರಲಾರದು. ಆದರೆ ಬಡತನವು ಒಂದು ವಿಚಿತ್ರ ರೋಗ. ಬಡವರು ದೀನರಾದಂತೆ, ಬಲ್ಲಿದರಲ್ಲಿ ಸೊಕ್ಕು ಹೆಚ್ಚು. ಅವರು ದಿಟ್ಟರಾದರೆ, ಇವರಿಗೆ ಹೆದರಿಕೆ. ಅವರು ಹಕ್ಕಿನ ತಿರುಕರಾದರೆ, ಇವರು ರಾಷ್ಟ್ರದ ಧಾರ್ಮಿಕರು. ಅವರು ನಿರುಪದ್ರವಿಗಳಾದ ಕೂಲಿಕಾರರಾದರೆ, ಇವರು ಜಂಭದ ಪರೋಪಕಾರಿಗಳು. ಅಂತೂ ಅವರಿಗೊಂದು ವಿಕಾರ; ಇವರಿಗೊಂದು ವಿಕಾರ. ಒಂದು ಗುಣವಾದರೆ, ಇನ್ನೊಂದು ಗುಣವಾಗದು. ಬಡತವು ಸಾಮಾಜಿಕ ಪಾಪವೆಂದು ತಿಳಿಯದ ಹೊರತು ಮನುಷ್ಯನಿಗೆ ಮುಂದೆ ಗತಿಯಿಲ್ಲ. ಬಡತನವು ಅವರವರ ಪಾಪದ ಫಲವೆಂಬುವದು ತ್ರೇತಾಯುಗದಲ್ಲಿರಬಹುದು; ಈ ಯುಗದಲ್ಲಿಲ್ಲ. ಭೂಮಿತಾಯಿಯು ಬಡವಿಯಲ್ಲ. ಆವಳು ಕಾಳಿನ ಕಣಜ; ಹಣದ ಕಣಿ. ಆವಳ ಮಕ್ಕಳಿಗೆ ಬಡತನವೆಂದರೇನು ?

**೨. ಕಾರಣ ಮೀಮಾಂಸೆ :**— ಮೈಗಳ್ಳತನದಿಂದಲೇ ಬಡತನವು ಎಂಬ ಮಾತಿನಲ್ಲಿ ಸತ್ಯಕ್ಕಿಂತ ಸುಳ್ಳೇ ಹೆಚ್ಚಾಗಿದೆ. ಬಡವರಷ್ಟು ದುಡಿಯುವವರನ್ನು ಎಲ್ಲಿಯೂ ಕಾಣಲಾರೆವು. 'ಬಲ್ಲವರೆ ಬಲ್ಲಿದರಾಗುವರು; ಬರಿ ಕೋಣನಂತೆ ದುಡಿದರೇನು' ಎಂದು ಕೇಳಬಹುದು. ಸರಿ. ಇಲ್ಲಿ ಬಲ್ಲವರೆಂದರೆ ದುಡ್ಡು ಸೆಳೆದುಕೊಳ್ಳಲು ಬಲ್ಲವರು—ಎಂದು ಅರ್ಥಮಾಡಿದರೆ ಮಾತ್ರ ಸರಿಹೋಗುವದು; ಬಲ್ಲವರು ಎಂದರೆ ತಿಳುವಳಿಕೆಯನ್ನು ಹರಡಬಲ್ಲವರು; ಗಂಟು ಕಟ್ಟ

ಬಿಟ್ಟಿನವಲ್ಲ. ಹಸಿವೇ ಇರಲಿ. ಬಡತನವು ಸಾಮಾಜಿಕ ಪಾಪವೆಂದು ತಿಳಿಯಬೇ ಕೆಂದು ಬೇರಿದೆ. ಬೇಕಾದ ಬಳಿಕ ಇಂದು ಬಡತನವನ್ನು ಬೇರು ಸಹಿತ ಕಿತ್ತೊಗೆಯಲು ನಿಂತಿದೆ. ಇದೊಂದು ರಾಷ್ಟ್ರಲೀಲೆ.

೪. **ಸಾಧನ ವಿಚಾರ:**— ಬಡತನವು ಭೂಮಿಯ ಮೇಲೆ ಸಲ್ಲಿಸಿ ಕೊಟ್ಟಿಷ್ಟೇ ಜ್ಞಾನದ ಕೊರತೆ. ದಾನಧರ್ಮದಿಂದ ಸರಿಪಡಿಸಿಕೊಳ್ಳಲು ಬಡ ತನವು ತಿರುಕರ ಜೋಳಿಗೆಯಲ್ಲ. ಅದು ರುದ್ರನೊಡ್ಡಿದ ಕೈ. ಇಲ್ಲಿ ಬಡತನ ವಿರುವದರಿಂದಲೇ ಭೂಮಿಯ ಸೀಮೆಯನ್ನು ಅವನಿಗೆ ದಾಟಿ ಕೈಲಾಸವನ್ನು ಕಟ್ಟಬೇಕಾಯಿತು. ವ್ಯಕ್ತಿಯ ಧರ್ಮಸಾಧನೆಯಲ್ಲಿ ಶರೀರವೇ ಮೊದಲನೆ ಯದು. ಮಾನವ ಸಮಾಜದ ಧರ್ಮಸಾಧನೆಯಲ್ಲಿ ಬಡತನವನ್ನು ಕಳೆಯು ವದೇ ಮೊದಲು. ಆದರೆ ಮಾನವನು ಬಹುರೂಪನಾದ್ದರಿಂದ ಮನುವಿನ ಸ್ವರೂಪವು ಹೋಳಿಯದಾಗಿದೆ. ಅವರ ಏಕರೂಪವು ಹೊಳೆದರೆ, ಒಬ್ಬನ ದೋಷವು ಎಲ್ಲರೊಳಗಿನ ಕೊರತೆ ಎಂಬುದು ಸ್ಪಷ್ಟವಾಗುವದು. ಈ ಜ್ಞಾನದ ಉದಯವೇ ಕಾರ್ಯದ ಆರಂಭ.

೫. **ಉಪಸಂಹಾರ:**— ಅಂತೆಯೇ ಬಡತನವನ್ನು ನಿರ್ಬೀಜವ ನ್ನಾಗಿ ಹೇಗೆ ಮಾಡುವದೆಂಬುದೇ ಇಂದಿನ ವೇದಾಂತಗಳ ಒಗಟು; ರಾಜ ಕಾರಣಗಳ ಗುರಿ; ಮುಖ್ಯಳ್ಳವರ ಸಮಸ್ಯೆ; ಬಡವರ ಬಡಿದಾಟ; ಸಾಹಿತ್ಯದ ಸಾರ್ವಭೌಮನುವನ್ನು.

—ದ. ರಾ. ಬೇಂದ್ರೆ

## ೭. ಸಾಹಿತ್ಯವೆಂದರೇನು ?

೧. **ಉಪಕ್ರಮ:**— ನೂತನ ಸಾಹಿತ್ಯದ ಉದಯವಾದೊಡನೆ ಸಾಹಿತ್ಯವೆಂದರೇನು ಎಂಬ ಪ್ರಶ್ನೆಯೂ ನೂತನವಾಗಿಯೇ ಉದಯವಾಗು ತ್ತಿದೆ. ಕಾಲಕಾಲಕ್ಕೆ ಈ ಪ್ರಶ್ನೆಯುಕ್ಕಿದೆ, ಆಗಾಗ್ಗೆ ಇದಕ್ಕೆ ಉತ್ತರ ಕೊಡಲಾ ಗಿದೆ. ಆದುದರಿಂದ ಸಾಹಿತ್ಯದ ಲಕ್ಷ್ಯಲಕ್ಷಣಗಳನ್ನು ಹೇಳಲು ಹವಣಿಸುವೆ ಇಲ್ಲಿ.

೨. **ಶಬ್ದಾರ್ಥಗಳು:**—ನಮ್ಮ ಕಣ್ಣು ಕಿವಿ ಮೊದಲಾದ ಜ್ಞಾನೇಂದ್ರಿ ಯಗಳಿಗೆ ತೋರುವ, ಹಾಗೂ ನಮ್ಮ ಜ್ಞಾನಕ್ಕೆ ತೋರುವ ವಿಷಯಗಳಿಗೆ 'ಅರ್ಥ' ಎನ್ನುವರು. ಹಾಗೆ ತೋರಿದ ತೋಚಿದ ಅರ್ಥವನ್ನು ತಿಳಿಸಲು ಯೋಜಿಸಿದ, ಯೋಜಿಸಿದ ರೂಢ ವಾಕ್ಸಂಕೇತಕ್ಕೆ 'ಶಬ್ದ' ಎನ್ನುವರು. ವೇದ

ದೊಳಗಿನ ಶಬ್ದಗಳು ಈ ನಿಯಮವನ್ನು ಪಟ್ಟಿ ಇವೆ ಎಂದು ನಮ್ಮ ಪ್ರೊಫೆಸರ ತಿಳುವಳಿಕೆ. ಆ ಶಬ್ದಗಳಿಂದಲೇ ಅರ್ಥಸೃಷ್ಟಿಯಾಯಿತು. ಅಲ್ಲಿ ಶಬ್ದವು ಪ್ರಧಾನವಾದುದು. ಶಬ್ದವು ಪ್ರಭುವು, ಅರ್ಥವು ಅದರ ದಾಸಾನುದಾಸ.

ಶಾಸ್ತ್ರದ ರೀತಿ ಇದಕ್ಕೆ ವಿಪರೀತವಾಗಿದೆ. ಅಲ್ಲಿ ಅರ್ಥವು ಪ್ರಧಾನ; ಶಬ್ದವು ಗೌಣ. ಶಬ್ದವು ಸಂಕೇತ ಮಾತ್ರ. ಅರ್ಥವೇ ಪ್ರಾಣ. ಇಲ್ಲಿಯೂ ಶಬ್ದಾರ್ಥಗಳ ದಾಂಪತ್ಯವಿಲ್ಲ.

ಸಾಹಿತ್ಯದಲ್ಲಿ ಶಬ್ದಾರ್ಥಗಳು ಸಹಿತವಾಗಿವೆ. ಆ ಅರ್ಥಕ್ಕೆ ಅದೇ ಶಬ್ದ, ಆ ಶಬ್ದಕ್ಕೆ ಅದೇ ಅರ್ಥ, ಎಂಬುವಂತೆ ಅವು ಒಂದನ್ನೊಂದು ಕೂಡಿಕೊಂಡಿವೆ. ಹಿಂದಿನ ಲಾಕ್ಷಣಿಕರು ಇದಕ್ಕೆ ಸಾಹಿತ್ಯವೆಂದು ಕರೆದರು. ಇಂಗ್ಲೀಷಿನಲ್ಲಿ 'ಲಿಟರೇಚರ' ಎಂಬರು ಇದಕ್ಕೆ.

೨. **ಪದ್ಯ–ಗದ್ಯಗಳು** :— ಶಾಸ್ತ್ರ–ಗ್ರಂಥಗಳು 'ವಾಙ್ಮಯ,' ಕವಿತೆ–ಕಾದಂಬರಿಗಳು 'ಸಾಹಿತ್ಯ'. ಪದ್ಯ–ಗದ್ಯ ಎಂಬುದು 'ಸಾಹಿತ್ಯ–ವಾಙ್ಮಯ' ಗಳ ದೃಶ್ಯರಚನೆಯ ದೇಹ, ಕುರುಹು. ಪದ್ಯಕ್ಕೆ— ಅಕ್ಷರದ, ಗಣದ, ತಾಲದ, ಮಾತ್ರೆಯ ಅಥವಾ ಮತ್ತೆ ಬೇರೆ ಬಗೆಯ ನಿಬಂಧನೆಯಿದೆ. ಗದ್ಯಕ್ಕೆ ಈ ನಿಬಂಧನೆಯಿಲ್ಲ. ಪದ್ಯವೆಂದರೆ 'ಕಾವ್ಯ', ಗದ್ಯವೆಂದರೆ 'ಶಾಸ್ತ್ರ' ಎಂದು ಇಲ್ಲದ ತೊಡಕು ಮಾಡಬಾರದು. ಶಾಸ್ತ್ರವು ಪದ್ಯದಲ್ಲಿರಬಹುದು; ಕಾವ್ಯವು ಗದ್ಯದಲ್ಲಿರಬಹುದು. ಗದ್ಯದಂತೆ ಕಾಣುವ ಪದ್ಯಗಳೂ ಪದ್ಯದಂತೆ ಕಾಣುವ ಗದ್ಯಗಳೂ ಇವೆ. ವಿವೇಕಿಸುವ ಶಕ್ತಿ ಬೇಕು.

೩. **ಶಾಸ್ತ್ರ–ಸಾಹಿತ್ಯ** :— ಸಾಹಿತ್ಯದ ಮಾತು ಇಷ್ಟು ಸುಲಭವಿದ್ದರೆ ತೊಡಕೆಲ್ಲಿದೆ? 'ಅಂಕಲಿಪಿ' ಮೊದಲು ಮಾಡಿಕೊಂಡು 'ಅಜ್ಞೇಯ ಮೀಮಾಂಸೆ' ಯ ವರೆಗೂ ಶಾಸ್ತ್ರವಿರುವಂತೆ, 'ಅಳಬೇಡೋ ನನಕಂದ' ದಿಂದ 'ಆನಂದದ ನಾಡಿಯಂ ತೊನೆಯುವ' ವರೆಗೂ ಸಾಹಿತ್ಯವಿದೆ. ಇದ್ದದ್ದನ್ನು ಇದ್ದಂತೆ ಪ್ರಮಾಣಿಕವಾಗಿ ತಿಳಿವಳಿಕೆಯಾಗುವಂತೆ ಹೇಳಿದುದು 'ಶಾಸ್ತ್ರ,' ಎನಿಸಿದ್ದನ್ನು ಎನಿಸಿದಂತೆ ಸರಿಯಾಗಿಯೋ, ಕೊಂಕಾಗಿಯೋ, ತೋಡಿಕೊಳ್ಳುವದು, ಆಡಿಕೊಳ್ಳುವದು ಸಾಹಿತ್ಯ. ವಸ್ತುಸ್ಥಿತಿಯ ಪ್ರಕಾರ, ತಿಳುವಳಿಕೆ ಮಾಡಿಕೊಡುವ ಶಕ್ತಿಯ ಪ್ರಕಾರ, ಆ ಶಾಸ್ತ್ರಕ್ಕೂ ಆ ಶಾಸ್ತ್ರಜ್ಞನಿಗೂ ಕೀರ್ತಿ. ಅನುಭವಿಸಿದ ಭಾವಗಳ ಜಾತಿಯ ಪ್ರಕಾರ, ಆಡಿತೋರಿಸುವ ಶಕ್ತಿ–ಚದುರು–ಜಾಣ್ಮೆಯ ಪ್ರಕಾರ, ಆ ಕಾವ್ಯಕ್ಕೂ, ಆ ಕವಿಗೂ ಹೆಸರು.

೫. **ಉಪಸಂಹಾರ:**— ಸಾಹಿತ್ಯ–ಶಾಸ್ತ್ರದಲ್ಲಿ ಇದಿಷ್ಟೇ ಹುರುಳು, ಉಳಿದುದು ಹುರುಡು.

ದ. ರಾ. ಬೇಂದ್ರೆ

**ಅಭ್ಯಾಸ ೧೨.**

೧. ಹಿಂದಿನ ಬೇರೆ ಬೇರೆ ಗುಂಪುಗಳಲ್ಲಿ ಕೆಲವು ವಿಷಯಗಳ ರೂಪ ರೇಷೆಯನ್ನಷ್ಟೇ ಬರೆಯಲಾಗಿದೆ. ಅವುಗಳನ್ನುಪಯೋಗಿಸಿ ನಿಬಂಧಗಳನ್ನು ಬರೆಯಿರಿ.

೨. ಕೆಳಗಿನ ವಿಷಯಗಳನ್ನು ಕುರಿತು ನಿಬಂಧಗಳನ್ನು ಬರೆಯಿರಿ.

(೧) ಸಹಿಷ್ಣುತೆ, ಶೌರ್ಯ, ವಿಕ್ರಾಂತವಾಸ, ನೈರ್ಮಲ್ಯ, ಹೇಡಿತನ, ಆತ್ಮ ಪರೀಕ್ಷಣ, ಔದಾರ್ಯ, ಧೈರ್ಯ, ಶಾರೀರಿಕ ಶಿಕ್ಷಣ, ಅಹಂಕಾರ, ಆರೋಗ್ಯ, ಸಹ ಶಿಕ್ಷಣ, ಸಹಕಾರ, ಮೂರ್ತಿಪೂಜೆ, ಸ್ವದೇಶಿವ್ರತ, ಗೆಳೆತನ, ಧರ್ಮ–ಭ್ರಮ, ಸಂಘ ಶಕ್ತಿ.

(೨) ನಮ್ಮ ವಿದ್ಯಾರ್ಥಿಗಳು, ನಮ್ಮ ಶಿಕ್ಷಕರು, ನಮ್ಮ ರೈತರು, ನಮ್ಮ ವರ್ತಕರು, ನಮ್ಮ ಕೂಲಿಕಾರರು, ನಮ್ಮ ಆದರ್ಶ, ನಮ್ಮ ಪರಿಜನರು, ನಾನು ಮೆಚ್ಚಿದ ಕವಿ, ನಮ್ಮ ಮುಂದಾಳುಗಳು.

(೩) ಅಸ್ಪೃಶ್ಯತಾ ನಿವಾರಣ, ಕರ್ನಾಟಕ ಏಕೀಕರಣ, ವಿಧವಾವಿವಾಹ, ಕನ್ನಡದ ಮುನ್ನಡೆ, ಜಾತೀಯ ಐಕ್ಯ, ಶಿಕ್ಷಣದ ಗೊತ್ತುಗುರಿಗಳು, ಬಡತನದ ಬವಣೆ, ಮದ್ಯಪಾನ ಪ್ರತಿಬಂಧ, ಗ್ರಾಮಸುಧಾರಣೆ, ನಾವು ಬಿದ್ದುದೆಂತು? ನಾವು ಏಳುವದೆಂತು?

(೪) ಗೆಳೆಯರ ಆಯ್ಕೆ, ಸಾಹಸದಲ್ಲಿ ಶ್ರೇಯ, ಗೆಲವಿನ ಗುಟ್ಟು, ಯೌವನದ ಸವಿಗನಸು, ಓದಿನ ಆನಂದ, ಜೀವನಕಲಹ, ಆನಂದದ ಅಡಿಗಲ್ಲು, ಜೀವನಕಲೆ, ಏಳ್ಗೆಯ ಹಿರಿದಾರಿ, ಹಿರಿತನದ ಕುರುಹು, ಮಹಾತ್ಮರ ಮಹದುಪಕಾರ, ಸಂಕಟಗಳ ಸೌಭಾಗ್ಯ, ಹುಚ್ಚುತನದ ಹೆಚ್ಚಳ.

(೫) ನಾಳೆ ಎಂಬುವವನ ಮನೆ ಹಾಳು. ತಾಗುವ ಮುನ್ನವೇ ಬಾಗು! ನಾವೇ ನಮ್ಮ ದೈವದ ನಿರ್ಮಾತರು, ಶಾಂತಿಗಾಗಿ ಸಮರ.

## ೬. ಕಲ್ಪನಾಪರ.

### ೧. ಅಂದರೇನು?

(೧) **ಕಲ್ಪನೆಯು** ನಮ್ಮೆಲ್ಲರಲ್ಲಿದ್ದ ಒಂದು ಶಕ್ತಿ. ಅದೊಂದು ಉತ್ಪಾದಕ ಶಕ್ತಿ. 'ಇಲ್ಲದ' ರೊಳಗಿಂದಲದು 'ಎಲ್ಲವನ್ನು' ಹುಟ್ಟಿಸುವುದು.

ಅದರ ಒಲವಿಂದ ನಾವು ಕಂಗಳಿಲ್ಲದೆ ನೋಡುವೆವು. ಕಿವಿಗಳಿಲ್ಲದೆ ಕೇಳುವೆವು.—ಕೈಯಿಲ್ಲದೆ ಮಾಡುವೆವು.—ಕಾಲಿಲ್ಲದೆ ಅಲೆದಾಡುವೆವು. ಅದು ತನ್ನ ರೆಕ್ಕೆಗಳ ಮೇಲೆ ನಮ್ಮನ್ನು ಕುಳ್ಳಿರಿಸಿಕೊಂಡು ವಿಶ್ವದಲ್ಲೆಲ್ಲ ನಮ್ಮನ್ನು ಒಯ್ದು, ನಮಗದರ ದರ್ಶನವನ್ನು ಮಾಡಿಕೊಡುವುದುಂಟು. ಇದರ ನೆರವಿನಿಂದ ಕುಳಿತಲ್ಲಿಯೆ ಬರೆದವು **ಕಲ್ಪನಾಪರ ನಿಬಂಧಗಳು.**

(೨) ಇದರಲ್ಲಿ ವರ್ಣನೆಯಿದೆ- ಕಥನವಿದೆ-ಚಿಂತನವಿದೆ; ಇದು ಅವೆಲ್ಲವುಗಳನ್ನೂ ಒಳಗೊಂಡಿದೆ. ಆದರೆ ಇದರ ರೀತಿಯು ಸ್ವಲ್ಪ ಬೇರೆ.

ಸಾಮಾನ್ಯ ವರ್ಣನೆಯಲ್ಲಿ ಕಂಡದ್ದನ್ನು ಚಿತ್ರಿಸುವೆವು.—ಇಲ್ಲಿ ಕಾಣದ್ದನ್ನು ಚಿತ್ರಿಸುವುದು. ಇಲ್ಲಿ ಕಲ್ಪನೆಯು ಕಂಗಳು ನಮಗೆ ನವದೃಶ್ಯಗಳನ್ನು ತೋರಿಸುವವು. ಅವನ್ನು ಈ ನಿಬಂಧಗಳಲ್ಲಿ ಸೇರಿಸುವುದುಂಟು.

ಸಾಮಾನ್ಯ ಕಥನದಲ್ಲಿ ಕಂಡದ್ದನ್ನಾಗಲಿ, ಓದಿದ್ದನ್ನಾಗಲಿ ಉಸುರುವೆವು. ಇಲ್ಲಿ ಹೊಸ ಸಂಗತಿಗಳನ್ನು ಕಲ್ಪಿಸಿ ಅವನ್ನು ಹೇಳುವುದು. ಅದೇ ಮೇರೆಗೆ ಈ ನಿಬಂಧಗಳಲ್ಲಿ ವಿಚಾರಗಳಿಗೂ ಆಸ್ಪದವಿದೆ. ಆದರೆ ಅವು ಕಲ್ಪನೆಯ ರಾಜ್ಯಕ್ಕೆ ಸಂಬಂಧಿಸಿದವುಗಳು.

(೩) ಹೀಗೆಂದ ಮಾತ್ರಕ್ಕೆ ಈ ನಿಬಂಧಗಳಲ್ಲಿ ಸತ್ಯದ ಆಶ್ರಯವಿರುವುದಿಲ್ಲವೆಂದಲ್ಲ. ಆದರೆ ವರ್ಣಿಸಿದ ಇಲ್ಲವೆ ಹೇಳಿದ ಸಂಗತಿಯು ಪ್ರತ್ಯಕ್ಷ ಸೃಷ್ಟಿಯಲ್ಲಿ ಒದಗಿರುವುದಿಲ್ಲ ಇಷ್ಟೆ! **ಇಲ್ಲಿಯದು ವಾಸ್ತವ ಸತ್ಯವಲ್ಲ, ಆದರ್ಶ ಸತ್ಯ** (Ideal Truth).

**೨. ಬಗೆಗಳು :—**

ಕಲ್ಪನಾಪರ ನಿಬಂಧಗಳಲ್ಲಿ ಮೂರು–ನಾಲ್ಕು ಬಗೆಗಳನ್ನು ಕಲ್ಪಿಸಬಹುದು. ಅವುಗಳಲ್ಲೆಲ್ಲ ಕಲ್ಪನೆಯ ವಿಲಾಸಕ್ಕೆಯೇ ಪ್ರಾಧಾನ್ಯವಿರುವುದು. **ಕಾದಂಬರಿ**ಗಳು ಕಲ್ಪನೆಯ ನಿರ್ಮಿತಿಗಳು. ಅವು ನಿಜವಾಗಿ ಇದೇ ವರ್ಗಕ್ಕೆ ಸೇರಿದವುಗಳು. ಆದರೆ ಅವು ನಿಬಂಧಗಳಾಗಲರಿಯದುದರಿಂದ, ಅವನ್ನಿಲ್ಲಿ ವಿಚಾರಿಸುವ ಕಾರಣವಿಲ್ಲ.

(೧) ಕಟ್ಟುಕತೆ, ಬಣ್ಣನೆ, ವೃತ್ತಾಂತಗಳು.

(೨) ಕನಸುಗಳು (Dreams), ಕಣಸುಗಳು (Visions).

(೩) ಕಲ್ಪಿತವಸ್ತುಗಳ ಆತ್ಮಚರಿತೆಗಳು.

(೪) ಕಲ್ಪಿತ ಕಾರ್ಯಪರಿಚಯ.—ಇವುಗಳನ್ನಷ್ಟು ಇಲ್ಲಿ ಚರ್ಚಿಸುವೆವು.

**(೧) ಕಲ್ಪಿತಕಥೆ-ಬಣ್ಣನೆಗಳು:—** ಕತೆಯ ವಿಚಾರವನ್ನು **ಎರಡನೆಯ ವಿಭಾಗದಲ್ಲಿಯೇ** ಮಾಡಲಾಗಿದೆ. ಅಲ್ಲಿ ಸಾಮಾನ್ಯ ಕತೆಗಳ ಜತೆಯಲ್ಲಿ ಕಟ್ಟುಕತೆಗಳೂ ಬಂದಿರುವವು. ಅವನ್ನು ಪರೀಕ್ಷಿಸಿ ಅವುಗಳಲ್ಲಿ ಕಲ್ಪನೆಯ ಅಂಶವು ಹೆಚ್ಚಾಗಿರುವುದೆಂಬುದನ್ನು ಅರಿತುಕೊಳ್ಳಬೇಕು.

ಇಲ್ಲಿ ಕೆಲವು **ಕಾಲ್ಪನಿಕ ವರ್ಣನೆಗಳನ್ನು** ಕುರಿತು ವಿಚಾರಿಸುವ. ಮುಂದೆ ಕಾಣಿಸಿದ '**ಚಳಿರಾಯನ ಚೆಲ್ಲಾಟವು**' ಇದರ ಒಂದು ಮಾದರಿ. ಶ್ರೀಮಾನ್ ಜಹಾಗೀರದಾರರು ಬರೆದ 'ಕಾಗೆ' 'ಬೆಕ್ಕು' ಇತ್ಯಾದಿ ವಿಡಂಬನಾತ್ಮಕ ನಿಬಂಧಗಳು ಇನ್ನೊಂದು ಮಾದರಿ. ಅವನ್ನೆಲ್ಲ ಪರಿಶೀಲಿಸಿಯೇ ಈ ಬಗೆಯ ನಿಬಂಧಗಳನ್ನು ಬರೆಯಲು ಕಲಿಯಬೇಕು.

**(೨) ಕನಸುಗಳು: —** ಕನಸಿನ ಸಾಹಿತ್ಯವು ಇತ್ತೀಚಿಗೆ ಅನ್ಯಭಾಷೆಗಳಲ್ಲಿ ಬೆಳೆಯುತ್ತಲಿದೆ. ಕನಸು ಕಲ್ಪನೆಯ ನಿರ್ಮಿತಿಯೆ ಇದ್ದುದರಿಂದ ಅದರಲ್ಲಿ ಕಂಡ ವಿಷಯಗಳನ್ನು ಚಿತ್ರಿಸುವ ಬರಹವನ್ನು ಈ ವರ್ಗಕ್ಕೆ ಸೇರಿಸಿರುವೆವು. ನಾವು ಅನೇಕ ಕನಸುಗಳನ್ನು ಪ್ರತಿನಿತ್ಯ ಕಾಣುವೆವು. ಅವನ್ನೆಲ್ಲ ಸರಿಯಾಗಿ ಮರೆತುಬಿಡುವೆವು. ಆದರೆ ಅವುಗಳಲ್ಲಿಯ ಸುಂದರವಾದವುಗಳನ್ನೂ ಚಮತ್ಕೃತಿಯುತವಾದವುಗಳನ್ನೂ ಬರೆದಿಡುವುದರಿಂದ ಅನೇಕ ದೃಷ್ಟಿಯಿಂದ ಒಂದು ಉಪಯುಕ್ತವಾದ ಕಾರ್ಯವನ್ನು ಮಾಡಿದಂತಾಗುವುದು. ಅದೊಂದು ಸುಂದರವಾದ ವಾಙ್ಮಯಪ್ರಭೇದವಾಗುವುದು.

ಇದಕ್ಕಾಗಿ ಕನಸಿನಿಂದ ಎಚ್ಚತ್ತ ಕೂಡಲೆ ಅದನ್ನು ನೆನಪಿದ್ದಷ್ಟು ಬರೆದಿಡಲು ಯತ್ನಿಸಬೇಕು. ಮರೆತ ಭಾಗಗಳನ್ನು ಹಿಂದಿನಿಂದ ಹೊಂದಿಸಬೇಕು. ಈ ಅಭ್ಯಾಸವು ಸ್ವಲ್ಪ ಬೆಳೆಯಿತೆಂದರೆ ಕನಸುಗಳನ್ನು ಕಂಡಂತೆ ಬರೆಯಲು ಬರುವುದುಂಟು. ಅದರಿಂದ ನಮ್ಮ ಮನಸ್ಸಿನ ಅಜ್ಞಾತ ಪ್ರದೇಶದಲ್ಲಿಯ ಅಲೆದಾಟವು ಯಥಾರ್ಥವಾಗಿ ಚಿತ್ರಿತವಾಗುವುದು.

**(೩) ಕಲ್ಪಿತ ಆತ್ಮಚರಿತಗಳು:—** ಇದೊಂದು ರಂಜನಕ್ಕಾಗಿ ಹುಟ್ಟಿದ ರೀತಿ. ಇದರಿಂದ ಪ್ರಚಲಿತ ವಿಷಯಗಳನ್ನೆಲ್ಲ ವ್ಯಂಗ್ಯವಾಗಿ ಟೀಕಿಸಿ ಸಮಾಜದ ನಡೆನುಡಿಗಳಲ್ಲಿ ಸರಿಯಾದ ಬದಲಾವಣೆಯನ್ನು ಮಾಡಬಹುದು. ಆಂಗ್ಲಭಾಷೆಯಲ್ಲಿ ಪ್ರಸಿದ್ಧವಾದ '**ಶಿಲಿಂಗದ ಆತ್ಮವೃತ್ತ**'ವು ಆ ನಾಣ್ಯದ ನಿರ್ಮಿತಿಯ ವಿಷಯವನ್ನಿರಿಸುವುದಲ್ಲದೆ ಅನೇಕ ಜನರ ರೀತಿನೀತಿಗಳನ್ನು ಬಯಲಿಗೆಳೆದಿರುವುದು. ಇದೇ ಮಾದರಿಯಿಂದ ಮುಂದಿನ ಮಹನೀಯರು

ಕೆಲವು ವ್ಯಂಗ್ಯ '**ಚರಿತೆ**'ಗಳನ್ನು ಬರೆದು ಈ ರಂಜನೆಯು ಮುಖಾಂತರ ವಾಗಿ ಸಮಾಜದ ಕಣ್ಣಲ್ಲಿ ಅಂಜನವನ್ನು ಹಾಕಿದ್ದುಂಟು.

ಈ ರೀತಿಯೂ ಬಗೆಯಾದದ್ದು. ಇಲ್ಲಿಯೂ ಮಾದರಿಗಳ ಪರೀಕ್ಷಣ ಅನುಕರಣಗಳೇ ಸಾಧನಗಳು. ಇವನ್ನು ಬರೆಯುವ ಪೂರ್ವದಲ್ಲಿ ನಾವು ಟೀಕಿಸಬೇಕಾದ ವಿಷಯಗಳಾವವು ಎಂಬುದನ್ನು ನಿಶ್ಚಯಿಸಿ ಅವಕ್ಕೆ ಹೊಂದಿಕೆಯಾಗುವ ವಸ್ತುವನ್ನೇ ಆರಿಸಬೇಕು. ವಸ್ತುಗಳನ್ನು ಕೊಟ್ಟಿದ್ದರೆ ಆಗ ಅದರ ಮುಖಾಂತರ ಯಾವ ಯಾವ ಮಾತುಗಳನ್ನು ಟೀಕಿಸಲು ಬರುವುದು ಎಂಬುದನ್ನು ಕಂಡುಹಿಡಿಯಬೇಕು. ಟೀಕೆಯು ಸಾಧ್ಯವಿಲ್ಲದಿದ್ದರೆ ಬರೀ ರಂಜನೆಯಾಗುತ್ತಿದ್ದರೂ ಸರಿ. ಅದು ಚೆನ್ನಾಗಿ ಆಗುವಂತೆ '**ಚರಿತೆ**' ದಲ್ಲಿಯ ಸನ್ನಿವೇಶಗಳನ್ನು ಕಲ್ಪಿಸಬೇಕು.

**(೪) ಕಾಲ್ಪನಿಕ ಕಾರ್ಯಪರಿಚಯ :**—ಇದು ಇನ್ನೊಂದು ರೀತಿ. ಇದರಲ್ಲಿ ನಾವು ಒಂದು ವಿಶೇಷವಾದ ಸ್ಥಾನದಲ್ಲಿದ್ದರೆ, ಏನು ಮಾಡಬಹುದೆಂಬುದರ ಪರಿಚಯವನ್ನು ಮಾಡಿಕೊಡಬೇಕಾಗುವುದು. ಜೊಂದು ಗಾಳಿ ಗೋಪುರದ ಮಾದರಿಯೇನೋ ನಿಜ. ಆದರೆ ಇವುಗಳಿಂದ ನಮಗೆ ಮುಂದಿನ ಕಾರ್ಯವನ್ನು ನಿಶ್ಚೈಸುವ ಶಕ್ತಿಯು ಬರುವುದು. ಪ್ರತಿಯೊಬ್ಬನೂ ತನ್ನ ಮುಂದಿನ ಕಾರ್ಯವನ್ನು ಮೊದಲು ಕಲ್ಪಿಸಿಯೆ ತರುವಾಯ ಪ್ರತ್ಯಕ್ಷ ಕೆಲಸವನ್ನು ಆರಂಭಿಸುವುದುಂಟು. ಅದಕ್ಕಾಗಿ ಈ ಬಗೆಯ ಅಭ್ಯಾಸವು ತೀರ ಅವಶ್ಯಕ.

**೩. ಮಾದರಿಯ ನಿಬಂಧಗಳು :—**

**೧. ಚಳಿರಾಯನ ಚಲ್ಲಾಟ.**

**೧. ಉಪಕ್ರಮ :**— ಇದೀಗ ಚಳಿರಾಯನ ಆಗಮನವು, ಅದೂ ಅತಿ ನಿಗೂಢವಾಗಿ. ಜನರೆಲ್ಲ ಸುಖನಿದ್ರೆಯಲ್ಲಿ ಮೈಮರೆತಾಗ, ಇವನು ಜನರನ್ನು ಮುತ್ತುವುದೆಂದರೆ ಅದೆಂಥ ಹೀನ ಕೆಲಸ? ಆದರೆ ಹೀನರು ಹೀನ ಕೆಲಸವನ್ನಲ್ಲದೆ ಮಾಡುವುದೇನನ್ನು? ತಿಳಿಯದೆ ಸುಳುಳಿ, ಪೊಳೆಯದೆ ಆಳ ತೊಡಗಿದ ನಮ್ಮ ಮಾರಾಯ.

**೨. ಇವನ ಪರಿವಾರ :**— ನಮ್ಮ ಚಳಿರಾಯನಿಗೆ ಇರುಳು ಪ್ರಿಯತಮೆ. ಹಗಲು—ಬೆಳಕಿನಲ್ಲಿ ಅವನ ಆಟವು ಅಷ್ಟು ಚೆನ್ನಾಗಿ ನಡೆಯುವಂತಿಲ್ಲ, ಈ ಅರ್ಥದಿಂದ ಅವನು **ನಿಶಾಪತಿ—ನಿಶಾಚರ.** ಜಗತ್ತಿಗೆಲ್ಲ ಜೀವನ

ಪನ್ನೀರೆಯುವ ರವಿರಾಜನು ಇವನ ಹುಟ್ಟು ಹಗೆ. ಜಗತ್ತಿನಲ್ಲೆಲ್ಲ ಮಬ್ಬು ಕವಿದಾಗ ಇವನಿಗೆ ಹುರುಪಿನ ಹಬ್ಬ.

**೩. ಇವನ ಕಾರ್ಯ:—** ಎಂತಹ ಕ್ರೂರಕೃತ್ಯವು ಈ ಚಳಿರಾಯನದು! ಮಳೆರಾಯನ ಮಹಾಕಾರ್ಯವನ್ನು ಇವನು ಅರೆಗಳಿಗೆಯಲ್ಲಿ ಅಳಿಸಿಬಿಟ್ಟನು. ಧರೆ–ಯುವತಿಯ ಹಸನಾದ ಹಸಿರು ಸೀರೆಯನ್ನು ಸೆಳೆದು ಆಕೆಗೆ ಸನ್ಯಾಸಿಯ ಅರಿಸಿನ ಬಟ್ಟೆಯನ್ನು ಉಡಿಸಿದ. ಇವನ ಸ್ಪರ್ಶದಿಂದ ಮರಗಳ ಯೌವನವು ಮಾಯವಾಗಿ, ಅವುಗಳಲ್ಲಿ ಮುಪ್ಪು ಮೈದೋರಿತು. ಸ್ವೈರವಾಗಿ ಬಾನಿನಲ್ಲಿ ಆಡುವ, ಹಾಡುವ, ಹಕ್ಕಿಗಳು ತಮ್ಮ ಗೂಡಿನಲ್ಲಿಯೇ ನಡುಗಲಾರಂಭಿಸಿದವು. ಮೀನುಗಳು ಹೆಪ್ಪುಗಟ್ಟಿದ ನೀರಿನಲ್ಲಿ ಮಿಡುಕ ತೊಡಗಿದವು. ಹುರುಪಿನ ಹುಲಿಗಳು ಇಲಿಗಳಂತೆ ಗವಿಗಳನ್ನು ಸೇರಿ ಈ ವೈರಿಭೈರವನ ಅಳಿಗಾಲವನ್ನು ನಿರೀಕ್ಷಿಸುತ್ತ ಕುಳಿತವು. ಕೆಲವು ಕೃತಘ್ನ ಕರಡಿಗಳು ಮಾತ್ರ ಇವನ ಪ್ರೀತಿಯನ್ನು ಪಡೆದು, ಇವನ ಸಾಮ್ರಾಜ್ಯವನ್ನು ಹೊಗಳುತ್ತ ಅತ್ತಿತ್ತ ಉಲಿಯುತೊಡಗಿದವು.

**೪. ಜನರ ಗೋಳು:—** ಚಳಿರಾಯನ ಈ ಹಾಳು ಆಳಿಕೆಯಲ್ಲಿಯ ಜನರ ಗೋಳನ್ನು ಬಣ್ಣಿಸಲು ಅಳವಲ್ಲ. ಮೈಯಲ್ಲಿ ನಡುಗು, ಮುಖದಲ್ಲಿ ದೈನ್ಯ, ನುಡಿಯಲ್ಲಿ ಕಂಪ, ನಡೆಯಲ್ಲಿ ಕಾತರ. ಇವನ ಇರಿತದ ಕಾಟವಿಲ್ಲದ ಸ್ಥಲವಿರಲಿಲ್ಲ, ಕಾಲವಿರಲಿಲ್ಲ. ಆದುದರಿಂದ ಚಣಚಣಕ್ಕೆ ಅದರ ಅಸ್ತಿತ್ವದ ಅರಿವು ಇವರಿಗೆ. ಸ್ವಾತಂತ್ರ್ಯವು ಅವರ ಅರಿಯದ ಮಾತಾಗಿದ್ದಿತು. ಪ್ರೀತಿಯು ಕಾವು, ದೊರೆಯುವ ಸರಕು. ಇಂಥ ಇಕ್ಕಟ್ಟಿನೊಳಗಿಂದ ತಮ್ಮನ್ನು ಬಿಡಿಸುವ ಕೈವಾರಿಯ ಬರವನ್ನೆಣಿಸಿ ಅವರು ಆತುರರಾಗಿ ಕಾಯುತ್ತಿದ್ದರು. ಬರಬಹುದೇ ಬೇಗ ನಮ್ಮನ್ನು ಬಿಡಿಸುವ ಬಂಟ? ಕಾಪಿಡುವ ಕಾರಣಿಕ ಪುರುಷ! ಸಂತೈಸುವ ವಸಂತರಾಯ! ಇದೆ ಎಲ್ಲರ ಬಲವಾದ ಬಯಕೆ.

**೫. ಉಪಸಂಹಾರ;— ಬಲಿತ ಬಯಕೆಯು ಫಲಿಸಲೇ ಬೇಕು.** ಇದು ವಿಧಾತನ ವಿಧಿ, ಕಟ್ಟಳೆ. ಇದಕ್ಕೆ ಅವರೇ ಅಪವಾದವಾಗುವುದೆಂತು? ಹಳೆಯದು ಹಾಳಾಗಿ ಹೊಸದು ಹೊಳೆಯಿತು.

## ೨. ವಿಜಯನಗರದ ವೈಭವ. (ಒಂದು ಕನಸು)

**೧. ಉಪಕ್ರಮ:—** ಛೇ! ಸ್ವಪ್ನಗಳು ಮುಗಿಯಲೇ ಮುಗಿಯವು.

ಎಚ್ಚರಗೊಂಡು ಸ್ವಲ್ಪಹೊತ್ತು ಯೋಚನೆ ಮಾಡೋಣವೆಂದು ಕುಳಿತರೆ ಕಣ್ಣು ತೆರೆದಿದ್ದ ಹಾಗೆಯೇ ಇನ್ನೊಂದು ಸ್ವಪ್ನ! ಈಗ ಅಂತಃಪುರವಿಲ್ಲ; ರಮಣಿಯರ ವಿಲಾಸವಿಲ್ಲ; ನಗುವಿಲ್ಲ.

೨. **ವಿಜಯದಶಮಿ ದಿಬ್ಬ**:— ಇಂದು ವಿಜಯ ದಶಮಿಯ ಸಂಭ್ರಮ. ಮೇಲ್ಗಡೆ ವಿಜಯದಶಮಿ ದಿಬ್ಬದಲ್ಲಿ, ಮಹಾರಾಜನ ಆಗಮನವನ್ನು ನಿರೀಕ್ಷಿಸುತ್ತ ಕಿಕ್ಕಿರಿದು ಪಿಸುಪಿಸು ಮಾತನಾಡುತ್ತಿರುವ ಮಾನವ ಮಹಾಸಾಗರದಲ್ಲಿನ ಅಲೆಮಾಲೆಗಳ ಗಜಿಬಿಜಿ. ನಡುನಡುವೆ ಅಧಿಕಾರ ದರ್ಪದಿಂದ ಉನ್ನತವಾದ ಉಚ್ಚಗಂಭೀರವಾದ '**ಸದ್ದು!**' ಎಂಬ ಕೂಗು. ಸ್ವಲ್ಪಹೊತ್ತು ಎಲ್ಲವೂ ನೀರವ. ಕರಿಯ ಕೆತ್ತನೆಗಳಿಂದ ಮಾಡಿನ ದಿಬ್ಬದ ಮೇಲಿನ ಸಭಾಮಂದಿರದಲ್ಲಿ ಒಂದು ಕೊನೆಯಲ್ಲಿ ಪೂರ್ವಾಭಿಮುಖವಾಗಿ ರಾಯನ ರತ್ನಸಿಂಹಾಸನ. ಸ್ವಲ್ಪ ಸರಿದು ಎಡಕ್ಕೆ ಬಲಕ್ಕೆ ಹಿಂದೆ ನಿಮ್ನಾಸನಗಳು. ಅಮೃತಶಿಲೆಯ ಕಾಲ್ಕಂಭಗಳಲ್ಲಿ ಕೆತ್ತನೆಯ ಗಜಸಿಂಹಗಳು. ಆನೆಗಳ ಎತ್ತಿದ ಸೊಂಡಿಲುಗಳಲ್ಲಿ ಮುತ್ತಿನ ಸರ, ಹೂವಿನ ಹಾರಗಳು. ರಾಯನ ಸಿಂಹಾಸನಕ್ಕೆ ಹೋಗುವ ದಾರಿಯುದ್ದಕ್ಕೆ ಪರ್ಷಿಯಾ ದೇಶದ ರತ್ನಗಂಬಳಿ. ಅದರ ಮೇಲೆ ಕೆಂಪು ಮೊಖಮಲ್ಲಿನ ನಿಡುಹಾಸು.

ಉತ್ತರಕ್ಷಣದಲ್ಲಿಯೆ ನೂರಾರು ವಾದ್ಯಗಳೂ, ಶಂಖಭೇರಿಗಳೂ ಮೊಳಗುವವು. ಲಕ್ಷಾಂತರ ಜನರ ಜಯಘೋಷ; ಹೊಗಳುಭಟರ ಬಿರುದಾವಳಿ ಪ್ರಶಂಸೆ. ವೈದಿಕರ ಮಂತ್ರಪೂತ ಸ್ವಾಗತವಚನ. ಪುನಃ ಎಲ್ಲವೂ ನಿಃಶಬ್ದ! ಈವರೆಗೆ ರಾಯನೂ, ಮಂತ್ರಿ ಪ್ರಧಾನರೂ ತಮ್ಮ ಆಸನಗಳ ಮೇಲೆ ಕುಳಿತುಕೊಳ್ಳುವರು. ಪಟ್ಟದ ಆನೆ, ಕುದುರೆ, ಹಸು, ಇವು ಮರ್ಯಾದೆಯಂತೆ ಮುಂದೆ ಬಂದು, ದೂರದಲ್ಲಿ ಬಾಗಿ ನಮಸ್ಕರಿಸುವವು. ಮಲ್ಲರ ದ್ವಂದ ಯುದ್ಧಗಳು ನಡೆಯುವವು. ಆ ಮೇಲೆ ಮೇಳತಾಳದಿಂದೊಡಗೂಡಿ ಪಲ್ಲಕ್ಕಿಯಲ್ಲಿ **ಚಂದ್ರಾಯುಧವು** ಬರುವುದು. ಪುರೋಹಿತರೂ, ಜಗುಲಿಯ ಮೇಲಿದ್ದ ಮುಖ್ಯ ಸಭಿಕರೂ ರಾಯನೂ ಎದ್ದು ನಿಲ್ಲುವರು. ವೈದಿಕರು ಮಂತ್ರೋಚ್ಚಾರಣೆ ಮಾಡುತ್ತಿರಲು, **ರಾಯನು** ಭಕ್ತಿಯಿಂದ ಅದಕ್ಕೆ ಪೂಜೆ ಮಾಡಿ, ಮೊಳಕಾಲೂರಿ ಅದನ್ನು ಎರಡೂ ಕೈಗಳಿಂದ ಎತ್ತಿ ಹಿಡಿದು, ಹಣೆಗೆ ಹಚ್ಚಿ, ತಲೆಯ ಮೇಲಿಟ್ಟುಕೊಂಡು ಎದ್ದುನಿಂತು, ಅದನ್ನು ಬಲಹಿಡಿಯಿಂದ ಮೇಲೆತ್ತಿ ಝಳಿಪಿಸುವನು. 'ಜಯ ಜಯ! ಮಹಾರಾಜ!'

‘ಜಯ ವಿಜಯನಗರಾಧೀಶ!!’ ‘ಜಯ ಶ್ರೀರಾಮರಾಜ!!!’ ಎಂಬ ಜನರ ಕೂಗು ... ....... ....... ...

**೩. ಒಂದು ಲೇಖವಾಚನ:**— ಇವೆಲ್ಲವೂ ಮುಗಿಯಲು, ಮಹಾರಾಜನು ಸನ್ನೆ ಮಾಡಲು, ಪ್ರಧಾನಿಯು ಮುಂದೆ ಬಂದು ನಿಂತು ಒಂದು ಲೇಖನವನ್ನೋದುವನು. ಈ ತೊಂಬತ್ತು ವರುಷದ ವಯಸ್ಸಿನಲ್ಲಿಯೂ ಸುಲಕ್ಷಣವಾಗಿ ಸುಕ್ಕುಗಟ್ಟಿಲ್ಲದೆ, ಗುಲಾಬಿಯ ರಂಗಿನಿಂದ ರಾಜಿಸುತ್ತಿದ್ದ **ರಾಮರಾಜನ** ಮುಖವು ಈಗ ವೀರ ಗಂಭೀರವಾಗಿದೆ. ಅದರ ಮೇಲೆ ತೆಳ್ಳನೆಯ ನೆಳಲು ಮುಸುಕಿದಂತಿದೆ. ಸ್ಥಿರಪ್ರತಿಜ್ಞೆಯ ಮುದ್ರೆಯಿದು ಎಂಬಂತಿರುವ ಆ ಪವಡಿಯ ನೋಟ. ಹುಬ್ಬುಗಳು ನಿಷ್ಠುರವಾಗಿವೆ; ಹುಬ್ಬುಗಳ ನಡುವೆ ಕುಂಕುಮ; ಕಣ್ಣುಗಳಿಂದ ಕಿಡಿ ಕಾರುವಂತಿದೆ. ನಿಮಿರಿ ನಿಂತಿರುವ ಶ್ಮಶ್ರು; ಅಂಬಿನ ಅಲಗಿನಂತೆ ನೇರವಾದ ಕಾಯಭಂಗಿ; ಉತ್ಸವ ಕಾಲವಾಗಿದ್ದರೂ, ಬಹುಮಟ್ಟಿಗೆ ರಣಸಜ್ಜವಾದ ವೇಷ; ಕಾಠಿನ್ಯದ ಕಠಿನತೆಯನ್ನೇ ಕೀಳು ಮಾಡುವಂತಿದ್ದ ಆ ಮುಖದ ಅಚ್ಚು; ಇವುಗಳನ್ನು ನೋಡಿದವರ ವಿಸ್ಮಯ!

ಇದೇನಿರಬಹುದೆಂದು ಒಬ್ಬರ ಮುಖವನ್ನೊಬ್ಬರು ನೋಡುವರು. ವಿಜಾಪುರದ ಸುಲ್ತಾನ ಆದಿಲ್‌ಶಹ ಬರೆಸಿರುವ ಕೆಚ್ಚಿನ ಘೋರಣೆಯ ಪತ್ರವನ್ನು ಪ್ರಧಾನಿ ಓದುತ್ತಿರುವನು. ಮಧ್ಯೆ-ಮಧ್ಯೆ ಮಹಾರಾಜನು ತನ್ನ ಕಣ್ಣಿನ ಜ್ವಾಲೆಯನ್ನು ಸೈನಿಕರತ್ತ ತಿರುಗಿಸಿ ಖಡ್ಗದ ಹಿಡಿಯನ್ನು ಪ್ರಬಲತರವಾದ ಮುಷ್ಟಿಯಿಂದ ಹಿಡಿ-ಹಿಡಿಯುವ ಆವೇಶವೃತ್ತಿ!........

**೪. ರಾಯನ ವೀರವಾಣಿ:**— ಪತ್ರಪಠನ ಮುಗಿಯಿತು. ಕೂಡಲೆ ಕ್ರುದ್ಧನಾದ ಮಹಾರಾಜನು ವಜ್ರಕಂಪಿತ ಸ್ವರದಿಂದ ‘ಕೇಳಿದಿರಾ! ಸರದಾರರೇ! ಪೌರರೇ! ಈ ವಾಕ್ಯಗಳನ್ನು! ವಿಜಯನಗರದ ದರ್ಪವೂ ಗೌರವವೂ ನಷ್ಟವಾಗಿ ಹೋಗಿರುವವೇನು? ನಮ್ಮ ತೋಳುಗಳಲ್ಲಿ ಬಲವಿಲ್ಲವೇನು? ಅಬ್ಬಾ! ಏನು ದುರಹಂಕಾರ! ಕಾಲ್ಕೆಳಗೆ ಹರಿದು ಹೋಗುವ ಹುಳಗಳು ಪ್ರಭುಕೇಸರಿಯನ್ನು ಧಿಕ್ಕರಿಸಿ ಮದೋನ್ಮತ್ತವಾಗಿರುವವೇ? ಆಗಲಿ, ಈ ಖಳಾಧಮರ ಸೊಕ್ಕು ಮುರಿಯಲು ರಾಮರಾಜನಿದ್ದಾನೆ! ವೀರಾಳುಗಳೇ! ಸೈನಿಕರೇ! ನಿಮ್ಮ ಪ್ರೇಮವನ್ನು ಇಂದು ರಣರಂಗದಲ್ಲಿ ತೋರಿಸಬೇಕಾಗುವುದು!........ ಪ್ರಜೆಗಳೇ! ನಿಮ್ಮ ಅಬಲೆಯರಾದ ಸುತಾ-ಸತಿಯರ ಮಾನಕ್ಕೂ,

ಧರ್ಮಕ್ಕೂ, ನಿಮ್ಮ ರಾಷ್ಟ್ರಕೀರ್ತಿಯ ಸ್ಥೈರ್ಯಕ್ಕೂ ಬದ್ಧ ವೈರಿಗಳವರು! ಕೆಣಕಿ ಬಂದಿರುವರು! ಇವರ ಸೊಕ್ಕನ್ನು ಈಗಲೇ ಮುರಿಯಬೇಕು' ಎನ್ನು ತ್ತಿರುವ ಆವೇಶದಿಂದೆದ್ದು ಸೈನಿಕರೆಲ್ಲರೂ ಖಡ್ಗಗಳನ್ನು ಒರೆಯಿಂದ ಹಿರಿದು ಮಹಾರಾಜನ ಪಾದದತ್ತ ನಿರ್ದೇಶಿಸಿ ತಲೆ ಬಾಗುತ್ತಾರೆ.

೫. **ಕೊನೆಯ ಪ್ರತಿಜ್ಞೆ** :— ಪ್ರಜೆಗಳಲ್ಲಿ ಯುವಕವೃದ್ಧರೆಲ್ಲರೂ ಏಕಕಂಠರಾಗಿ 'ನಾವೆಂದಿಗೂ ಹೇಡಿಗಳಾಗೆವು! ಮಹಾಸ್ವಾಮಿ! ಧಮನಿ ಯಲ್ಲಿ ಒಂದು ತೊಟ್ಟು ರಕ್ತ ಉಳಿದಿರುವವರೆಗೂ, ದೇಹದಲ್ಲಿ ಕಡೆಯ ಉಸಿರು ಇರುವವರೆಗೂ, ತಮ್ಮ ಅನುಗಾಮಿಗಳಾಗಿದ್ದು ಜಯಸಾಧಿಸುವೆವು' ಎನ್ನು ತ್ತಿರುವಾಗಲೆ ಸಭೆಯು ಮುಗಿಯಿತು—ಎಚ್ಚರವಾಯಿತು.

ವಿ. ಸೀ.

### ೩. ರೂಪಾಯಿಯ ಆತ್ಮಕಥನ.

ನಾನು ಚಿಕ್ಕಮಕ್ಕಳ ಚಕ್ಕಂದದ ಆಟದ ಒಡನೆಯು. ನಾನು ಹರಯದ ಹುಡುಗರ ಮುದದ ಮೂರ್ತಿಯು. ನಾನು ಮುಪ್ಪಿನವರ ಮುಪ್ಪಿನ ಕಾಲದ ಕೈಗೋಲು; ಆಶ್ರಯದಾತನು, **ನಾನು ರೂಪಾಯಿ!**

ಮನುಷ್ಯನು ನನ್ನ ದಾಸಾನುದಾಸನು. ನಾನು ಅವನನ್ನು ಸಾವಿ ರಾರು ಸಲ ಕುಣಿಸಬಲ್ಲೆನು, ಕುಣಿಸಿದ್ದೇನೆ. ಪ್ರಪಂಚವು ನನ್ನಿಂದ ಪಾದಾ ಕ್ರಾಂತ ಮಾಡಲಾಗಿದೆ. ನಾನು ಅದನ್ನು ಬುಡಮೇಲು ಮಾಡಬಲ್ಲೆ, ಮಾಡಿ ದ್ದೇನೆ—ಮಾಡುತ್ತಿದ್ದೇನೆ. ಪ್ರಕೃತಿಯು ನನ್ನ ವಶದಲ್ಲಿರುವಳು. ನಾನು ಅವ ಳನ್ನು ಸೃಜಿಸಬಲ್ಲೆ, ಕೆಡಿಸಬಲ್ಲೆ, ಮಣಿಸಬಲ್ಲೆ; **ನಾನು ರೂಪಾಯಿ!**

ನನ್ನ ಝುಂಕಾರದಲ್ಲಿರುವ ಅಲೌಕಿಕವಾದ ಇಂಪು ವೀಣಾಪಾಣಿಯ ಆ ವೀಣೆಯಲ್ಲಿ ಇದೆಯೇ? ಭಗವಾನ್ ಲಕ್ಷ್ಮೀಪತಿಯ ಪಾಂಚಜನ್ಯಶಂಖ ದಲ್ಲಿ ಇದೆಯೆ? ಮುರಲೀಧರನ ಮುರಲಿಯಲ್ಲಿ ಇದೆಯೆ? ಕೈಲಾಸಪತಿಯ ಡಮರುವಿನಲ್ಲಿ ಇದೆಯೆ? ಕಾಮಿನಿಯರ ಕೋಮಲ ಕಂಠಗಳಲ್ಲಿ ಇದೆಯೆ? ಅಲ್ಲಿ ಇದೆಯೆ? ಇಲ್ಲಿ ಇದೆಯೆ? ನಾನು ಸಪ್ತಸ್ವರಗಳಿಗಿಂತ ಮೇಲಿನವನು; ಅಷ್ಟಮಸ್ವರನು; ಅತ್ಯಂತ ಮಧುರನು; **ನಾನು ರೂಪಾಯಿ!**

ದೇವರು ಮಾತಾಡುವದಿಲ್ಲ. ನಾನು ಮಾತಾಡುತ್ತೇನೆ. ಅವನಿ ಗಿಂತ ನಾನು ದೊಡ್ಡವನು. ದೇವರು ನಡೆಯುವದಿಲ್ಲ. ನಾನು ನಡೆಯು ತ್ತೇನೆ. ನನ್ನಲ್ಲಿರುವ ತೇಜಸ್ಸು, ಶಕ್ತಿ ಪರಮಾತ್ಮನಲ್ಲಿಲ್ಲ. ಈ ಯುಗವು

ಭೌತಿಕ ಯುಗವು. ತರ್ಕದ ಯುಗವು. ನಾನು ಪ್ರತ್ಯಕ್ಷನು ; ಫಲವನ್ನು ಕೊಡತಕ್ಕವನು; ಸ್ವಯಂಪ್ರಭುವು; ಆಕರ್ಷಕನು; ಈಶ್ವರನು; ಈಶ್ವರನಿಗಿಂತಲೂ ದೊಡ್ಡವನು. **ನಾನು ರೂಪಾಯಿ.**

ನನ್ನಿಂದ ವರವನ್ನು ಬೇಡಿಕೊಂಡು ಪಾಪವನ್ನು ಮಾಡಿರಿ, ಎಂದರೆ ದೇವತೆಗಳಿಂದ ಪೂಜಿಸಲ್ಪಡುವಿರಿ. ನನ್ನಿಂದ ವರವನ್ನು ಪಡೆದುಕೊಂಡು ಹತ್ತೆಂಟು ಕೊಲೆ ಮಾಡಿರಿ; ಉಳಿದುಕೊಳ್ಳುವಿರಿ. ಸಾಮ್ರಾಜ್ಯದೊಡನೆ ಸಾಮ್ರಾಜ್ಯವನ್ನು ಕಾದಾಡಿಸಿರಿ. ಮನುಷ್ಯತ್ವದ ಬೆಳೆದ ಬೆಳೆಯನ್ನು ನಿರ್ದಯತನದಿಂದ ಕೊಯ್ಸಿಬಿಡಿರಿ. ಸ್ತ್ರೀಯರ ಮರ್ಯಾದೆಯನ್ನು ಕಾಸೆರಡು ಕಾಸಿಗೆ ಒಂದು ಸೇರಿನಂತೆ, ದಿನದಲ್ಲಿ ಹತ್ತು ಸಾರೆ ಕೊಳ್ಳಿರಿ, ಹತ್ತು ಸಾರೆ ಮಾರಿರಿ. ಜಗತ್ತನ್ನು ವಿಧವೆಯರ, ಚಿಕ್ಕಮಕ್ಕಳ, ಮುದುಕರ, ಅಂಗಹೀನರ ಹಾಹಾಕಾರದಿಂದ ತುಂಬಿಬಿಡಿರಿ. ಭೂಕಂಪನವನ್ನೂ ಪ್ರಳಯವನ್ನೂ ನಡೆಸಿರಿ. ಏನು ಬೇಕಾದ್ದನ್ನು ಮಾಡಿರಿ. ನಾನು ಸರ್ವಶಕ್ತಿ, ಸರ್ವಮುಕ್ತಿ. **ನಾನು ರೂಪಾಯಿ.**

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ !

ಶ್ರೀ. ದೇ. ಪಾ. ರವರಿಂದ
ಅನುವಾದಿತ.

## ೪. ನಾನು ಅರಸನಿದ್ದರೆ—

೧. **ಉಪಕ್ರಮ**:— ಶತಾನುಶತಕಗಳಾದವು. ನಮ್ಮ ಅರಸರು ನಿರಂಕುಶರಾಗಿ ಆಳುತ್ತ ಬಂದಿರುವರು. ಆದರೆ ಈಗ ಕಾಲಚಕ್ರವು ತಿರುಗಿದೆ, ಅರಸರು ಕಣ್ಣು ತೆರೆದು ನೋಡುವ ಪ್ರಸಂಗವೊದಗಿದೆ. ಈ ದಿನಗಳಲ್ಲಿ ನಾನೊಬ್ಬ ಅರಸನಿದ್ದರೆ—

೨. **ಅಂತರ್ನಿರೀಕ್ಷಣ**:— ಮೊದಲು ನಾನು ಆತ್ಮನಿರೀಕ್ಷಣೆಮಾಡಿಕೊಳ್ಳುತ್ತಿದ್ದೆನು; ಆಗ ಅದಾವ ನೋಟವು ನನ್ನ ಒಳಗಣ್ಣಿನೆದುರು ನಿಲ್ಲುವುದು? 'ಇದೇನು? ಇಷ್ಟು ದಿನ ಪ್ರಜೆಗಳಲ್ಲಿ ಅದೆಷ್ಟೊಂದು ನನ್ನ ಬಗ್ಗೆ ಪ್ರೀತಿ! ಎಷ್ಟೊಂದು ವಿನಯ! ಎಷ್ಟೊಂದು ಅಭಿಮಾನ! ಆದರೆ ಕಾಲವು ಬದಲಾಯಿತು. ರಾಜಯುಗವು ಅಳಿದು ಪ್ರಜಾಯುಗವು ಪ್ರಾಪ್ತವಾಯಿತು. ಪ್ರಜೆಗಳ ದೃಷ್ಟಿಯಲ್ಲಿಯೂ ಬದಲಾಯಿತು. ಈಗ ನಾನೊಬ್ಬ ಸ್ವಾರ್ಥದ ತವರುಮನೆ, ವಿಷಯಲೋಲುಪತೆಯ ಪುತ್ಥಳಿ ಅವರಿಗೆ. ಪ್ರಜೆಗಳು ಹೀಗೆ

ಏರಿ ನಡೆಯುವದನ್ನು ನೋಡಿದರೆ ನನಗೆ ಒಮ್ಮೊಮ್ಮೆ ಬಹಳ ಸಿಟ್ಟು ಬರುವದು. ಇವರನ್ನು ಗುಂಡಿನೇಟಿನಿಂದ ನಡುಗಿಸಿ ಬಿಡಲೋ. ಎಂದು ಒಮ್ಮೆ ಎನಿಸುವದು. ಮರುಕ್ಷಣದಲ್ಲಿ ಮತ್ತೆ ಬೇಡವೆನಿಸುವದು.

**೩. ಎದೆಯ ಕೋಲಾಹಲ** :— ಹೀಗೆ ವಿಚಾರ ಮಾಡಿ ಮಾಡಿ ದಣಿದು ನಿದ್ರೆ ಬರುವದು. ಆದರೂ ಪ್ರಜೆಗಳ ಕೋಲಾಹಲವು ದೂರಿನಿಂದ ಕೇಳಬಂದಂತೆ ಭಾಸವಾಗುವದು. ತಲೆದಿಂಬಿನಲ್ಲಿ ಏನೋ ಚುಚ್ಚಿದಂತಾಗಿ ರಾತ್ರಿ ಎಚ್ಚರವಾಗುವದು. ನನ್ನ ಪ್ರಜೆಗಳಿಗೆ ಮಲಗಲು ಒಂದುಹರಕು ಚಾಪೆ ಯಾವದರೂ ಸಿಕ್ಕುವದೋ ಎಂಬ ವಿಚಾರವು ಇರುಳು ತುಂಬ ಕಾಡುವುದು. ಉಣ್ಣುವಾಗ ತುತ್ತು ಕುತ್ತಿಗೆಯಲ್ಲಿ ಸಿಕ್ಕಂತಾಗಿ ಬಿಕ್ಕು ಬರುವದು. ನನ್ನ ಪ್ರಜೆಗಳಿಗೆ ಒಣ ರೊಟ್ಟಿಯಾದರೂ ಸಿಕ್ಕುವದೋ? ಎಣ್ಣೆ ಬೆಣ್ಣೆ ಒಣಗೆಯಿಲ್ಲದೆ ಆ ರೊಟ್ಟಿಯು ಕುತ್ತಿಗೆಯಲ್ಲಿ ಹೀಗೆಯೇ ಸಿಕ್ಕಲಿಲ್ಲವೇ? ಎಂದೆನಿಸುವುದು. ಚಿತ್ರವಿಚಿತ್ರವಾದ ಬಣ್ಣದ ದೀಪಗಳನ್ನು ಹಚ್ಚಿಕೊಂಡು ವಿಲಾಸಮಹಲಿನಲ್ಲಿರುವಾಗ, ತಮ್ಮ ಹರಕು ಗುಡಿಸಲಲ್ಲಿ ಹಚ್ಚಲು ಒಂದು ಮಿಣಿ ಮಿಣಿ ದೀಪವಾದರೂ ನನ್ನ ಪ್ರಜೆಗಳಿಗೆ ಸಿಕ್ಕುವದೋ ಎಂಬ ವಿಚಾರವು ಹೊಳೆದೊಡನೆ ಒಮ್ಮೆಲೆ ಕಣ್ಣಿಗೆ ಕತ್ತಲೆಕಟ್ಟಿದಂತಾಗುವದು.

ಈ ರೀತಿ ಒಂದಲ್ಲ, ಎರಡಲ್ಲ, ಬೇಕಾದಷ್ಟು ಅನುಕೂಲತೆಗಳಿದ್ದರೂ ನನ್ನ ಬಾಳು ಹಾಳಾದಂತೆ ನನಗೆ ಭಾಸವಾಗತೊಡಗಿತು. ಇನ್ನು ಜೀವನದಲ್ಲಿ ಹುರುಳಿಲ್ಲ ಹರ್ಷವಿಲ್ಲ ಎಂದೆನಿಸಿತು. ಏನು ಮಾಡಬೇಕು? ಹರ್ಷವಿಲ್ಲದ ಜೀವ, ವಾಸನೆಯಿಲ್ಲದ ಹೂವು, ರಸವಿಲ್ಲದ ಕಾವ್ಯ ಇವು ತಿಪ್ಪಿಗೆ ಒಗೆಯತಕ್ಕವು. ಹಾಗೆ **ಪ್ರಜೆಗಳ ರಂಜನೆ ಇಲ್ಲದ ರಾಜನು ತ್ಯಾಜ್ಯನು,** ಕಸಕಡ್ಡಿಗಿಂತ ಕಡೆಯವನು.

**೪. ಕ್ರಾಂತಿ** :— ಹೀಗಿರುವಾಗ ಒಂದು ದಿನ ಕನೋಜದ ಅರಸನಾದ ಸಾಮ್ರಾಟ ವಿಷ್ಣುವರ್ಧನನ ಕಥೆಯೋದಿ ಮನಸ್ಸಿಗೆ ಆಲ್ಹಾದವೆನಿಸಿತು. ಅವನು ಐದು ವರ್ಷಕ್ಕೊಮ್ಮೆ ತನ್ನ ಬೊಕ್ಕಸವನ್ನೆಲ್ಲ ಖಾಲಿಮಾಡಿ ಎಲ್ಲ ಧನವನ್ನು ಪ್ರಜೆಗಳಿಗೆ ಹಂಚಿಬಿಡುತ್ತಿದ್ದನಂತೆ! ನಾನೂ ಒಬ್ಬ ಅರಸನು. ಇದು ನನ್ನ ಸೊತ್ತೆಂದು ತಿಳಿದು, ಇಷ್ಟು ದಿನ ಕಷ್ಟಪಟ್ಟೆನು. ಇದು ಪ್ರಜೆಗಳದು; ಅವರದು ಅವರಿಗೆ ಒಪ್ಪಿಸಲು ನನಗೆ ಇಷ್ಟೇಕೆ ಸಂಕಟ? ಆಯ್ತು! ಮನಸ್ಸಿನ ನಿರ್ಧಾರವಾಯಿತು.

೫. **ನವಜನ್ಮ:** — ಮಾರನೆ ದಿನವೆ ದಸರೆಯಿತ್ತು. ಅಂದು ದೊಡ್ಡ ದರ್ಬಾರವಾಗುವದೆಂದು ಸಂಸ್ಥಾನದ ಮೂಲೆ ಮೂಲೆಗಳಲ್ಲಿ ಸಾರಿದೆನು. ನಾನು ಆ ದಿನ ಏನು ಮಾಡುವೆನೆಂಬುದು ಯಾರಿಗೂ ತಿಳಿದಿರಲಿಲ್ಲ. ವಾಡಿಕೆಯಂತೆ ನನ್ನ ಸಿಂಗರಿಸಿದ ಮೋಟಾರಿನಲ್ಲಿ ನಾನು ಬರುವೆನೆಂದು ಎಲ್ಲರೂ ತಿಳಿದಿದ್ದರು. ಆದರೆ ನಾನೊಂದು ಬಂಡಿಯಲ್ಲಿ ಕುಳಿತು ಬಂದೆನು. ಮುತ್ತುರತ್ನಗಳ ಮುಂಡಾಸನವನ್ನೂ ಪಚ್ಚಪದಕಗಳ ಮಾಲೆಯನ್ನೂ ಧರಿಸದೆ, ಶುದ್ಧ ಖಾದಿವಸ್ತ್ರವನ್ನು ಧರಿಸಿ, ನಾನು ಸಭಾಸ್ಥಾನಕ್ಕೆ ಬಂದೆನು. ಸಭಿಕರೆಲ್ಲ ಸ್ತಿಮಿತರಾದರು. ಹಲವರು ನನಗೆ ಹುಚ್ಚು ಹಿಡಿಯಿತೆಂದರು. 'ನಾನು ನಿಮ್ಮನ್ನಾಳಲು ಅಯೋಗ್ಯನು. ಇದೆಲ್ಲ ನಿಮ್ಮದು. ಈಗಿದನ್ನು ನಿಮಗೆ ಒಪ್ಪಿಸುವೆನು' ಎಂದು ಸಿಂಹಾಸನದಿಂದಿಳಿದು ಪ್ರಜೆಗಳೆದುರಿಗೆ ಕೈಜೋಡಿಸಿ ನಿಂತೆನು.

**ಆ ದಿನ ನನ್ನ ಅರಸೊತ್ತಿಗೆಯು ತಿರುಗಿ ಬಂದಿತು.** ಅಂದಿನಿಂದ ನಾನು ನಿಜವಾದ ರಾಜನಾದೆನು, ಪ್ರಜೆಗಳೆಲ್ಲರೂ ತಮ್ಮ ಪ್ರತಿನಿಧಿಗಳನ್ನಾರಿಸಿ ನನ್ನನ್ನು ಮುಖ್ಯ ಪ್ರತಿನಿಧಿಯನ್ನಾಗಿ ಮಾಡಿದರು. ಅಂದಿನಿಂದ **ಪ್ರಜಾಪಾಲಿತನೆಂಬ** ಬಿರುದು ನನಗೆ ಕೊಡಲಾಯಿತು.

೬. **ಉಪಸಂಹಾರ:** — ಕಾಲಚಕ್ರಕ್ಕೆ ತಲೆಬಾಗಿ ಸತ್ಯಪಕ್ಷವನ್ನು ಹಿಡಿದು ನಡೆಯುವುದೇ ವಿಹಿತವಲ್ಲವೇ?

—ರಂಗರಾವ ದಿವಾಕರ.

## ೫. ಮತ್ಸರ-ಮಾರಿ

೧. **ಉಪಕ್ರಮ** :—'ಬುದ್ಧಿಬಲ-ಶೀಲಬಲ-ಆತ್ಮಬಲಗಳಂಥ ಅದ್ಭುತ ಶಕ್ತಿಯಿಂದ ಯುಕ್ತವಾದ ನಮ್ಮ ಭಾರತವು ಹಾಳಾದುದು ಎಂತೆಂಬುದನ್ನು ಬಲ್ಲಿರಾ? ಮತ್ಸರ-ಮತ್ಸರ-ಮತ್ಸರ! ಇದೇ ನನ್ನ ಮಾರುತ್ತರವದಕ್ಕೆ. ಇಲ್ಲಿ ನಾಲ್ಕು ಜನ ಕೂಡಿ ಕೆಲಸಮಾಡುವುದು, ಒಂದರಗಳಿಗೆಯೂ ಸಾಧ್ಯವಿಲ್ಲ. ಪ್ರತಿಯೊಬ್ಬನು ಹೆಣಗುವುದು ಮರ್ಯಾದೆಗಾಗಿ-ಮನ್ನಣೆಗಾಗಿ. ಕೊನೆಗೆ ಅವರಲ್ಲಿಯೆ ಗುಂಪಿನ ಕೊನೆ. ಹರ! ಹರ! ಈ ಅಸೂಯೆಯನ್ನಲ್ಲಗಳೆಯಲು ನಾವಿನ್ನೆಂದು ಕಲಿಯುವುದು!' ಎಂದು ಕೂಗಿತು ವೀರ ವಿವೇಕಾನಂದರ ಕರುಳಿನ ಕಳವಳ.

೨. **ನವದೃಷ್ಟಿ** : — ಮತ್ಸರ ಮಾರಿಯ ಈ ಭೀಕರ ಚಿತ್ರವು ನಮ್ಮನ್ನಿನ್ನೂ ಹೆದರಿಸುವದಿಲ್ಲವೆ! ನಮ್ಮೆದೆಯನ್ನು ನಡುಗಿಸುವದಿಲ್ಲವೇ! ಅದಾಗದಿ

ಧ್ವರಿ ಈ ಅಸೂಯಾ ನಾಗಿಣಿಯು ಇತಿಹಾಸಕಾಲದಲ್ಲಿ ನಮ್ಮ ನಾಡಿನ ಬೇರೆ ಬೇರೆ ಕ್ಷೇತ್ರಗಳಲ್ಲಿ ಮಾಡಿದ ಮಹಾಪ್ರಳಯವನ್ನು ಇನ್ನೊಮ್ಮೆ ನೋಡುವದು ಚಿತ! ಅದಕ್ಕೆ ಒಂದು ನವದೃಷ್ಟಿ ಬೇಕು—ನವಶಕ್ತಿ ಬೇಕು. ಕಲ್ಪನೆಯ ರೆಕ್ಕೆಗಳನ್ನೇರಿ ಈ ಇತಿಹಾಸಕಾಲದಲ್ಲಿ ಸೇರಿ, ಈ ನವ ವಿಹಂಗಮ ದೃಷ್ಟಿಯನ್ನು ಅಲ್ಲಲ್ಲಿ ಚೆಲ್ಲಿದರೆ ನಮಗೆ ಅದಾವ ದೃಶ್ಯವು ಕಾಣುವದು?

೩. **ರಾಜಕೀಯ ಕ್ಷೇತ್ರ**:— ದುರಾಗ್ರಹದ ತೆರೆಯನ್ನು ಸರಿಸಿ ಇನ್ನು ನೋಡಿರಿ, ನೋಡೋಣ! ಏನು ಕಾಣುವದು ನಮಗಿಲ್ಲಿ! ಮತ್ಸರದ ಪಿಶಾಚಿಯ ಪ್ರಭಾವದಿಂದ ಹುಚ್ಚೆದ್ದು ಕುಣಿದ ಕೈಕೇಯಿಯ ತುಳಿತಕ್ಕೆ ನುಗ್ಗುನುಸಿಯಾದ ದಶರಥ–ರಾಮರ ಜೀವನ ಚಿತ್ರವನ್ನೂ ಶಕುನಿ ಮಾವನ ಹಾವು ಕಚ್ಚಿ ದುರ್ಯೋಧನನಾದ ಸುಯೋಧನನ ಕಿಚ್ಚಿನ ಕಾಡಿನಲ್ಲಿ ಬಾಡುತ್ತಿರುವ ಪಾಂಡವರ ಜೀವನ ಚಿತ್ರವನ್ನೂ, ಪುರಾಣದ ಕಟ್ಟುಕತೆಯೆಂದು ಇವನ್ನು ನಂಬದಿರಿ ಬೇಕಾದರೆ. ಸಾಗಿರಿ! ಮುಂದಕ್ಕೆ ನಡೆಯಿರಿ! ಹುಲಿಯಂತೆ ಹಾರಿ ಹರುಷನನ್ನಿರಿದ ವೀರಪುಲಕೇಶಿಯು ಹಾಳಾದುದೇತರಿಂದ? ಪೃಥ್ವಿಯನ್ನೆಯೆ ಆಳುವ ಬಲವುಳ್ಳ ಪೃಥ್ವಿರಾಜನು ಕಣ್ಣು ಕಳಕೊಂಡು ಮಣ್ಣುಮುಕ್ಕಿದುದೇತಕ್ಕೆ? ತನ್ನ ಪ್ರತಾಪದಿಂದ ಹಗೆಗಳನ್ನೆಲ್ಲ ಹುರಿಯಬಲ್ಲ ಪ್ರತಾಪನು ಹತಪ್ರಭನಾಗಲು ಕಾರಣವೇನು? ತನ್ನ ತೀಕ್ಷ್ಣ ಕತ್ತಿಯ ಇರಿತದಿಂದ ತುರುಕರಿಗೆ ಧಾರಾತೀರ್ಥವನ್ನು ಕುಡಿಸಲು ಹೊರಟ ಭಾವೂರಾಯನ ಬಾಹುಗಳಿಗೆ ಸೋಲು ದೊರೆತುದೇಕೆ? ಛತ್ರಪತಿಯ ಛತ್ರವನ್ನು ಅತಂತ್ರಮಾಡಿದವರಾರು? ಇಷ್ಟು ದೂರವೇತಕ್ಕೆ! ನಮ್ಮ ನರಗುಂದದ ನರವೀರರು ಹೆರವರ ತೋಫಿಗೆ ತುತ್ತಾದುದೇತಕ್ಕೆ?

ಏನು! ಈ ಭೀಕರ ಚಿತ್ರವನ್ನು ಕೆಂಬಣ್ಣದಿಂದ ಬರೆದ ಪ್ರಚಂಡ ಕೈಯ್ಯು ಇನ್ನೂ ಕಾಣದೋ ನಿಮಗೆ? ಹಾಗಾದರೆ ಇನ್ನೊಂದು ಕ್ಷೇತ್ರದ ಎಡೆಗೆ ಸಾಗಿರಿ!

೪. **ಧರ್ಮಕ್ಷೇತ್ರ**:— ಇಲ್ಲಿಯ ಇತಿಹಾಸವು ಕಾಗದವನ್ನಾಶ್ರಯಿಸದ ಮೂಲಕ ಮರವಿನ ತೆರೆಯ ಮರೆಯಲ್ಲಿ ಅಡಗಿಕೊಂಡಿದೆ. ಆದರೂ ಸತ್ಪುರುಷರ ಉದ್ಗಾರಗಳು ಕೆಲವು ಸಂಗತಿಗಳನ್ನು ಸೂಚಿಸುವವು. ಅವು ಹೇಳುವದೇನನ್ನು?

ಸುಮಾರಾಗಿ ಎಲ್ಲ ಸತ್ಪುರುಷರ ಹಿಂದೆ ಈ ಕುತ್ಸಿತ ಕುನ್ನಿಗಳ ದಂಡನ್ನು

ಬಿಡಲು ನಮ್ಮ ಮತ್ಸರಿಗಳಾರೂ ಮರೆತಿಲ್ಲ. ಅವರಿಗಿತ್ತು ಭಗವಂತನ ಬಲವುಳ್ಳ ಭುಜಗಳ ನೆರವು. ಆದುದರಿಂದ ಅವರಿಗೆ ಈ ಕುನ್ನಿಗಳ ಅರಿವೆ ಇರಲಿಲ್ಲ. ಆದುದರಿಂದ "ಆನೆಯನ್ನೇರಿದನ ಸೋನ ತಾ ಕಚ್ಚುವುದೇ?" ಎಂದರೊಬ್ಬರು. "ಮತ್ಸರಿಸಿದರೇನು ಮಾಡಲಾಪರು ಎನ್ನ, ಅಚ್ಯುತ ನಿನ್ನಯ ಕೃಪೆಯಿರಲು! ಕಿಚ್ಚಿಗೆ ಇರುವೆ ಮುತ್ತುವವೇ?" ಎಂದು ಕೇಳಿದರಿನ್ನೊಬ್ಬರು. ಆ ಮಹನೀಯರು. ಇವರನ್ನುಪೇಕ್ಷಿಸಿದ ಮಾತ್ರಕ್ಕೆ ಅವರ ಕಾಟದ ಕ್ರೌರ್ಯವೇನೂ ಕಡಿಮೆಯಾಗುವುದಿಲ್ಲ!

೫. **ಸಾಹಿತ್ಯಕ್ಷೇತ್ರ:**—ನಮ್ಮ ಸಾಹಿತಿಗಳು ಇವಳ ಮುದ್ದುಮಕ್ಕಳಿದ್ದಂತೆ ತೋರುವುದು. ಇವರ ಪಂಗಡದಲ್ಲಿ ಇವಳ ಸುಳಿದಾಟದಿಂದೆದ್ದ ಕೋಲಾಹಲವು ಆಗಾಗ ಕೇಳಬರುವುದಿಲ್ಲವೆ? ಕವಿಕುಲಗುರುವು ಏನನ್ನುವನು ಕೇಳಿ! "ಹಳೆಯದೆಲ್ಲ ಹೊನ್ನಲ್ಲ; ಹೊಸದೆಲ್ಲ ಕಸವಲ್ಲ! ಸಜ್ಜನರು ಪರಿಕಿಸಿ-ಬೆಲೆಯರಿತು ಸ್ವೀಕರಿಸುವರು. ಹೆರರ ಹೇಳಿಕೆಗೆ ಗೋಣನ್ನಲ್ಲಾಡಿಸುವುದು ಕೋಣ ಕೆಲಸ!" ಭವಭೂತಿಯು ಈ ಮಾರಿಯ ಮರಿಗಳನ್ನು ಒಳಿತಾಗಿ ಥಳಿಸಿರುವ. "ಎಲೇ! ಸುಮ್ಮನೆ ಏಕೆ ಬೊಗಳುವಿರಿ! ನಿಮಗಾಗಿ ನಾನು ಬರೆದಿಲ್ಲ! ಕಾಲವು ಅನಂತವಿದೆ; ಇಳೆಯು ವಿಶಾಲವಿದೆ. ಬರಬಹುದಾರಾದರೂ ನನ್ನ ಕೃತಿಯ ಬೆಲೆಯನ್ನರಿಯುವ ಬಂಟ! ಅವನಿಗಾಗಿ ನಾನು ಬರೆದುದು. ನಿಮಗಾಗಿ ಅಲ್ಲ! ನಡೆಯಿರಿ!" ಎಂದು ಗದರಿಸಿದನಾ ಕವಿಪುಂಗವನು. "ಮಯ್ಯ ಬತ್ತಲೆ ಮಾಡಿ, ಮನವ ಕತ್ತಲೆ ಮಾಡಿ, ಹುಯ್ಯಲಿಡುವ" ಇಂಥ ತಂಡಗಳನ್ನು ಅಲ್ಲಗಳೆದಿಲ್ಲವೇ ನಮ್ಮ ರತ್ನಾಕರ?

ಅಂದಿನ ಈ ಹಾಡು, ಇಂದಿಗೂ ತಡೆಯಿಲ್ಲದೆ ನಡೆದುದನ್ನು ಕಾಣುವುದಿಲ್ಲವೇ ನಾವು?

೬. **ಉಪಸಂಹಾರ:**— ಇದೇ ನಮ್ಮನ್ನು—ನಮ್ಮ ನಾಡು—ನುಡಿಗಳನ್ನು ಹಾಳು ಮಾಡಿದೆ—ಇನ್ನೂ ಹಾಳುಮಾಡಲಿದೆ. ಇದನ್ನೆಲ್ಲ ಕಣ್ಣಾರೆ ಕಂಡು, ಮನವಾರೆ ಉಂಡು, ಮರಳಿ ಈ ಮಾರಿಯ ಕಿಚ್ಚನ್ನೆಯೆ ಅಪ್ಪಿಕೊಳ್ಳಬೇಕೆ ನಾವು? ಪ್ರೇಮಜಲದಿಂದ ಕೂಡಲೆ ಅದನ್ನು ನೊಂದಿಸಬೇಕಲ್ಲವೇ?

—ಚಿಚ್ಚಕೋರ

ಅಭ್ಯಾಸ ೧೩.

ಮುಂದಿನ ವಿಷಯಗಳನ್ನು ಕುರಿತು ನಿಬಂಧಗಳನ್ನು ಬರೆಯಿರಿ—

೧ ವಸಂತರಾಯನ ಆಗಮನ. ಕುರುಡು ಕಾಂಚಾಣದ ಕುಣಿತ. ಚಿಂತೆಯ ಸಂತೆ. ೨ ಇಂದಿನ ಕನ್ನಡಿಗರ ಸವಿಗನಸು. ಬಾಲವಿಧವೆಯ ಕನಸು. ನಿರ್ಗತಿಕ ತರುಣರ ಕನಸು. ೩ ಕತ್ತೆಯ ಆತ್ಮವೃತ್ತಾಂತ. ಗೋವಿನ ಜನ್ಮಕಥೆ. ಹೋಸೆಯ ಆತ್ಮವೃತ್ತ. ೪ ನಾನು ಶಿಕ್ಷಣಮಂತ್ರಿಯಾದರೆ, ನಾನು ಕನ್ನಡ ವೀರನಾದರೆ, ನಾನು ಕವಿಯಾದರೆ—

# ೭. ಬರಹಕ್ಕೆ ನೆರವು

## ಕೆಲ ವಿಷಯಗಳ ವಿಚಾರಾಂಶಗಳು

ನಿಬಂಧಗಳನ್ನು ಇದೇ ರೀತಿಯ ಹೊರತು ಬಾಲಕರಿಗೆ ನೆರವಾಗ ಬೇಕೆಂದು ಬಯಸಿ, ಕೆಳಗೆ ಕಾಣಿಸಿದ ಕೆಲ ವಿಷಯಗಳ ವಿಚಾರಾಂಶಗಳನ್ನು ಕೊಟ್ಟಿರುವೆವು. ಆದರೆ ಇವನ್ನುಪಯೋಗಿಸುವ ಪೂರ್ವದಲ್ಲಿ, ಅವರು ತಮ್ಮ ವಿಚಾರಾಂಶಗಳನ್ನು ಬರೆದಿಡಬೇಕು. ಅವನ್ನು ಇವುಗಳೊಡನೆ ಸರಿಹೋಲಿಸಿ ತಿದ್ದಿಕೊಳ್ಳಬೇಕು. ತರುವಾಯ ನಿಬಂಧ ಬರೆಯಲು ಪ್ರಾರಂಭಿಸಬೇಕು. ಅಂದರೆ ಇವುಗಳ ಉಪಯೋಗವು ಚೆನ್ನಾಗಿ ಆಗಬಹುದು.

### (೧) ನನ್ನ ಬೇಸಿಗೆಯ ಬಿಡುವು.

**೧. ಉಪಕ್ರಮ:—** ಬಿಡುವಿನ ಮಹತ್ವ. ಅದರಿಂದಾಗುವ ಸಂತೋಷ—'ಎಂಥ ಆಲ್ಹಾದಕರ ಬಿಡುವಿದು! ' ಇಂಥ ಬಿಡುವಿನ ಆನಂದವನ್ನು ನಾನು ಈ ಮೊದಲು ಅನುಭವಿಸಿಯೇ ಇಲ್ಲ. ಇಂತು ಪ್ರಾರಂಭಿಸಬಹುದು.

**೨. ಕಳೆದ ಸ್ಥಳ:—** ಅದರ ವರ್ಣನೆ-ಅದು ಎಲ್ಲಿದೆ ? ಹೇಗಿದೆ? ಅದರ ಪರಿಸರ ಎಂತಹುದು ? ವಿಶೇಷವೇನು ?

**೩. ನಿತ್ಯದ ಕಾರ್ಯಕ್ರಮ:—** ಬೆಳಗಿನಿಂದ ಸಂಜೆಯವರೆಗೆ ಮಾಡಿದುದು ಏನನ್ನು ? ಆಟ-ನೋಟ—ಅಭ್ಯಾಸ—ಸಂಗಡಿಗರು.

**೪. ಒಂದು ವಿಶೇಷ ಸಂಗತಿ:—** ಯಾವದಾದರೊಂದು ಸೋಜಿಗದ ಇಲ್ಲವೆ ಮಹತ್ವದ ಸಂಗತಿಯು ಒದಗಿದ್ದರೆ ಅದರ ವರ್ಣನೆ.

**೫. ಉಪಸಂಹಾರ:—** ನಿಮ್ಮ ಮೇಲಾದ ಪರಿಣಾಮ. ಬಿಡುವಿನ ನಿಜವಾದ ಬೆಲೆ.

### (೨) ನಾನು ಕಂಡ ವಾಕ್ಪಟ

**೧. ಉಪಕ್ರಮ:—** ವಾಕ್ಪಟಗಳ ಆಕರ್ಷಕತೆ—ಅದೇ ನಮ್ಮೂರಲ್ಲಿ ಪ್ರಾರಂಭ-ಜನರು ತಂಡತಂಡವಾಗಿ ಹೋಗುವರು-ಅಂದಿನ ವಾಕ್ಪಟ ಸುಪ್ರಸಿದ್ಧವಾದ 'ತುಕಾರಾಮ' ಎಂಬುದು. ಹೋಗುವ ಬಯಕೆ.

**೨. ಚಿತ್ರಮಂದಿರದ ಹೊರಬದಿಯಲ್ಲಿ:—** ಜನರು ಕಿಕ್ಕಿರಿದು ನೆರೆದಿದ್ದರು,

ಹೆಂಗಳೆಂಬುದೂ ಹೆಚ್ಚಾಗಿ ಬಂದಿದ್ದರು. ವಿದ್ಯುದ್ದೀಪಗಳ ಬೆಳಕು. ಚಿತ್ರಪಟದಲ್ಲಿಯ ಪ್ರಸಂಗಗಳ ಭವ್ಯ ಚಿತ್ರಗಳು. ಟಿಕೀಟು ದೊರೆಯಲು ತೊಂದರೆ.

೩. ಚಿತ್ರಮಂದಿರದಲ್ಲಿ:— ಪ್ರಾರಂಭದ ಪ್ರಕಟನೆಗಳು—ಸಂಗೀತ-ಜನರ ಚೀರಾಟ-ಪಾಕ್ಷಟಿಕ್ಕೆ ಪ್ರಾರಂಭ. ಅದರಲ್ಲಿ ಕೆಲ ವಿಶೇಷಗಳು—ತುಕಾರಾಮನ ಧೀರ ಗಂಭೀರ ಅಭಿನಯ-ಪಂಡಿತನ ಕೃತಕ ನಗೆ; ಭಕ್ತಿಯ ವಾತಾವರಣ.

೪. ಉಪಸಂಹಾರ:— ಭಕ್ತಿಭಾವವನ್ನು ತುಂಬಿಕೊಂಡು ಹೊರಹೊರಟೆ—ಆ ಭಜನೆ—ಆ ನೋಟ—ಇವು ಅನೇಕಸಲ ನನ್ನಲ್ಲಿ ಭಕುತಿಯನ್ನು ಉಕ್ಕಿಸಿದವು.

## (೩) ಕುಮಾರ ವ್ಯಾಸ

೧. ಉಪಕ್ರಮ:— ಮಹಾಕವಿಗಳು ಜನಜೀವನಕ್ಕೆ ಒಳ್ಳೆಯ ಸಂಸ್ಕಾರಗಳನ್ನು ನೀಡಿ, ಇಡಿ ಜನಾಂಗವನ್ನೆಯೆ ಉನ್ನತಗೊಳಿಸುವರು. ಕುಮಾರವ್ಯಾಸ ನಮ್ಮನ್ನು ಧ್ಧರಿಸಿದ ಅಂಥ ಮಹಾಕವಿ.

೨. ಕಾಲ-ಕುಲ-ಸ್ಥಲ:— ಸು. ಕ್ರಿ. ಶ. ೧೪೩೦. ಹರಿಹರ-ರಾಘವಾಂಕರ ಸಮಕಾಲೀನ-ಕರಣಿಕರ ಮನೆತನ-ತಂದೆ ಲಕ್ಕಯ್ಯರಸ-ವಿಜಯನಗರದ ಒಂದನೆಯ ದೇವರಾಯನ ಮಂತ್ರಿ. ಇವನಿಗೆ ೫ ಮಂದಿ ಮಕ್ಕಳು. ಹಿರಿಯವ 'ವೀರನಾರಾಯಣ'- 'ನಾರಾಯಣಪ್ಪ' ನಮ್ಮ ಕುಮಾರವ್ಯಾಸ-ಗದುಗಿನ ಹತ್ತಿರದ 'ಕೋಳಿವಾಡ' ಇವನ ಊರು.

೩. ಪಾಂಡಿತ್ಯ:— ಓದು ಬಾರದ ನಿರಕ್ಷರ ಕುಕ್ಷಿ-ಒಂದು ಮತ. ದಂತ ಕಥೆಗಳು ಎರಡು. ಪ್ರಬಲ ಪಂಡಿತ, ಸಕಲ ಶಾಸ್ತ್ರ ಪಾರಂಗತ. ಸಹಜ ಪ್ರತಿಭೆಯಿಂದ ದೊಡ್ಡವ. ಪ್ರಪಂಚಾನುಭವದಲ್ಲಿ ನಿಷ್ಣಾತ.

೪. ವ್ಯಕ್ತಿತ್ವ:—ಅಪ್ರತಿಮ ಗಾಢ ದೈವಭಕ್ತಿ. ತಿಳಿಯಾದ ನಿರ್ಮಲ ಮನಸ್ಸು. ವಿಶಾಲ ಪರಿಪಕ್ವ ಹೃದಯ. ಸಕಲ ಮತ ಸಹಿಷ್ಣುತೆ. ಪ್ರಚಂಡ ಆಶಾವಾದ. ಇಹ-ಪರ-ಮಂಡನ.

೫. ಉಪಸಂಹಾರ:— ಮಹಾಕವಿ, ಮಹಾವ್ಯಕ್ತಿ, ಕೈಯೆತ್ತಿ ಪೂಜಿಸಲು ಅತ್ಯರ್ಹ.

## (೪) ಶ್ರೀ ರಾಮಕೃಷ್ಣರು

೧. ಉಪಕ್ರಮ:— ಧರ್ಮವು ಅಳಿದು ಅಧರ್ಮವು ಬೆಳೆದಾಗ ಮಹಾತ್ಮರ ಅವತಾರ.

೨. ಕಾಲ-ಕುಲ-ಸ್ಥಲ:—ಕ್ರಿ. ಶ. ೧೮೩೬ ರಲ್ಲಿ ಜನ್ಮ. ತಂದೆ ಖುದಿರಾಮ, ತಾಯಿ ಚಂದ್ರಾದೇವಿ. ಊರು ಕಲಕತ್ತೆಯ ಹತ್ತಿರ ಕಮಾರ ಪುಕೂರ ಎಂಬ ಹಳ್ಳಿ. ತಂದೆ-ತಾಯಂದಿರು ಧರ್ಮನಿಷ್ಠ ದಂಪತಿಗಳು. ಬಡತನ. ಇವರ ಮೂಲ ಹೆಸರು 'ಗದಾಧರ'

೩. ಬಾಲ್ಯ:— ಅದ್ಭುತ ಮೇಧಾಶಕ್ತಿ. ಒಮ್ಮೆ ಹೇಳಿದರೆ ಸಾಕು, ಕೂಡಲೆ ಮುಖಪಾಠ. ಹುಡುಗಾಟಿಕೆ. ಅದೇಕೆ? ಎಂದು ಕೇಳುವ ವೃತ್ತಿ. ಮೂರ್ತಿಯನ್ನು

ತಯಾರಿಸುವ ಕಲೆಯನ್ನು ಕಲಿತರು. ಭಾವನಾ ಪ್ರಾಧಾನ್ಯ. ಅಭಿನಯ ಕೌಶಲ್ಯ.

೭ನೆಯ ವರುಷ ಭಾವಸಮಾಧಿ. ಕರಿಯ ಮೋಡಗಳ ಮೇಲೆ ಬಿಳಿಯ ಹಕ್ಕಿಗಳನ್ನು ಕಂಡು, ಎಚ್ಚರತಪ್ಪಿ ಬೀದಿಯಲ್ಲಿ ಬಿದ್ದನು. ಅತ್ಯಾನಂದ.

ತಂದೆಯ ಮರಣ. ಗದಾಧರನ ಚಿಂತೆ. ವಿರಕ್ತಿ, ಸಾಧುಗಳ ಸಹವಾಸ. ೯ನೆಯ ವರುಷ ಉಪನಯನ.

೪. **ಅರ್ಚಕ:**— ಬಡತನದ ಮೂಲಕ ಅಣ್ಣ ರಾಮಕುಮಾರನು ಕಲಕತ್ತೆಯಲ್ಲಿ ಸಂಸ್ಕೃತ ಪಾಠಶಾಲೆಯನ್ನು ನಡೆಯಿಸುವ. ಗದಾಧರನು ಅಣ್ಣನ ಬಳಿ ಸ್ವಲ್ಪ ಅಧ್ಯಯನ, ಮಾಡುವ. ದಕ್ಷಿಣೇಶ್ವರದಲ್ಲಿ ಕಾಳಿದೇವಿಯ ಅರ್ಚಕನ ಕೆಲಸ. ‘ಕಾಳಿತಾಯಿಯ’ ದರ್ಶನದ ಉತ್ಕಂಠೆ. ಪೂಜೆಯಲ್ಲಿ ತನ್ಮಯತೆ. ದರ್ಶನವಾಗದ್ದರಿಂದ ಆತ್ಮಹತ್ಯೆಯ ಪ್ರಯತ್ನ. ಎಚ್ಚರ ತಪ್ಪಿತು. ಕಾಳಿತಾಯಿಯ ದರ್ಶನ. ಹುಚ್ಚು ಹಿಡಿದಂತಾಯಿತು.

೫. **ಮದುವೆ:**— ಮದುವೆಯಾದರೆ ಹುಚ್ಚು ಹೋಗಬಹುದೆಂದು ಬಯಸಿ ಅವನ ತಾಯಿಯು ಕಮಾರಪುಕುರದಲ್ಲಿ ಒಬ್ಬ ಹುಡುಗಿಯನ್ನು ನೋಡಿದಳು. ಶಾರದಾಮಣಿ ಅವಳ ಹೆಸರು. ವಯಸ್ಸು ಐದು ವರುಷ. ರಾಮಕೃಷ್ಣನು ಮರಳಿ ತನ್ನ ಪೂಜೆ-ಸಾಧನಗಳಿಗಾಗಿ ಕಲಕತ್ತೆಗೆ ಬಂದ. ಆದರೆ ಮುಂದೆ ಹೆಂಡತಿಯನ್ನು ತಾಯಿಯೆಂದು ಬಗೆದು ಅವಳೊಡನೆ ಆ ರೀತಿ ಕೊನೆಯವರೆಗೆ ನಡೆದುಕೊಂಡ.

೬. **ಗುರುಗಳು:**— ಭೈರವಿ ಬ್ರಾಹ್ಮಣಿಯಿಂದ ಶಾಕ್ತಪಂಥದ ಸಾಧನೆಯನ್ನು ಕಲಿತ. ತೋತಾಪುರಿಯಿಂದ ನಿರ್ವಿಕಲ್ಪ ಸಮಾಧಿಯ ಪ್ರಾಪ್ತಿ. ಮಹಮ್ಮದೀಯ ಫಕೀರನಿಂದ ಇಸ್ಲಾಮು ಧರ್ಮದ ಸಾಧನ ಪರಿಚಯ. ಮಲ್ಲಿಕ ಎಂಬವನಿಂದ ಕ್ರಿಸ್ತ ಧರ್ಮದ ಜ್ಞಾನ.-ಕ್ರಿಸ್ತನ ದರ್ಶನ. ಕಾಶಿ-ವೃಂದಾವನ ಯಾತ್ರೆ. ಅಲ್ಲಿ ಶಿವ-ಕೃಷ್ಣರ ದರ್ಶನ.

೭. **ಪರಮಹಂಸರು:**— ಲೋಕದ ಗುರು. ರಾಜಾ ರಾಮಮೋಹನರಾಯ ಕೇಶವಚಂದ್ರ-ವಿದ್ಯಾಸಾಗರ ಇವರ ಪರಿಚಯ. ಅವರು ಇವರಿಗೆ ತುಂಬ ಗೌರವವನ್ನು ತೋರಿಸಿದರು.

೮. **ಶಿಷ್ಯವರರು:**— ಅನೇಕ ಶಿಷ್ಯರು ಬಂದರು, ಅರಳುವ ತಾವರೆಯೆಡೆಗೆ ತುಂಬಿಗಳು ಬಂದಂತೆ. ೨೫ ಜನರು ಶಿಷ್ಯರು. ಅವರ ಮನೋಧರ್ಮವನ್ನು ಪರೀಕ್ಷಿಸಿ ಸ್ವೀಕಾರ. ಅವರಿಗೆ ಯೋಗ್ಯ ಮಾರ್ಗದರ್ಶನ. ವಿವೇಕಾನಂದರು ಎಲ್ಲರಲ್ಲಿ ಶ್ರೇಷ್ಠರು. ಸಂತತ ಉಪದೇಶ ಶಿಷ್ಯರಿಗೆ.

೯. **ನಿರ್ಯಾಣ:**— ಸಂತತ ಉಪದೇಶ-ಭಾವಸಮಾಧಿ. ಇವುಗಳಿಂದ ದೇಹ ಕ್ಷೀಣವಾಗುವುದು. ತಡೆಯಿಲ್ಲದ ಮಾತಿನಿಂದ ಗಂಟಲಲ್ಲಿ ಹುಣ್ಣು. ರೋಗ ವಾಸಿಯಾಗಲಿಲ್ಲ. ಶಿಷ್ಯರನ್ನು ಆಶೀರ್ವದಿಸಿ ಮಹಾಸಮಾಧಿಯನ್ನು ಹೊಂದಿದರು.

೧೦. **ಉಪಸಂಹಾರ:**— ಸನಾತನ ಧರ್ಮ ಮಹಾತತ್ವಗಳನ್ನು ಸಾಕ್ಷಾತ್ಕರಿಸಿ

ಆವನ್ನು ಆಧುನಿಕ ಜಗತ್ತಿನಲ್ಲಿ ಬೀರಿ, ಸರ್ವಧರ್ಮ ಸಮನ್ವಯದ ತಳಿಗಲ್ಲನ್ನಿರಿಸಿದ ಮಹಾತ್ಮನೀತ. ಆತನ ಮಹಾಕಾರ್ಯ ಇನ್ನೂ ಎಲ್ಲೆಡೆಯಲ್ಲಿ ಭರದಿಂದ ನಡೆದಿದೆ.

## ೫. ಮಾತುಗಾರಿಕೆ

೧. **ಉಪಕ್ರಮ** :—ಮಾತಿನಿಂ ನಗೆನುಡಿಯು, ಮಾತಿನಿಂ ಹಗೆ ಕೊಲೆಯು, ಮಾತಿನಿಂ ಸಕಲ ಸಂಪತ್ತು, ಲೋಕಕ್ಕೆ ಮಾತೆ ಮಾಣಿಕವು.

೨. **ಬೇಕೇತಕ್ಕೆ ?** :—(೧) ಇದೊಂದು ಕಲೆ. ಇದು ಆನಂದವನ್ನೂ ಬೋಧೆಯನ್ನೂ, ಸ್ಫೂರ್ತಿಯನ್ನೂ ನೀಡುವುದು.

(೨) ಇದು ದ್ವಿವಿಧ ಕಲ್ಯಾಣಕರ— i) ನೀಡುವವರಿಗೆ ii) ಬೇಡುವವರಿಗೆ.

(೩) ವಿಶೇಷವಾಗಿ ಪ್ರಜಾಪ್ರಭುತ್ವದ ಕಾಲದಲ್ಲಿ, ಇದರ ಉಪಯೋಗವು ಬಹಳ. ಇದರಿಂದ ಜನತೆಯ ನಿಯೂಡ ಮತಪರಿವರ್ತನ, ಅವರಿಗೆ ಸುಸಂಸ್ಕಾರದಾನ ಸಾಧ್ಯ.

೩. **ಪಡೆಯುವುದೆಂತು ?** :—(೧) ವಿಮಲವಾದ ಚಾರಿತ್ರ್ಯದಿಂದ.

(೨) ವಿಪುಲವಾದ, ಸೂಕ್ಷ್ಮವಾದ ವಾಚನ-ನಿರೀಕ್ಷಣ ಆಲೋಚನೆಯಿಂದ.

(೩) ಹೇಳಬೇಕೆಂಬ ಪ್ರಬಲ ಭಾವನೆಯಿಂದ, ಸಹಜ ಯತ್ನದಿಂದ. ಅಂತರಂಗದಿಂದ ಹೊರಹೊರಟಿದ್ದು ನೇರವಾಗಿ ಅಂತರಂಗವನ್ನು ಮುಟ್ಟಲೇ ಬೇಕು.

೪. **ಬಳಸುವದು ಹೇಗೆ?** :—(೧) ಅಭ್ಯಾಸದಿಂದ ಸಭಾಕಂಪವನ್ನು ಕಳೆಯಬೇಕು.

(೨) ಮುಖ್ಯಾಂಶಗಳ ಟಿಪ್ಪಣಿಯನ್ನು ಬರೆದಿಡಬೇಕು.

(೩) ಕೇಳುವವರ ಬುದ್ಧಿಯ ಮಟ್ಟವನ್ನರಿತು ಅವರಿಗೆ ತಿಳಿಯುವಂತೆ ಹೇಳಬೇಕು.

(೪) ಸಹಜವಾದ ಹಾವಭಾವಗಳನ್ನು ಮಾಡಬೇಕು.

೫. **ಉಪಸಂಹಾರ** :—ಮಾತಾಡಿದಂತೆ ನಡೆದು, ನಡೆದಂತೆ ನುಡಿದು, ಜಗವನ್ನಾಳಬೇಕು.

## ೬. ದಾನದ ಮಹಿಮೆ

೧. **ಉಪಕ್ರಮ** :-ಕೊಡು-ಕೊಳ್ಳುವುದು ವ್ಯವಹಾರ. ಕೊಳ್ಳದೆ ಕೊಡುವುದು ದಾನ. 'ಕೈ ಕೆಳಗೆ ಮಾಡಬೇಡ, ಮೇಲೆ ಮಾಡು' ಎಂಬುದು ಸತ್ಪುರುಷರ ಹೇಳಿಕೆ.

೨. **ಏಕೆ ಬೇಕು ?** :—(i) ತನ್ನ-ಅನ್ಯರ ಸುಖಕ್ಕಾಗಿ-ಹಿತಕ್ಕಾಗಿ. ದಾನವು ಕೊಡು-ಕೊಳ್ಳುವವರಿಬ್ಬರನ್ನೂ ಹರಸುವದು. (ii) ಈವಂಗೆ ದೇವಂಗೆ ಆವುದಂತರವಯ್ಯಾ ? ಅದಕ್ಕಾಗಿಯೇ ಮಾನವನಿಗೆ ದೇವಪದವಿಯನ್ನು ದಯಪಾಲಿಸುವ ದಯೆಯು ದಾನ-ಧರ್ಮದ ಮೂಲವೆಂದು ಎಣಿಸಲಾಗಿರುವದು. (iii) 'ಧನದ ಸಮ-ವಿಭಜನೆ' (Equal distribution of wealth) ಯು ಹಿರಿದಾದ ಸಾಧನ. ಅದು ಕೊಡು-ಕೊಳ್ಳುವರಿಬ್ಬರನ್ನೂ ಉನ್ನತಗೊಳಿಸುವದು. ಒಬ್ಬನಲ್ಲಿ ದಯೆಯು,-ಇನ್ನೊಬ್ಬನಲ್ಲಿ ಕೃತಜ್ಞತೆಯು ಬೆಳವಣಿಗೆಯಾಗುವದು.

೩. **ಹೇಗೆ ಮಾಡಬೇಕು?** (೧) ಪ್ರತಿಫಲದ ಬಯಕೆಯನ್ನು ತೊರೆದು-ಸೇವಾಭಾವದಿಂದ. ದಾನಕ್ಕಾಗಿ ದಾನ-ಮಾನಕ್ಕಾಗಿಯಲ್ಲ.

(೨) ಕೊಟ್ಟು ಕುದಿಯಲು ಬೇಡ, ಕೊಟ್ಟು ಮರೆಯಬೇಕು.

(೩) ಕೊಡುವುದು ಸಹಜಸ್ವಭಾವವಾಗಲಿ. ಬಲಗೈ ದಾನವು ಎಡಗೈಗೆ ತಿಳಿಯಬಾರದು. ಬೇರೆಯ ಧರ್ಮದ ಮಾತು.

(೪) ದೇಶಕಾಲ-ಪಾತ್ರವನ್ನರಿತು ಮಾಡಿದ ದಾನವೇ ಸಾತ್ವಿಕದಾನ.

೪. **ಏನನ್ನು ಕೊಡಬೇಕು?** (i) ತನ್ನಲ್ಲಿದ್ದುದನ್ನು, ಧನವನ್ನು-ಜ್ಞಾನವನ್ನು.

(ii) ಅನ್ನದಾನಗಳಿಂದ ಹೆಚ್ಚು ದಾನಗಳಿಲ್ಲ. ಅದಕ್ಕಾಗಿ ಅನ್ನವನ್ನು ಈಯುವದು.

(iii) ಸಾಲವನ್ನು ಮಾಡಿ ಕೊಡಬಾರದು.

(iv) ಪಡೆಯುವವರು ಸ್ವಾವಲಂಬಿಗಳಾಗುವಂತಹ ವಸ್ತುಗಳನ್ನು ಕೊಡಬೇಕು.

೫. **ಉಪಸಂಹಾರ:**—Charity should begin at home. ದಾತೃತ್ವವು ಮನೆಯಿಂದಲೇ ಮೊದಲಾಗಲಿ.

## ೭. ಜಾತಿಯ ಭೂತ

೧. **ಉಪಕ್ರಮ:**—ಜಾತಿಯೆಂದರೆ ಜ್ಞಾತಿ-ಸಂಘ. ಮಾನವನು ಸಂಘಜೀವಿ. ಗುಂಪು ಕಟ್ಟಿ ನಿಲ್ಲುವುದು ಅವನ ಸಹಜ ಸ್ವಭಾವ. ಏಕಾಕಿಯು-ಅಸಹಾಯನು-ದುರ್ಬಲನು.

೨. **ಉತ್ಪತ್ತಿ:**—(i) ಸಹ-ಜೀವನವು ಸಹಜ-ಗುಣ. (ii) ಸಮಾನ ಗುಣ-ಕರ್ಮಗಳಿಂದ ಗುಂಪುಗಳು (iii) ಸಹವಾಸದಿಂದ ಪ್ರೀತಿಯ ಜನನ, ಬಂಧನ.

೩. **ಉಪಯೋಗ:**—(i) ಮಾನವನ ಮನೋವಿಕಾಸದ ಕುರುಹು. (ii) ಅವನ ಬಲದ ಬೆಳವಣಿಗೆ (iii) ಸೌಖ್ಯದ ಹೆಚ್ಚಳ. ಪ್ರಿಯಜನರಲ್ಲಿ ವಿಭಕ್ತವಾದ ದುಃಖವು ಅಳಿಯುವದು-ಸುಖವು ಬೆಳೆಯುವದು.

೪. **ಅಪಾಯ:**—(i) ಜಾತಿ ಪ್ರೀತಿಯು, ರಾಷ್ಟ್ರ ಪ್ರೀತಿಯಾಗಿ, ಮಾನವ ಪ್ರೀತಿಯಾಗಿ ಬೆಳೆಯದಿದ್ದರೆ ಅದರಿಂದ ಅನಾಹುತ. (ii) ಗುಂಪು ಗುಂಪುಗಳಲ್ಲಿ ದ್ವೇಷ-ಕಲಹ. (iii) ಸಮಾಜನಾಶ-ರಾಷ್ಟ್ರನಾಶ. (iv) ವ್ಯಕ್ತಿ- ಕಲಹಕ್ಕಿಂತ ಹೆಚ್ಚು ವಿನಾಶಕ. (v) ಜಾತಿಯು ಭೂತವಾಗುವದು.

೫. **ಉಪಸಂಹಾರ:**—ನಿಜವಾಗಿ ಜಾತಿಯು ಪ್ರೀತಿಯ ಮಗು. ಅದು ಕೋತಿಯೂ ಅಲ್ಲ-ಭೂತವೂ ಅಲ್ಲ. ಪ್ರೀತಿಯು ಅಳಿಯಿತೆಂದರೆ ಜಾತಿಯು ಭೂತವಾಗುವುದು. ಪ್ರೀತಿಯ ಪ್ರಚಾರವೇ ಈ ಭೂತವನ್ನು ಸಂಹರಿಸುವ ಮಹಾಮಂತ್ರ.

## ೮. ಪಂಚರ ಪ್ರಭುತ್ವ

೧. **ಉಪಕ್ರಮ:**-ನಮ್ಮ ನಾಡು ಗ್ರಾಮಗಳ-ಹಳ್ಳಿಗಳ ನೆಲೆವೀಡು. ನಮ್ಮದು ಗ್ರಾಮಸಂಸ್ಕೃತಿ. ಅದನ್ನು ಉಳಿಸಲು-ಬೆಳೆಸಲು ಪಂಚರ ಪ್ರಭುತ್ವವು ಅವಶ್ಯ.

೨. **ಅಂದು** :—ಹಿಂದಿನ ಕಾಲದಲ್ಲಿ ಗ್ರಾಮಜೀವನವನ್ನು ನಡೆಸುವವರು ಅಲ್ಲಿಯ ಹಿರಿಯರು-ಪಂಚರು. ಪಂಚರ ಮುಖದಲ್ಲಿ ಪರಮಾತ್ಮನು ಎಂಬ ಭಾವನೆ. ಅವರು ಹೇಳಿದುದನ್ನು ಎಲ್ಲರು ಕೇಳುತ್ತಿದ್ದರು. ಆದುದರಿಂದ ಅಲ್ಲಿಯ ಜೀವನವು ಉನ್ನತ-ಸುಖಮಯವಾಗಿತ್ತು.

೩. **ಇಂದು** :—ಹಿರಿಯ ಮನಸ್ಸಿನ ಪಂಚರು ಅಳಿದರು. ಗಾಮುಣ್ಡರು ಸ್ವಾರ್ಥ ಲೋಲುಪರು. ನ್ಯಾಯಮಂದಿರಗಳು ಪಟ್ಟಣವನ್ನು ಆಶ್ರಯಿಸಿದವು. ಗ್ರಾಮ ಜೀವನದ ಒಕ್ಕಟ್ಟು-ಸ್ವಯಂಪೂರ್ಣತೆಯು ಅಳಿಯಿತು. ಇತ್ತೀಚಿಗೆ ಗ್ರಾಮಪಂಚಾಯತಿಯ ಪುನರುಜ್ಜೀವನ. ಆದರೆ ಪಂಚಾಯತಿಗಳು ಬಂದರೂ ಹಿರಿಯರಾದ ಪಂಚರು ಬಂದಿಲ್ಲ.

೪. **ಮುಂದೆ** :—ಇಂದಿನ ಅಯ್ಕೆಯು ಸದೋಷ. ಅದರಿಂದ ನಿಜವಾದ ಗುಣ ವುಳ್ಳವರು ಹಿಂದುಳಿಯುವರು. ಅಧಿಕಾರಲೋಲುಪರಾದ ಸ್ವಾರ್ಥಿಗಳು ಮೆರೆಯು ವರು. ಇದು ನಿಲ್ಲಬೇಕು. ಗ್ರಾಮದ ಆರೋಗ್ಯ-ಶಿಕ್ಷಣ-ಧರ್ಮ-ನ್ಯಾಯ-ಸಹಕಾರ ಇವುಗಳನ್ನು ನಿಸ್ವಾರ್ಥತನದಿಂದ ನಡೆಯಿಸುವ ಹಿರಿಯರನ್ನೆಯೆ ಆರಿಸುವ ಯೋಜನೆ ಯಾಗಬೇಕು.

೫. **ಉಪಸಂಹಾರ** :—ಇಂಥ ಆದರ್ಶ ಹಿರಿಯರಿಂದ ನಡೆಯಿಸಲಾದ ಹಳ್ಳಿಯ ಆಡಳಿತವು ಆದಾರಿಗೆ ಸೌಖ್ಯವನ್ನು ನೀಡಲಿಕ್ಕಿಲ್ಲ ? ಇಂಥ ಪಂಚರ ಪ್ರಭುತ್ವವೇ ರಾಷ್ಟ್ರದ ಪ್ರಜಾಪ್ರಭುತ್ವದ ಅಡಿಗಲ್ಲು.

## ೯. ಆಧುನಿಕ ಯುದ್ಧದ ಭೀಷಣತೆ

೧. **ಉಪಕ್ರಮ** :—ಇಂದಿನ ಭೌತಿಕ ಶಾಸ್ತ್ರಗಳಲ್ಲಿಯ ಅದ್ಭುತ ಪ್ರಗತಿಯು ಮಾನವನ ಸುಖಸಾಧನಗಳಂತೆ, ದುಃಖಸಾಧನಗಳನ್ನು ಬೆಳೆಸಿದೆ. ಇವುಗಳ ಹೇರಳತೆ ಯಿಂದಲೇ ಇಂದಿನ ಯುದ್ಧದ ಭೀಷಣತೆಯು ಮೇರೆ ಮೀರಿರುವದು.

೨. **ಕ್ಷೇತ್ರ** :—ಇಂದು ಯುದ್ಧದ ಕ್ಷೇತ್ರವು ಬೆಳೆದಿದೆ. ನೆಲ-ಜಲ-ಆಕಾಶ ಎಲ್ಲೆಡೆಯಲ್ಲಿ ಅದರ ಜ್ವಾಲೆಗಳು ಹಬ್ಬಿರುವವು. ಸೈನಿಕರೊಡನೆ ಜನಸಾಮಾನ್ಯರು ಅದರ ಕ್ರೌರ್ಯಕ್ಕೆ ತುತ್ತಾಗಿರುವರು. ಹೊಸಸಂಶೋಧನೆಗಳು ಭಯಂಕರವಾದ ದಾಹಶಕ್ತಿಯುಳ್ಳ ಅಸ್ತ್ರಗಳನ್ನು ನಿರ್ಮಿಸಿ ಸಂಹಾರದ ತೀವ್ರತೆಯನ್ನು ವ್ಯಾಪಕತೆಯನ್ನು ಬೆಳೆಸಿರುವವು.

೩. **ನೆಲ** :—ಇಂದು ಹೊಸಮಾದರಿಯ ತೋಫು-ತುಬಾಕಿಗಳು ದೂರದವರೆಗೆ ಭಯಂಕರವಾದ ಗುಂಡುಗಳನ್ನು ಎಸೆಯಬಲ್ಲವು. ಟ್ರಂಕುಗಳು-ಅಲೆದಾಡುವ ಚಿಕ್ಕ ಕೋಟೆಗಳೇ ಆಗಿರುವವು. ಯಂತ್ರ ಸಾಧನಗಳಿಂದ ಇಂದಿನ ಸೈನ್ಯವು ಅಭೇದ್ಯವಾಗಿದೆ.

೪. **ಜಲ** :—ಪ್ರಬಲವಾದ ಯುದ್ಧನೌಕೆಗಳು. ನೀರಿನಲ್ಲಿ ಮುಳುಗಿ ಮೃತ್ಯು ದೇವತೆಯನ್ನು ಅಜ್ಞಾತವಾಗಿ ಬೇಕಾದಲ್ಲಿ ಒಯ್ಯುವ ಜಲಾಂತರ್ಗಾಮಿಗಳು. ಒಂದೆ ಹೊಡೆತಕ್ಕೆ ಮಹಾಹಾಸ್ ಮಹಾನ್ ಹಡಗಗಳನ್ನು ಒಡೆಯಬಲ್ಲ ಟಾರ್ಪೆಡೊ-ಸುರಂಗ

ಗಳು, ಸಾಗರದ ಮೇಲಿನ ಜೀವನವನ್ನು ಅಸಾಧ್ಯಗೊಳಿಸಿವೆ.

೫. **ಆಕಾಶ**:—ಹಕ್ಕಿಯಂತೆ ಹಾರುವ ವಿಮಾನಗಳು—ಅತ್ಯಂತ ಭೀಕರವಾದ ಬಾಂಬುಗಳನ್ನು ಎಸೆದು ಇಡಿ ಪಟ್ಟಣಗಳನ್ನೆಲ್ಲ ಬೂದಿಮಾಡಬಲ್ಲವು. ವಿಷ ವಾಯುವು ಜನರನ್ನು ಎಚ್ಚರತಪ್ಪಿಸಬಲ್ಲದು—ಕೊಲ್ಲಬಲ್ಲದು. ಕೊನೆಗೆ—ಅಣುಬಾಂಬು, ಹೈಡ್ರೋಜನ್ ಬಾಂಬು. ಅವು ಪ್ರಪಂಚದಲ್ಲಿ ಪ್ರಳಯವನ್ನೆ ಕುಣಿಸಬಲ್ಲವು.

೬. **ಉಪಸಂಹಾರ**:—ಇವುಗಳಿಂದ ಮಾನವ ಕುಲವು ಹಾಳಾಗದಿರಲು, ಒಂದೆ ಒಂದು ಸಾಧನ. ಅದಾವುದೆಂದರೆ ಮಾನವನ ಮನಸ್ಸಿನ ಅರಳುವಿಕೆ. ಮನಸ್ಸು ಬೆಳೆಯದೆ ಮಾನವನು ಉಳಿಯುವಂತಿಲ್ಲ.

## ೧೦. ಪ್ರಗತಿಶೀಲ ಸಾಹಿತ್ಯ

೧. **ಉಪಕ್ರಮ**:— ಇದು ಇಂದಿನ ಚರ್ಚೆಯ ವಿಷಯ. ಪತ್ರಿಕೆಗಳಲ್ಲಿ—ಉಪನ್ಯಾಸಗಳಲ್ಲಿ, ಸಭೆ ಸಮ್ಮೇಲನಗಳಲ್ಲಿ—ಎಲ್ಲೆಲ್ಲಿಯೂ ಇದರ ಚರ್ಚೆಯೇ ಕೇಳಬರುವದು. ಆದುದರಿಂದ ಇದರ ಸರಿಯಾದ ಪರಿಚಯವನ್ನು ಮಾಡಿಕೊಳ್ಳುವದು ಅವಶ್ಯ.

೨. **ಪ್ರಗತಿಯ ಲಕ್ಷಣ**:—(೧) **ವ್ಯಕ್ತಿಜೀವನ**:—ಇಂದ್ರಿಯ ಜೀವನದಿಂದ ಆತ್ಮಜೀವನದೆಡೆಗೆ ಸಾರುವುದು, ದೇಹಕ್ಕಿಂತ ಮನಸ್ಸು, ಮನಸ್ಸಿಗಿಂತ ಬುದ್ಧಿ, ಬುದ್ಧಿಗಿಂತ ಆತ್ಮ, ಶ್ರೇಷ್ಠವೆಂದು ಬಗೆದು ನಡೆಯುವುದು ಪ್ರಗತಿ. ತದ್ವಿರುದ್ಧ ಸಾಗುವುದು ಪ್ರಗತಿಯಲ್ಲ, ಪರಾಗತಿ.

(೨) **ಸಮಾಜಜೀವನ**:—ವ್ಯಕ್ತಿಜೀವನದಿಂದ ವಿಶ್ವಜೀವನದೆಡೆಗೆ ಸಾಗುವುದು, ವ್ಯಕ್ತಿ—ಕುಲ—ಸಮಾಜ—ರಾಷ್ಟ್ರ— ಮತ್ತು ವಿಶ್ವ—ಇವು ಒಂದಕ್ಕಿಂತ ಇನ್ನೊಂದು ಹೆಚ್ಚು ಮಹತ್ವವುಳ್ಳವುಗಳೆಂದು ಬಗೆದು ಮುಂದಿನದಕ್ಕಾಗಿ ಹಿಂದಿನದನ್ನು ತ್ಯಜಿಸಲು ಸಿದ್ಧವಿರುವುದು ಪ್ರಗತಿಯ ಕುರುಹು. ಅದರ ವಿರುದ್ಧವಾದುದು ಪರಾಗತಿ.

೩. **ಸಾಹಿತ್ಯದ ಕಾರ್ಯ**— ಒಳ್ಳೆಯ ಭಾವಸಂಸ್ಕಾರಗಳನ್ನು ನೀಡುವುದು ಉನ್ನತ ಸಾಹಿತ್ಯದ ಕೆಲಸ. ಅದು ಎರಡು ಬಗೆಯದು.

(೧) **ತಾತ್ಕಾಲಿಕ**:— ತಾತ್ಕಾಲಿಕ ಸಮಸ್ಯೆಗಳನ್ನು ಬಿಡಿಸಲೆತ್ನಿಸುವುದು. ತಾತ್ಕಾಲಿಕ ಪ್ರಗತಿಯನ್ನು ಸಾಧಿಸಲೆತ್ನಿಸುವುದು.

(೨) **ಸಾರ್ವಕಾಲಿಕ**:—ಮಾನವ ಜೀವನದ ತಿರುಳನ್ನು ಕಂಡುಹಿಡಿದು ಅದನ್ನೆಯೆ ತಿದ್ದಲು, ಉನ್ನತಗೊಳಿಸಲು ಯತ್ನಿಸುವುದು.

೪. **ಉಪಸಂಹಾರ**:— ನಿಜವಾಗಿ ಉನ್ನತವಾದ ಸಾಹಿತ್ಯವು ಮೇಲ್ಕಾಣಿಸಿದ ಪ್ರಗತಿಯನ್ನು ಸಾಧಿಸುವದು. ಅದನ್ನು ಸಾಧಿಸದ ಸಾಹಿತ್ಯವು ಸಾಹಿತ್ಯವೇ ಅಲ್ಲ.

## ೧೧. ನಾನು ಶಿಕ್ಷಣ ಮಂತ್ರಿಯಾದರೆ

೧. **ಉಪಕ್ರಮ**:—' ಮನಸ್ಸಿನಲ್ಲಿ ಮಂಡಗಿ ತಿಂಪರೆ ಗೋದಿಯಾರು ಕೊಡುವವರು? ' ಸರಿ. ಮಂಡಗಿಯನ್ನು ತಿನ್ನಬಲ್ಲ ಮನಸ್ಸು ಗೋದಿಯನ್ನು ತರಲರಿಯದೆ?

ಗೋಳಿಡುತ್ತಿದ್ದ ನಮ್ಮ ಜನತೆಗಿಂದು ಪಾಠವಿಲ್ಲವು, ಅದಕ್ಕೆ ಪರಿಹಾರವಾದರೂ ಸೋಲ್ಪಿಂಕ್ತಿ ದೊರಕುವುದೇ?

೨. ಬದಲು:—(೧) ಭಾರತೀಯ ದೇಶದಲ್ಲಿ ಆಂಗ್ಲ ಮನಸ್ಸನ್ನು ಬೆಳೆಯಿಸು-ಕಾರಕೂನರನ್ನು ತಯಾರಿಸುವ ಇಂದಿನ ಪದ್ಧತಿಯಲ್ಲಿ ಅನುಕೂಲಾಗ್ರ ಬದಲಾವಣೆಯನ್ನು ಮಾಡುವೆ.

(೨) ಮೂಲಶಿಕ್ಷಣವನ್ನು ಪ್ರಯೋಗಶಾಲೆಯಲ್ಲಿ ಸರಿಯಾಗಿ ಪರೀಕ್ಷಿಸುವೆ.

೩. ಶಿಶುವಿಹಾರಗಳು:—೩ ರಿಂದ ೫ ವರ್ಷ ವಯಸ್ಸಿನ ಶಿಶುಗಳಿಗಾಗಿ ಹಳ್ಳಿ ಹಳ್ಳಿಗೆ ಶಿಶುವಿಹಾರಗಳನ್ನು ತೆರೆಯುವೆ. ಆಟ-ನೋಟ-ಹಾಡುಗಳ ಮುಖಾಂತರ ಅವರಿಗೆ ಸರಿಯಾದ ಶಿಕ್ಷಣ ಕೊಡಿಸುವೆ.

೪. ಬಾಲಶಾಲೆಗಳು:—ಎರಡು ಮಾದರಿಯವು. (೧) ಪ್ರಾಥಮಿಕ:—೬ ರಿಂದ ೯ ವರ್ಷದ ಬಾಲರಿಗೆ ಓದು-ಬರಹ-ಗಣಿತ-ಸಾಮಾನ್ಯವಿಜ್ಞಾನವನ್ನು ಕಲಿಸುವ ವಿಧಾನವು. ಭಾರತದಲ್ಲಿಯ ಎಲ್ಲ ಬಾಲ-ಬಾಲಕಿಯರಿಗೆ ಒತ್ತಾಯದಿಂದ-ಪುಕ್ಕಟೆಯಾಗಿ ದೊರೆಯುವ ವ್ಯವಸ್ಥೆ. ಇದರ ಕೊನೆಗೆ ಬುದ್ಧಿ-ಪರೀಕ್ಷಣ. ಯೋಗ್ಯರಿದ್ದವರಿಗೆ ಮಾಧ್ಯಮಿಕ ಶಾಲೆಗಳಿಗೆ ಕಳುಹುವುದು. ಉಳಿದವರಿಗೆ ಅವರವರ ಒಲವಿನಂತೆ ಕೃಷಿ ಶಾಲೆಗಳಿಗಾಗಲಿ-ವೃತ್ತಿ ಶಾಲೆಗಳಿಗಾಗಲಿ ಕಳುಹುವುದು.

(೨) ಮಾಧ್ಯಮಿಕ:—೧೦ ರಿಂದ ೧೩ ರ ವರೆಗೆ. ಹಿಂದಿನ ಅಭ್ಯಾಸವು ಮುಂದುವರಿಯುವುದು. ನಿತ್ಯ ವ್ಯವಹಾರಕ್ಕೆ ಬೇಕಾದ ಬೇರೆ ಕೆಲ ವಿಷಯಗಳನ್ನು ಕಲಿಸುವದು. ಕೊನೆಗೆ ಒಂದು ಪರೀಕ್ಷೆ. ತೇರ್ಗಡೆ ಹೊಂದಿದವರಿಗೆ 'ಜಾಣ'(P. S. C.) ಎಂಬ ಬಿರುದು. ಇನ್ನೊಮ್ಮೆ ಬುದ್ಧಿ-ಪರೀಕ್ಷಣ. ಒಲವನ್ನು-ಬಲವನ್ನು ಕಂಡು ಮುಂದಿನ ಶಿಕ್ಷಣ. ಉಳಿದವರು ಕೃಷಿ ವೃತ್ತಿ ಶಾಲೆಗಳಲ್ಲಿ ಶಿಕ್ಷಣ ಪಡೆಯಬಹುದು.

೫. ವಿದ್ಯಾಲಯಗಳು:—೧೪ ರಿಂದ ೧೬ ರ ವರೆಗೆ. ವಿವಿಧತೆ. ೧ ಕಲೆ(Arts), ೨ ಶಾಸ್ತ್ರ, ೩ ಆಪಕಿತ, ೪ ಕೃಷಿ, ೫ ಉದ್ಯಮ, ೬ ವ್ಯಾಪಾರ, ೭ ವ್ಯಾಯಾಮ, ೮ ಶಿಕ್ಷಣ, ೯ ಲಲಿತಕಲೆ ಇತ್ಯಾದಿಗಳ ಶಿಕ್ಷಣಕ್ಕಾಗಿ ಬೇರೆಬೇರೆ ವಿದ್ಯಾಲಯಗಳು. ಕೊನೆಗೆ ಒಂದು ಪರೀಕ್ಷೆ. 'ವಿಶಾರದ' (S. S. C.) ಬಿರುದು. ಬೇಕಾದವರು ಮುಂದೆ ಮಹಾವಿದ್ಯಾಲಯವನ್ನು ಸೇರಬಹುದು. ಬೇಡಾದವರು ಬೇರೆ ಕೆಲಸವನ್ನು ಕೈಕೊಳ್ಳಬಹುದು.

೬. ಮಹಾವಿದ್ಯಾಲಯಗಳು:—೧೬-೧೮. ವಿವಿಧತೆ. ವಿದ್ಯಾಲಯಗಳಲ್ಲಿಯ ವಿಷಯಗಳ ಹೆಚ್ಚಿನ ಜ್ಞಾನ. ಕೊನೆಗೆ ಪರೀಕ್ಷೆ. 'ಪ್ರವೀಣ' (B. A.) ಬಿರುದು.

೭. ವಿಶ್ವವಿದ್ಯಾಲಯ:—(i) ೧೯-೨೦. ಹಿಂದಿನ ವಿಷಯಗಳಲ್ಲಿ ಹೊಸ ಸಂಶೋಧನ. 'ಪ್ರಾಜ್ಞ'(M. A.) ಬಿರುದು. (ii) ೨೧-೨೨ ಹೆಚ್ಚಿನ ಸಂಶೋಧನ 'ಪ್ರಭು' (Ph. D.) ಬಿರುದು.

೮. ಸಂಸ್ಕೃತಿ ಪ್ರಸಾರ:— (i) ಪ್ರವಚನ-ಕೀರ್ತನ-ಲಾವಣಿ-ಮಾಯಾ

ಲೀಲ-ಚಿತ್ರಪಟ-ವಾಕ್ಯಟಿ ಇವುಗಳ ಮುಖಾಂತರವಾಗಿ ಭಾರತೀಯ ಸಂಸ್ಕೃತಿಯ ಉನ್ನತ ಆದರ್ಶಗಳ ಪ್ರಚಾರವನ್ನು ಜನತೆಯಲ್ಲಿ ಮಾಡುವದು.

(ii) ಎಲ್ಲ ಶಿಕ್ಷಣ ಸಂಸ್ಥೆಗಳಲ್ಲಿ ನೀತ್ಯ-ಧರ್ಮಗಳ ಶಿಕ್ಷಣದ ಏರ್ಪಾಡು.

(iii) ಸ್ತ್ರೀಯರಿಗಾಗಿ ಸ್ವತಂತ್ರ ವಿದ್ಯಾಲಯ, ಮಹಾವಿದ್ಯಾಲಯಗಳು.

೯. ಮಾಧ್ಯಮ :— ಶಾಲೆ-ವಿದ್ಯಾಲಯಗಳಲ್ಲಿ ಪ್ರಾಂತ-ಭಾಷೆ; ಮಹಾ-ವಿದ್ಯಾಲಯಗಳಲ್ಲಿ ರಾಷ್ಟ್ರಭಾಷೆ.

೧೦. ಉಪಸಂಹಾರ:— ಭಾರತೀಯ ಯುವಕರು-ಪ್ರಪಂಚದಲ್ಲಿ ತಮ್ಮ ಬುದ್ಧಿ-ಭಾವ ವೈಭವದಿಂದ ಅನ್ಯರಿಗೆ ಮೇಲ್ಪಂಕ್ತಿಯಾಗುವಂತೆ ಯತ್ನಿಸುವದೆ ನನ್ನ ಯೋಜನೆಯ ಗುರಿ.

## ಅಭ್ಯಾಸ ೧೪.

ಕೆಳಗಿನ ವಿಷಯಗಳನ್ನು ಕುರಿತು ನಿಬಂಧಗಳನ್ನು ಬರೆಯಿರಿ. ಮುಂಬಯಿ ವಿಶ್ವವಿದ್ಯಾನಿಲಯದ ಮೆಟ್ರಿಕ್ ಪರೀಕ್ಷೆಯಲ್ಲಿಯ ಪ್ರಶ್ನ-ಪತ್ರಿಕೆಗಳಿಂದ ಇವುಗಳನ್ನು ಆಯ್ದುಕೊಳ್ಳಲಾಗಿದೆ. ಮಗ್ಗಲಿಗೆ ಕಾಣಿಸಿದ ಅಂಕಿಗಳು ವರ್ಷವನ್ನು ಸೂಚಿಸುವವು.

೧೯೨೭:—೧. ಶರೀರ ವ್ಯಾಯಾಮದ ಮಹತ್ವ. ೨. ನೀನು ಕಂಡ ಅಂದವಾದ ಸ್ಥಲ. ೩. ಜನಸಂದಣಿಯಿಂದ ಕೂಡಿದ ರಾಜಪಥ. ೪. ಬಾಲವೀರಚಳವಳಿ.

೧೯೨೮:—೧. ನೀನು ಅರಸನಾದರೆ ಜನತೆಯ ಕಲ್ಯಾಣವನ್ನು ಹೇಗೆ ಮಾಡುವಿ? ೨. ನಿಮ್ಮ ಜನಾಂಗದ ವರ್ಷಾರಂಭದ ಹಬ್ಬ. ೩. ಮಿಂಚಿನ ಅದ್ಭುತ ಶಕ್ತಿ. ೪. ಶಾಲೆಯಲ್ಲಿಯ ಗೆಳೆತನ.

೧೯೨೯:—೧. ಎಂಥ ಕ್ಷುದ್ರವಿದ್ದರೂ-ಮನೆಯಂಥ ಸ್ಥಲವಿಲ್ಲ. ೨. ಶಾಲೆಯ ವಿವಾದ ಮಂಡಲ. ೩. ನನ್ನ ಸಂತಸದ ಸಂಚಾರ. ೪. ಬಡವರಿಗೆ ಧರ್ಮಾರ್ಥ ಔಷಧ ಉಪಚಾರವು.

೧೯೩೦:—೧. ಭಾರತೀಯ ಗ್ರಾಮಜೀವನದಲ್ಲಿ ಬಾವಿಯ ಸ್ಥಾನ. ೨. ಭಾರತೀಯ ಉಗಿಬಂಡಿಯಲ್ಲಿಯ ಮೂರನೆಯ ತರಗತಿಯ ಡಬ್ಬಿಯಲ್ಲಿ ನೀವು ಕಾಣುವ ಜನರು. ೩. ಪರೀಕ್ಷೆಗಳು. ೪. ಮೋಟಾರುಗಳು ಬಂದು ನಮ್ಮ ಜೀವನದಲ್ಲಿ ಮಾಡಿದ ಮಾರ್ಪಾಟುಗಳು.

೧೯೩೧:—೧. ಕುಡುಕತನದ ದುಷ್ಪರಿಣಾಮಗಳು. ೨. ತಾಯಿಯ ಮಮತೆ. ೩. ನಿನ್ನ ಆದರ್ಶ ವಿದ್ಯಾರ್ಥಿ-ನಾಯಕ.

೧೯೩೨:—೧. ಭಾರತೀಯ ಮೋಡಿಕಾರ. ೨. ಧರ್ಮ-ಭ್ರಮ. ೩. ವೃದ್ಧ ಬೆಕ್ಕಿನ ಆತ್ಮಚರಿತ್ರೆ. ೪. ಆಧುನಿಕ ಜೀವನದಲ್ಲಿ ಹೆಂಗಳೆಯರ ಸ್ಥಾನ.

೧೯೩೩:—೧. 'ನನಗೆ ೧೦೦೦ ರೂಪಾಯಿ ದೊರೆತರೆ ನಾನು ಏನು ಮಾಡಬಹುದು?,

೨. ವಿಶ್ರಾಂತಿಯನ್ನು ಸರಿಯಾಗಿ ಉಪಯೋಗಿಸುವ ರೀತಿ. ೩. ಮೆರವಣಿಗೆ. ೪. ಕಾಲ್ನಡಗೆಯ ಪ್ರವಾಸ. ೫. ಹುಟ್ಟುಗುಣ ಸುಟ್ಟರೂ ಹೋಗದು, ೬. ಪುರುಷಪ್ರಯತ್ನ-ದೈವಾಯತ್ತ. ೭. ಕನ್ನಡದಲ್ಲಿ ಅಭಿರುಚಿ ಹೆಚ್ಚಿಸುವ ಬಗೆ. ೮. ಕನ್ನಡ ನಾಡಿನಲ್ಲಿ ಒಕ್ಕಟ್ಟಿನ ಅವಶ್ಯಕತೆ.

೧೯೩೪:—೧. ಸಜ್ಜನರ ಸಂಗವು ಹೆಜ್ಜೇನು ಸವಿದಂತೆ. ೨. ಹಳ್ಳಿಗಳ ಸುಧಾರಣೆ ೩. ನನ್ನ ಮೋಟಾರಿನಲ್ಲಿಯ ಮೊದಲನೆಯ ಪ್ರವಾಸವು.

೧೯೩೫:—೧. 'ಮಾತು ಬಲ್ಲವ ಮಾಣಿಕತಂದ' ೨. ಕನ್ನಡಿಗನ ವಾಚನಾಭಿರುಚಿಯೂ ಅದನ್ನು ಬೆಳೆಸುವ ಉಪಾಯವೂ ೩. ಪ್ರೌಢವಿವಾಹವೂ ಅದರ ಗುಣದೋಷಗಳೂ. ೪. ಬರಗಾಲದಲ್ಲಿ ಕಾಣಬಹುದಾದ ನೋಟ.

೧೯೩೬:—೧. ನೀವು ನೋಡಿದ ಐತಿಹಾಸಿಕ ಸ್ಥಳ. ೨. ಚಲನಚಿತ್ರಗಳಿಂದ ಸಮಾಜಕ್ಕಾಗುವ ಪ್ರಯೋಜನ. ೩. ಕನ್ನಡಿಯೊಳಗಿನ ಗಂಟಿಗಿಂತ ಕೈಯೊಳಗಿನ ದಂಟೇ ಲೇಸು. ೪. ಯುದ್ಧವು ದೇಶಹಿತಸಾಧಕವೋ ಬಾಧಕವೋ? ೫. ಮಕ್ಕಳ ಶಿಕ್ಷಣ ಮನೆಯಲ್ಲಿ. ೬. ದೀನನ ಸಿರಿಗಿಂತ ದಾನಿಯ ಬಡತನವೇ ಲೇಸು.

೧೯೩೭:—೧. ಇಂದಿನ ಜೀವನದ ಸುಖಸಾಧನಗಳು. ೨. ಆದರ್ಶ ವಿದ್ಯಾರ್ಥಿಯ ಜೀವನ ೩. ಕನ್ನಡದ ಏಳ್ಗೆಯ ಬಗ್ಗೆ ತರುಣರ ಕರ್ತವ್ಯ. ೪. ದಯವೇ ಧರ್ಮದ ಮೂಲ.

೧೯೩೮:—೧. ನಾನು ಮೆಚ್ಚಿದ ಕವಿ. ೨. ಲಾಟ್ರಿಯಲ್ಲಿ ನನಗೆ ಒಂದು ಲಕ್ಷ ರೂಪಾಯಿಗಳು ದೊರೆತರೆ ಆ ಹಣವನ್ನು ನಾನು ಹೇಗೆ ವೆಚ್ಚ ಮಾಡುವೆನು? ೩. ಇನ್ನು ಬರಬಹುದಾದ ಮಹಾಯುದ್ಧ. ೪. ನಾನು ನೋಡಿದ ಜಾತ್ರೆ ಇಲ್ಲವೆ ಪ್ರದರ್ಶನ.

೧೯೩೯:—೧. ಹಳ್ಳಿಯ ಜೀವನದ ಸುಖದುಃಖಗಳು. ೨. ಹೆಂಡಕುಡುಕರ ಬಾಳು. ೩. ಶಿಕ್ಷಣವನ್ನು ಪಡೆಯಲು ನಾನು ಅನುಭವಿಸಿದ ಕಷ್ಟಗಳು. ೪. ವಾಕ್ಪಟುಗಳು.

೧೯೪೦:—೧. ಆಕಾಶವಾಣಿ. ೨. ನಮ್ಮ ನಾಡಿನ ದೊಡ್ಡ ಹಬ್ಬಗಳು. ೩. ಯುದ್ಧಗಳಿಂದ ದೇಶಕ್ಕೆ ಬರುವ ಲಾಭಹಾನಿಗಳು. ೪ ನನ್ನ ಊರು.

೧೯೪೧:—೧. ನನ್ನ ಬಾಲ್ಯದ ಕೆಲವು ನೆನಹುಗಳು. ೨. ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು. ೩. 'ನನ್ನ ಬಾಳಿನ ಗುರಿ' ೪ ಇಂದಿನ ಸುಶಿಕ್ಷಿತ ತರುಣರ ಕರ್ತವ್ಯ.

೧೯೪೨:—೧. ಇಂದಿನ ಯುದ್ಧದ ಭೀಕರತೆ. ೨. ಅರಿಕೆಯುಳ್ಳವರ ಕೆಳೆ ಲೇಸು. ೩. ನಾನು ಭಾರತದ ಮುಖ್ಯಮಂತ್ರಿಯಾದರೆ—

೧೯೪೩:—೧. ಬರಗಾಲದ ಬವಣೆ. ೨. ಸಾಹಸ ಜೀವನ. ೩. 'ವಯಂ ವಿಕ್ರಮಕ್ಕೆ ಕಾರಣವಲ್ಲಂ'

೧೯೪೪ :—೧ ಸಾಯಬಲ್ಲವರೇ ಕೊಲ್ಲಬಲ್ಲರು. ೨ ಪ್ರವಾಸದ ತೊಡಕು ತೊಂದರೆಗಳು. ೩. ಸಾಕ್ಷರತಾಪ್ರಸಾರ. ೪. ಸಿಸ್ಸೀಮವತ್ತಿ ಮಹಾತ್ಮರ ಚರಿತಂ.

೧೯೪೫:—೧. ನನ್ನ ದಿನಚರಿ. ೨. ನಮ್ಮ ರೈತರ ಏಳಿಗೆ. ೩. ಹೊತ್ತಿಗೊದಗಿದ ಮಾತು ಸತ್ತವನು ಎದ್ದಂತೆ.

೧೯೪೬ :—೧. ನನ್ನ ಮೆಚ್ಚಿಕೆಯ ಕನ್ನಡದ ಸಾಹಿತಿ. ೨. ಯುದ್ಧ-ಕಾಲದ ರೇಲ್ವೆಪ್ರವಾಸ. ೩. ಇಂದಿನ ವಿದ್ಯಾರ್ಥಿಗಳ ಚಟುವಟಿಕೆಗಳು. ೪. ನಾನು ಕಂಡ ಚುನಾವಣೆಯ ದೃಶ್ಯ.

೧೯೪೭ :—೧. ಕಳ್ಳಪೇಟೆ. ೨. ಸಾಹಿತ್ಯವು ಜನಜೀವನದ ಪಡಿನೆಳಲು. ೩. 'ಸುಖದಿ ತಾನಿದ್ದುದೇ ರಾಜ್ಯ'. ೪. ನಾನು ಉಪಾಧ್ಯಕ್ಷನಾಗಿದ್ದರೆ—

೧೯೪೮ :— ೧. ಮಹಾತ್ಮಾ ಗಾಂಧಿಯವರ ಸಂದೇಶ. ೨. ಸ್ವಾತಂತ್ರ್ಯ ದಿನೋತ್ಸವ. ೩. ಹಳ್ಳಿಗಳ ಪುನರ್ರಚನೆ. ೪. ಹಳೆ ಅಂಗಿಯ ಆತ್ಮಚರಿತ್ರೆ.

೧೯೪೯:—೧. ತಾಳಿದವನೆ ಬಾಳಿಯಾನು. ೨. ನನ್ನ ಬಾಲ್ಯದ ಸವಿನೆನಪುಗಳು. ೩. ನಾನು ನೋಡಿದ ಒಂದು ಜಾತ್ರೆ.

೧೯೫೦ :— ೧. ಶಿಕ್ಷಣಕ್ಷೇತ್ರದಲ್ಲಿ ಬಾಪೂಜಿಯ ಮಹತ್ವ. ೨. ಭಾರತ ಪ್ರಜಾರಾಜ್ಯ ದಿನದ ಉತ್ಸವ. ೩. ನನ್ನ ಆದರ್ಶ ನಾಯಕ.

# ನಾಲ್ಕನೆಯ ಭಾಗ—ಬೇರೆ ಬರಹಗಳು.

## ೧. ಪೀಠಿಕೆ.

**ವಿಷಯ ವಿವರ:**—ಇಲ್ಲಿ ಬೇರೆ ಕೆಲವು ಮಹತ್ವದ ಲೇಖನ ಪ್ರಭೇದಗಳ ವಿಷಯವಾಗಿ ವಿಚಾರಿಸಬೇಕಾಗಿದೆ. ಅವೆಲ್ಲ ನಮ್ಮ ನವಜೀವನಕ್ಕೆ ಅವಶ್ಯಕವಾದವುಗಳು. ಅವನ್ನು ಪರಿಶ್ರಮಪೂರ್ವಕವಾಗಿ ಅಭ್ಯಸಿಸಿ ಪ್ರತಿಯೊಬ್ಬರೂ ಕೈವಶಮಾಡಿಕೊಳ್ಳಬೇಕು. (೧) ಅವುಗಳಲ್ಲಿ **ಓಲೆಗಳಂತೂ** ನಮ್ಮ ದೈನಂದಿನ ಜೀವನದಲ್ಲಿಯ ಅತಿ ಅಗತ್ಯದ ವಿಷಯ. ಆದುದರಿಂದ ಅವರ ಬೇರೆ ಬೇರೆ ಬಗೆಗಳ ಪರಿಚಯವನ್ನು ಮೊದಲು ಮಾಡಿಕೊಡಲಾಗಿದೆ. (೨) ನಾವು ಪ್ರತಿದಿನ ನಮ್ಮ ಬಂಧುಗಳೊಡನೆಯೂ ಬೇರೆ ಜನರೊಡನೆಯೂ ನಡೆಯಿಸುವಂಥ **ಸಂವಾದವನ್ನು** ಬರೆದಿಡುವ ರೂಢಿಯಿಂದ ಅದರಲ್ಲಿಯ ಕೌಶಲ್ಯವು ಹೆಚ್ಚುವದುಂಟು. ಮತ್ತು ಇದರಲ್ಲಿ ಪ್ರಗತಿ ಹೊಂದಿದವರಿಗೆ ನಾಟಕ ಬರೆಯುವ ಕೈವಾಡವು ಅವಗತವಾಗುವುದು. (೩) ನಮ್ಮ ವಿಶಾಲ

ವಾಗಲಿರುವ ಜೀವನದಲ್ಲಿ ಪ್ರಪಂಚದಲ್ಲಿಯ ಎಲ್ಲ ಗ್ರಂಥಾಂತರ ಜ್ಞಾನದ ಅಭಿವ್ಯಕ್ತಿಯು ಅಷ್ಟಿಷ್ಟಲ್ಲ. ಅವನ್ನೆಲ್ಲ ನಮ್ಮ ಭಾಷೆಯಲ್ಲಿ ತರಬೇಕಾದರೆ ನಮ್ಮಲ್ಲಿ **ಭಾಷಾಂತರ** ನೈಪುಣ್ಯವು ಇರಬೇಕು. ಆದುದರಿಂದ ಅವನ್ನು ಮುಂದೆ ವಿವರಿಸುವೆವು. ಕೊನೆಗೆ (೪) ಗದ್ಯವಾಗಲಿ, ಪದ್ಯವಾಗಲಿ, ಯಾವುದೇ ಬರಹವಿರಲಿ, ಅದನ್ನು ಚೆನ್ನಾಗಿ ವಿಮರ್ಶಿಸಿ ಅದರ ರಸವನ್ನು ಸವಿಯುವ ಶಕ್ತಿಯೂ ಪ್ರತಿಯೊಬ್ಬರಿಗೆ ಬೇಕೆಬೇಕು. ಈ **ಗುಣಗ್ರಹಣವು** ಅಭ್ಯಾಸದಿಂದ ಬಲಿಯುವ ಶಕ್ತಿ. ಅದು ಸರಿಯಾಗಿ ಬಲಿಯುತ್ತಿದ್ದರೆ ನಮಗೆ **ಕಸವಾವುದು ರಸವಾವುದು** ಎಂಬುದು ತಿಳಿಯುವದು. ಮತ್ತು ನಾವು ನಮ್ಮೆದುರಿಗಿದ್ದ ಸಾಹಿತ್ಯದ ಬೆಲೆಯನ್ನು ಕಟ್ಟಲು ಸಮರ್ಥರಾಗುವೆವು. ಅದಿಲ್ಲದಿದ್ದರೂ ಅದರ ರುಚಿಯನ್ನು ಸವಿಯಲಂತೂ ಕಲಿತೇ ತೀರುವೆವು. ಆದುದರಿಂದ ಅದರ ವಿಷಯವಾಗಿಯೂ ಸಾಧ್ಯವಿದ್ದಷ್ಟು ಸಂಕ್ಷೇಪದಿಂದ ಕೆಲವು ಮಾತುಗಳನ್ನು ಹೇಳಿ ಈ ವಿಭಾಗವನ್ನು ಮುಗಿಸುವೆವು.

## ೨. ಓಲೆಗಳು

**೧. ಅಂದರೇನು** :— **ಓಲೆಗಳೆಂದರೆ** ಪತ್ರಗಳು, ಕಾಗದಗಳು. ನಿತ್ಯದ ವ್ಯವಹಾರದಲ್ಲಿ ನಾವು ಅವನ್ನು ಬರೆದು ದೂರದಲ್ಲಿದ್ದ ಸಂಬಂಧಿಕರಿಗೆ ನಮ್ಮ ವಾರ್ತೆಯನ್ನಾಗಲಿ ಅಭಿಪ್ರಾಯವನ್ನಾಗಲಿ ತಿಳಿಸುವೆವು. ಅದೇ ಮೇರೆಗೆ ಅವರಿಂದಲೂ ನಮಗೆ ಬೇಕಾದ ಅರಿಕೆಯನ್ನು ಕೇಳಿಕೊಳ್ಳುವೆವು. ಆದುದರಿಂದ ಅದೊಂದು ದೂರ ದೂರ ಅಗಲಿದ್ದ ಜನರಲ್ಲಿಯ ಸಂವಾದವೆಂದರೂ ಸಲ್ಲುವುದು. ಪ್ರತ್ಯಕ್ಷ ನಡೆಯುವಲ್ಲ, ಕಾಗದದ ಮುಖಾಂತರ ಸಾಗಿದುದು ಇಷ್ಟೇ !

**೨. ಬಗೆಗಳು** :— ನಾವು ಪ್ರತಿದಿನ ಅನೇಕ ಜನರೊಡನೆ ಸಂಭಾಷಣೆಯನ್ನು ಮಾಡುವಂತೆ ಅನೇಕರೊಡನೆ ಪತ್ರವ್ಯವಹಾರವನ್ನು ನಡೆಸುವೆವು. ಅವರಲ್ಲಿ ಹಿರಿಯರಿರಬಹುದು, ಕಿರಿಯರಿರಬಹುದು; ಪರಿಚಿತರಿರಬಹುದು, ಅಪರಿಚಿತರಿರಬಹುದು; ವರ್ತಕರಿರಬಹುದು, ಅಧಿಕಾರಸ್ಥರಿರಬಹುದು; ಪುರುಷರಿರಬಹುದು, ಸ್ತ್ರೀಯರಿರಬಹುದು. ಅವರವರಿಗೆ ಬರೆಯಬೇಕಾದ ರೀತಿಯಲ್ಲಿಯೂ ಒಕ್ಕಣೆಯಲ್ಲಿಯೂ ಭೇದವಿರುವುದು. ಮಾತಿನಲ್ಲಿಯೂ ಹೀಗೇನು ಆಗುವದಿಲ್ಲವೇ ? ಕೆಲವರೊಡನೆ ನಾವು ಮನಬಿಚ್ಚಿ ನುಡಿಯುವೆವು. ಕೆಲವರೊಡನೆ ನಡೆದ ಮಾತು ತೀರ ಔಪಚಾರಿಕ. ಮೇಲಾಗಿ ಆಯಾ

ಜನರಿಗೆ ಆದಷ್ಟು ರೀತಿಯಿಂದ ಮರ್ಯಾದೆಯನ್ನು ತೋರಿಸುವುದು ಶಿಷ್ಟಾಚಾರ. ಆದುದರಿಂದ ಇವೆಲ್ಲ ಸಂಗತಿಗಳ ಮೂಲಕವೂ ವ್ಯವಹಾರದ ಸ್ವರೂಪ–ಭಿನ್ನತೆಯ ಮೂಲಕವೂ ನಮ್ಮ ಭಾವನೆಗಳ ರೀತಿಯಲ್ಲಿ ಬದಲಾವಣೆಗಳಾಗುವುದು ಅಪರಿಹಾರ್ಯ. ಈ ರೀತಿಯನ್ನು ಅನುಲಕ್ಷಿಸಿ ಕಾಗದಗಳಲ್ಲಿ ಎರಡು ವರ್ಗಗಳನ್ನು ಕಲ್ಪಿಸಬಹುದು. (ಅ) **ಒಂದು ಪ್ರಾಪಂಚಿಕ; ಆತ್ಮೀಯವು** (ಆ) **ಇನ್ನೊಂದು ವ್ಯಾವಹಾರಿಕ.**

(ಅ) **ಪ್ರಾಪಂಚಿಕ** ಓಲೆಗಳು. ನಮ್ಮ ಬಂಧುಬಳಗದವರಿಗೆ, ಆಪ್ತೇಷ್ಟರಿಗೆ ಬರೆದವುಗಳು. ಅವುಗಳಲ್ಲಿ ನಾವು ನಮ್ಮ ಪ್ರಾಪಂಚಿಕ ಸುಖದುಃಖಗಳನ್ನು ಮುಚ್ಚುಮರೆಯಿಲ್ಲದೆ ತೋಡಿಕೊಂಡಿರುವೆವು. ನಮ್ಮ ಸ್ವಂತ ಜೀವನದ ಎಲ್ಲ ವಿಷಯಗಳನ್ನೂ ಅವರಿಗರುಹಿ ಅವರ ವೃತ್ತಾಂತವನ್ನರಿತುಕೊಳ್ಳಲು ಹವಣಿಸುವೆವು. ಆದುದರಿಂದ ಅವುಗಳಲ್ಲಿ ಪ್ರತಿಸಾಲಿನಲ್ಲಿ ಪ್ರೀತಿಯು **ಹೊರಸೂಸ**ಬೇಕು. ಅವು **ಬರೆವ ಮಾತು**ಗಳಂತಿರಬೇಕು. **ಮಾತಿನ ಸಹಜ ಸರಲತೆಯು** ಅಲ್ಲಿ ಕಂಗೊಳಿಸಬೇಕು. ಆದರೂ ಅದರಲ್ಲಿ ಒಂದು ಕ್ರಮ, ತರ್ಕಬದ್ಧತೆ ಇರಬೇಕು.

(ಆ) **ವ್ಯಾವಹಾರಿಕ** ಓಲೆಗಳು. ಅಪರಿಚಿತರೊಡನೆ ನಡೆಯುತ್ತಿರುವ, ನಡೆಯಿಸಬೇಕಾದ ವ್ಯವಹಾರದ ಒಂದು ಸಾಧನ. ವ್ಯವಹಾರವು ಸರಿಯಾಗಿ ಸಾಗಲು ಅವಶ್ಯಕವಾದ ತಿಳಿವು ಅವುಗಳಲ್ಲಿದ್ದರೆ ಸಾಕು. ನಮ್ಮ ಅಭಿಪ್ರಾಯವು ಅವರಿಗೆ ಚೆನ್ನಾಗಿ ಅರಿಕೆಯಾಯಿತೆಂದರೆ ತೀರಿತು. ಜತೆಯಲ್ಲಿ ಅವು ಕೆಲವು ಶಿಷ್ಟಾಚಾರದ ಸಂಕೇತಗಳನ್ನು ಒಳಗೊಂಡಿರಬೇಕು. ಇವು **ತೀರ ಔಪಚಾರಿಕವಾದವುಗಳು. ಸುಲಭತೆ, ಸಂಕ್ಷೇಪ, ಉಪಚಾರಗಳು** ಇವುಗಳಲ್ಲಿರಬೇಕಾದ ಪ್ರಧಾನ ಗುಣಗಳು. ಇವುಗಳಲ್ಲಿಯೂ ನಾಲ್ಕು ವಿಧಗಳಿವೆ. (೧) ವರ್ತಕರಿಗೆ ಬರೆಯುವ ಬೇಡಿಕೆಗಳು. (೨) ಅಧಿಕಾರಿಗಳಿಗೆ ಕಳುಹುವ **ಅರ್ಜಿ**ಗಳು. (೩) ಸಂಪಾದಕರಿಗೆ ಸಲ್ಲಿಸುವ ವರದಿಗಳು. (೪) ಔಪಚಾರಿಕ ಔತಣಗಳು. ಒಂದೊಂದಕ್ಕೆ ಒಂದೊಂದು ಮಾದರಿ. ಅದರ ಅನುಕರಣವು ಇದನ್ನು ಬರೆಯಲು ಕಲಿಸುವ ಸಾಧನ.

೨. **ಬರೆವ ರೀತಿ** :—ನಿಬಂಧದಂತೆ ಓಲೆಗಳಲ್ಲಿಯೂ ಮೂರು ಅಂಗಗಳಿವೆ. ಅವಕ್ಕೂ ಒಂದು **ಆದಿಯಿದೆ,** ಒಂದು **ಮಧ್ಯವಿದೆ,** ಒಂದು **ಕೊನೆಯಿದೆ.** ಅವೆಲ್ಲ ಒಂದು ಬಗೆಯ ವಿಶೇಷ ರೀತಿಯವು ಇರಬೇಕೆಂದು ಸಂಪ್ರ

ದಾಯ. ಈ ಸಂಪ್ರದಾಯದಲ್ಲಿ ಕಾಲಕಾಲಕ್ಕೆ ಹಲಕೆಲವು ಬದಲುಗಳು ಆಗುವು ದುಂಟು. ಆಮೇರೆಗೆ ಹಿಂದಿನ ಇಂದಿನ ಪದ್ಧತಿಗಳಲ್ಲಿಯೂ ಕೆಲವು ಮಾರ್ಪಾಟು ಗಳಾಗಿವೆ. ಅವಿನ್ನೂ ಗ್ರಂಥಗತವಾಗಿಲ್ಲವಾದರೂ ಪ್ರಚಾರದಲ್ಲಿವೆ. ಆದುದರಿಂದ ನಾವಿಲ್ಲಿ ಹೊಸಕಾಲಕ್ಕೆ ತಕ್ಕರೀತಿಯಲ್ಲಿ ಬದಲಾದ ಕೆಲವು ಪ್ರಚಲಿತ ಅಂಶ ಗಳನ್ನೂ ಕೆಳಗೆ ಕಾಣಿಸುವ ಸಾಹಸವನ್ನು ಮಾಡಿರುವೆವು. ವ್ಯವಹಾರಕ್ಷೇತ್ರದಲ್ಲಿ ಸ್ವೀಕೃತವಾದ ಪದ್ಧತಿಯು ತತ್ವಕ್ಷೇತ್ರದಲ್ಲಿಯೂ ಮನ್ನಣೆಯನ್ನು ಪಡೆಯು ವದೆಂಬ ಆಶೆ.

## (ಅ) ಪ್ರಾಪಂಚಿಕ ಓಲೆಗಳು

**(೧) ಪಾರಂಭ:—**

**(೧) ಕುಶಲ ಅಥವಾ ಕ್ಷೇಮ:**—ಸತ್ತ ಸುದ್ದಿಯನ್ನುಳಿದು ಬೇರೆ ಕಾಗದಗಳಲ್ಲೆಲ್ಲ ಇದನ್ನು ಬರೆಯಬೇಕು. ಕಾಗದದ ಎಡಮಗ್ಗುಲಿನ ಮೂಲೆ ಯಲ್ಲಿದನ್ನು ಬರೆವ ರೂಢಿ. ಇದೀಗ ಅದು ಅಳಿಯಲಿದೆ.

**(೨) ಶ್ರೀಕಾರ:**—ಇದರ ಬದಲು **ಓಂ! ಶ್ರೀರಾಮ-ಶ್ರೀಗುರು ಪ್ರಸನ್ನ** ಇತ್ಯಾದಿಗಳನ್ನು ಬರೆಯುವ ಪದ್ಧತಿಯಿದೆ. ಅದನ್ನು ಕಾಗದದ ತೀರ ಮೇಲಕ್ಕೆ ಮಧ್ಯದಲ್ಲಿ ಬರೆಯುವರು. ಶಿಲವಾಗುತ್ತಿದ್ದ ಈ ಪದ್ಧತಿಯನ್ನು ಪುನರುಜ್ಜೀವಿಸಬೇಕು.

**(೩) ಸ್ಥಲಕಾಲ:**—ಕಾಗದವನ್ನು ಬರೆದ ಊರು-ತಾರೀಖುಗಳನ್ನು ಕಾಗದದ ಬಲಗಡೆಯ ಮೂಲೆಯಲ್ಲಿ ಬರೆಯಬೇಕು.

**(೪) ಒಕ್ಕಣೆ:**—ಯಾರಿಗೆ ಕಾಗದವನ್ನು ಬರೆಯುವೆವೊ ಅವರ ಮರ್ಯಾದೆಗೆ ತಕ್ಕ ಮಾತುಗಳಿಗೆ ಈ ಹೆಸರು. ಒಕ್ಕಣೆಯಲ್ಲಿ ಸಾಕಷ್ಟು ವೈವಿಧ್ಯವಿದೆ. ಕೆಲವೊಂದನ್ನು ಕೆಳಗೆ ಕಾಣಿಸಿರುವೆವು.

**ತಂದೆಯವರಿಗೆ:**—(೧) ತೀರ್ಥರೂಪರ ಸನ್ನಿಧಿಗೆ, ಬಾಲಕನ ಬಿನ್ನಹ.

(೨) ಪೂಜ್ಯ ತೀರ್ಥರೂಪರಿಗೆ, ಬಾಲಕನ ವಂದನೆಗಳು.

**ತಾಯಿಯವರಿಗೆ:**—(೧) ಮಾತೃಶ್ರೀಯವರ ಸನ್ನಿಧಿಗೆ, ಬಾಲಕನ ಬಿನ್ನಹ. (೨) ಪೂಜ್ಯ ಮಾತೃಶ್ರೀಯವರಿಗೆ, ಬಾಲಕನ ವಂದನೆಗಳು.

**ಬೇರೆ ಹಿರಿಯರಿಗೆ:**—ಪೂಜ್ಯ ಹಿರಿಯರೇ! ವಂದನೆಗಳು.

**ಅಪರಿಚಿತರಿಗೆ:**—ಮಹನೀಯರೆ! ವಂದನೆಗಳು! ಲಿಂಗವಂತರಿದ್ದರೆ-ಶರಣುಶರಣಾರ್ಥಿ, ಜೈನರಿದ್ದರೆ-ಜಯಜಿನೇಂದ್ರ, ಗುರ್ಜ್ಜರರಿದ್ದರೆ-ಜಯ

ಗೋಪಾಲ. ಇತರ ಹಿಂದೂಗಳಿದ್ದರೆ-ರಾಮರಾಮ! ಮುಸಲ್ಮಾನರಿದ್ದರೆ–ಸಲಾಮು.

**ಕಿರಿಯರಿಗೆ:**—ಪ್ರಿಯ ಮಗು, (ಹೆಸರು) ಒಲವು ಅಥವಾ ಆಶೀರ್ವಾದಗಳು.

**ಗೆಳೆಯರಿಗೆ:**—ಪ್ರಿಯನೇ! ಗೆಳೆಯನೇ! ಒಲವಿನ ನಮನಗಳು.

**ಹೆಂಗಳೆಯರಿಗೆ:**—ಶ್ರೀಮತಿಯವರೆ ವಂದನೆಗಳು!

**(೨) ಮಧ್ಯಭಾಗ:**—

ಇದರಲ್ಲಿ ತಾವು ತಿಳಿಸಬೇಕಾದ ಸಂಗತಿಗಳನ್ನು ಬರೆಯಬೇಕು. ಅದನ್ನು ಪ್ರಾರಂಭಿಸುವ ಪೂರ್ವದಲ್ಲಿ 'ಸಾಂಪ್ರತ- ತರುವಾಯ' ಇವುಗಳಲ್ಲೊಂದನ್ನು ಬರೆವ ಪದ್ಧತಿ ಇತ್ತು; ಇತ್ತೀಚೆಗೆ ಅದು ಅಳಿಯುತಿದೆ. ನಿಬಂಧದಂತೆ ಇದರಲ್ಲಿಯೂ ಬೇರೆಬೇರೆ ವಿಷಯಗಳನ್ನು ಬೇರೆಬೇರೆ ವಾಕ್ಯವೃಂದಗಳಲ್ಲಿ ಬರೆಯಬೇಕು. ಭಾಷೆಯು ತಿಳಿಯಾಗಿರಲಿ! ಸಾಧ್ಯವಿದ್ದಮಟ್ಟಿಗೆ ಅದು ನಾವಾಡುವ ಮಾತನ್ನು ಹೋಲಲಿ!

**(೩) ಕೊನೆ:**—

ಪ್ರಾರಂಭದಂತೆ ಕೊನೆಗೂ ಕೆಲವು ಮರ್ಯಾದೆಯನ್ನು ಸೂಚಿಸುವ ಒಕ್ಕಣೆಗಳನ್ನು ಬರೆವ ಪದ್ಧತಿಯಿದೆ. ಅದನ್ನು ಬರೆದ ತರುವಾಯ ಬರೆದವರ ರುಜು–ಸಹಿ ಇರಬೇಕು. ಅವುಗಳಲ್ಲಿ ಕೆಲವನ್ನು ಕೆಳಗೆ ಕೊಟ್ಟಿದೆ.

**ಹಿರಿಯರಿಗೆ:**—ಇತಿ (ಇಂತೀ) ಬಿನ್ನಹ (ವಿಜ್ಞಾಪನೆಗಳು).

ನಿಮ್ಮೊಲವಿನ,
ಶಾಮಸುಂದರ

**ಕಿರಿಯರಿಗೆ:**—ಇತಿ (ಇಂತೀ) ಆಶೀರ್ವಾದಗಳು,

ನಿಮ್ಮನ್ನು ಹರಸುವ,
ಶಾಮಸುಂದರ.

**ಸರಿಕರಿಗೆ:**— ಇತಿ (ಇಂತೀ) ಒಲವು

ನಿನ್ನವನೇ
ಶಾಮಸುಂದರ.

(೩) ವಿಳಾಸ :—

(ಅ) ಕಾಗದವನ್ನು ಯಾರಿಗೆ ಬರೆದಿದೆಯೋ ಅವರ ಊರು, ಕೇರಿ ಮುಂತಾದ ವಿವರಗಳಿಗೆ '**ವಿಳಾಸ**' (Address) ಎಂಬ ಹೆಸರು. ವಿಳಾಸವನ್ನು ಬರೆಯುವಾಗಲೂ ಹೆಸರುಗಳ ಹಿಂದೆ ಕೆಲವೊಂದು ಒಕ್ಕಣೆಗಳನ್ನು ಬರೆಯುವದುಂಟು.

**ಹಿರಿಯರಿದ್ದರೆ:—ತೀರ್ಥರೂಪ ಮಹಾರಾಜಶ್ರೀ-ಬ್ರಹ್ಮಶ್ರೀ** (ವೈದಿಕರಿಗೆ)-**ಶ್ರೀಮಾನ್** ಇವುಗಳಲ್ಲೊಂದನ್ನು ಔಚಿತ್ಯವನ್ನರಿತು ಉಪಯೋಗಿಸಿರಿ. **ಪ್ರೊಫೇಸರ, ಡಾಕ್ಟರ್, ಸರ್** ಇತ್ಯಾದಿ ಆಂಗ್ಲ ಉಪಪದಗಳನ್ನು ಹಾಗೆಯೆ ಇಡಬೇಕು. ಆಗ ಮೇಲಿನ ಒಕ್ಕಣೆಗಳನ್ನುಪಯೋಗಿಸಬಾರದು.

**ಕಿರಿಯರಿದ್ದರೆ:— ಚಿರಂಜೀವಿ, ಶ್ರೀಯುತ**

**ಸರಿಕರಿಗೆ:— ಶ್ರೀಯುತ, ರಾಜಮಾನ್ಯರಾಜಶ್ರೀ.**

**ಹೆಂಗಸರಿಗೆ:— ಶ್ರೀಮತಿ ಸೌಭಾಗ್ಯವತಿ** (ಸುಮಂಗಲೆಯರಿಗೆ) **ಗಂಗಾಭಾಗೀರಥಿ** (ವಿಧವೆಯರಿಗೆ)

(ಆ) ಆಗಾಗ ಇವುಗಳ ಸಂಕ್ಷೇಪರೂಪಗಳನ್ನು ಉಪಯೋಗಿಸುವರು. ಕಾರ್ಡುಗಳಲ್ಲಿ ಬರೆಯುವಾಗ ಅವುಗಳ ಉಪಯೋಗ ವಿಶೇಷವಾಗಿ ಆಗುವುದು. ಅವು ಯಾವುವೆಂದರೆ—

**ತೀ.** (ತೀರ್ಥರೂಪ) **ಚಿ.** (ಚಿರಂಜೀವ)
**ಮ. ರಾ.** (ಮಹಾರಾಜಶ್ರೀ) **ಸೌ.** (ಸೌಭಾಗ್ಯವತಿ)
**ಡಾ.** (ಡಾಕ್ಟರ) **ಶ್ರೀ.** (ಶ್ರೀಮಾನ್-ಶ್ರೀಯುತ)
**ಪ್ರೊ.** (ಪ್ರೊಫೇಸರ) **ರಾ. ರಾ.** (ರಾಜಮಾನ್ಯರಾಜಶ್ರೀ)
**ರಾ. ಬ.** (ರಾವಬಹಾದ್ದೂರ) **ಗಂ. ಭಾ.** (ಗಂಗಾಭಾಗೀರಥಿ)
**ರಾ. ಸಾ.** (ರಾವಸಾಹೇಬ)

(ಇ) ಬಿರುದುಗಳಲ್ಲಿ **ರಾವಸಾಹೇಬ-ರಾಜಸಭಾಭೂಷಣ** ಇತ್ಯಾದಿಗಳನ್ನು, ಅವನ್ನು ಪಡೆದ ಮಹನೀಯರ ಹೆಸರುಗಳ ಹಿಂದೆಯೂ **ಬಿ. ಎ., ಎಮ್. ಎ.** ಇತ್ಯಾದಿಗಳನ್ನು ಅವುಗಳ ಮುಂದೆಯೂ ಇಡಬೇಕು.

## (ಈ) ವಿಳಾಸಗಳ ಮಾದರಿಗಳು :—

### ೧ನೆಯ ಮಾದರಿ

ಟಿಕೇಟು
Stamp

ಶ್ರೀಮಾನ್

**ದೇಸಾಯಿ ಗೋವಿಂದರಾಯರು**

ಎಮ್. ಎ. ಇವರಿಗೆ

ಹನುಮನ ಬೀದಿ

**ಬೆಳಗಾಂವಿ.**

### ೨ನೆಯ ಮಾದರಿ.

ಟಿಕೇಟು
Stamp

ಮ. ರಾ.

**ಕುಲಕರ್ಣಿ ಶ್ರೀನಿವಾಸರಾಯರು**

೧೫೦ ಶನಿವಾರಪೇಟೆ

**ಪುಣೆ.**

ಸ. ಹಾ. ಸಾವುಕಾರ
ಶಿಕ್ಷಕರು, ಅಥಣಿ.

**ಸೂಚನೆ :—**

(೧) ವಿಳಾಸದ ಎರಡನೆಯ ಮಾದರಿಯಲ್ಲಿ ಓಲೆ ಬರೆದವರ ವಿಳಾಸವನ್ನು ಎಡಬದಿಯ ಕೆಳಗಿನ ಮೂಲೆಯಲ್ಲಿ ಬರೆಯಲಾಗಿದೆ. ಇದೊಂದು ಸರಿಯಾದ ರೀತಿ. ಇದರಿಂದ ಕೆಲಕಾರಣಗಳ ಮೂಲಕ ಓಲೆಯು ಬರೆಯಲ್ಪಟ್ಟವರಿಗೆ ತಲುಪದಿದ್ದರೆ ಅದನ್ನು ಬರೆದವರಿಗೆ ತಿರುಗಿ ಕಳುಹಲು ಅಂಚೆಯವರಿಗೆ ಅನುಕೂಲ ಆಗುವದು.

(೨) ವಿಳಾಸವನ್ನು **ಸುವಾಚ್ಯವಾಗಿ ಬರೆಯಬೇಕು.** ಮನೆಯ

**ನಂಬರು—ಓಣಿಯ (ಬೀದಿಯ) ಹೆಸರು—ಪೋಸ್ಟ** ಇತ್ಯಾದಿಗಳನ್ನು ಸರಿಯಾಗಿ ಬರೆಯಬೇಕು.

## (ಅ) ವ್ಯಾವಹಾರಿಕ ಓಲೆಗಳು

**(೧) ವರ್ತಕರಿಗೆ:—**

(೧) ವಿಷಯವು ಔಪಚಾರಿಕವಿರುವದು. ಅದನ್ನು ಸ್ವಲ್ಪದರಲ್ಲಿ ತಿಳಿಯಾಗಿಯೂ ಅಚ್ಚುಕಟ್ಟಾಗಿಯೂ ಬರೆಯಬೇಕು. ಅದಕ್ಕಾಗಿ ಕೆಳಗೆ ಕಾಣಿಸಿದಂತಹ ಔಪಚಾರಿಕ ವಿಷಯವನ್ನು ಸೂಚಿಸುವ ಕೆಲವು ಬರಹದ ರೀತಿಗಳನ್ನರಿತುಕೊಳ್ಳಬೇಕು. ಉದಾ:— **ದಯವಿಟ್ಟು ಕೆಳಗಿನ ವಸ್ತುಗಳನ್ನು ಕಳುಹುವಿರಾ? ಸಾಧ್ಯವಿದ್ದಮಟ್ಟಿಗೆ ಬೇಗ ಕಳುಹಿದರೆ ಉಪಕಾರ.**

(೨) ಸರಕುಗಳನ್ನು ತರಿಸುವದಿದ್ದರೆ, ಅವುಗಳ ಹೆಸರುಗಳನ್ನೂ ಕ್ರಯವನ್ನೂ ಸುವಾಚ್ಯವಾಗಿ ಬರೆಯಬೇಕು.

(೩) ಒಕ್ಕಣೆಯನ್ನೂ ವಿಳಾಸವನ್ನೂ ಅಪರಿಚಿತರಿಗೆ ಬರೆಯುವ ಓಲೆಯಲ್ಲಿ ಬರೆಯುವಂತೆ ಬರೆಯಿರಿ.

**(೨) ಅಧಿಕಾರಿಗಳಿಗೆ:—**

ಸರಕಾರದ ಅಧಿಕಾರಿಗಳಿಗೆ ಬರೆಯುವ ಅರ್ಜಿಗಳ ಪದ್ಧತಿಯು ಸಾಮಾನ್ಯ ಓಲೆಗಿಂತ ಸ್ವಲ್ಪ ಬೇರೆಯಿರುವುದು. ಅದನ್ನು ಮುಂದೆ ಕಾಣಬಹುದು.

**(೧) ಪ್ರಾರಂಭ:—**

**(ಅ) ಒಕ್ಕಣೆ:—** ಆಂಗ್ಲ ಅಧಿಕಾರಿಗಳಿಗೆ **ಮೆಹರ್ಬಾನ್** ಎಂತಲೂ, ಹಿಂದೂ ಅಧಿಕಾರಿಗಳಿಗೆ **ರಾವಸಾಹೇಬ** ಎಂತಲೂ, ಮುಸಲ್ಮಾನ ಅಧಿಕಾರಿಗಳಿಗೆ **ಖಾನಸಾಹೇಬ** ಎಂತಲೂ ಬರೆಯಬೇಕು. ಅದನ್ನು ಬರೆಯುವದು ಕೆಳಗಿನಂತೆ:—

**ಮೆಹರ್ಬಾನ್,**
**ಕಲೆಕ್ಟರ್ ಸಾಹೇಬ, ಜಿಲ್ಲಾ ಬೆಳಗಾಂವಿ ಇವರ ಸನ್ನಿಧಿಗೆ—**

**(ಆ) ಬಿನ್ನಹ:**—ತರುವಾಯ ಅರ್ಜಿಯನ್ನು ಕೆಳಗಿನಂತೆ ಪ್ರಾರಂಭಿಸಬೇಕು.

ಅರ್ಜದಾರ__________(ಹೆಸರು)__________(ಊರು)
__________(ತಾಲೂಕು) ಇವರ ವಿನಂತಿ ಅರ್ಜಿ ಏನೆಂದರೆ;

(೨) **ಮಧ್ಯ** :— (ಅ) ಅರ್ಜಿಯಲ್ಲಿಯ ವಿಷಯಗಳನ್ನು ಬೇರೆ ಬೇರೆ ವಾಕ್ಯವೃಂದಗಳಲ್ಲಿ ಬರೆಯಬೇಕು. ಪ್ರತಿವಾಕ್ಯವೃಂದದ ಹಿಂದೆ ೧–೨ ಇತ್ಯಾದಿ ಅಂಕಿಗಳನ್ನು ಬರೆಯಬೇಕು.

(ಆ) ಮೊದಲು ತಮ್ಮ ದೂರುಗಳನ್ನು ತಿಳಿಸಿ, ಕೊನೆಗೆ ಅವುಗಳ ಪರಿಹಾರವನ್ನು ಸೂಚಿಸಬೇಕು. ಭಾಷೆಯು ಅಸಂದಿಗ್ಧವಾದುದೂ, ಸರಲವಾದುದೂ, ವಿನಯಯುತವಾದುದೂ ಆಗಿರಲಿ.

(೩) **ಕೊನೆ** :— **ಇತಿ ತಮ್ಮ ವಿಧೇಯ** ಎಂದು ಬರೆದು ತಮ್ಮ ಅಂಕಿತವನ್ನು ಕೊಡಬೇಕು. ಎಡಗಡೆಯ ಕೆಳಗಿನ ಮೂಲೆಯಲ್ಲಿ ಅರ್ಜಿಯನ್ನು ಬರೆದ ತಾರೀಖನ್ನೂ ತಮ್ಮ ವಿಳಾಸವನ್ನೂ ಬರೆಯಬೇಕು.

(೩) **ಸಂಪಾದಕರಿಗೆ** :—

ಒಕ್ಕಣೆಯು ಬೇರೆ ಸನ್ಮಾನ್ಯ ಗೃಹಸ್ಥರಿಗೆ ಬರೆವಂತೆ ಇರಬೇಕು. ವರದಿಯಲ್ಲಿ ಮಾತ್ರ ಬರೆವವರ ಸೂಕ್ಷ್ಮ ನಿರೀಕ್ಷಣವೂ ವಿಷಯದ ವಾಸ್ತವಿಕತೆಯೂ ಕಂಡುಬರಬೇಕು. ಕೆಲವು ಸಾರ್ವಜನಿಕ ದೂರುಗಳನ್ನು ಪ್ರಕಟಿಸುವಾಗ ಅವುಗಳ ಯಥಾರ್ಥ ಸ್ವರೂಪವನ್ನು ಸರಿಯಾಗಿ ಚಿತ್ರಿಸಬೇಕು. ಅವು ಓದುಗರ ಮನಸ್ಸನ್ನು ಮುಟ್ಟಿ ಎದೆಯನ್ನು ಅಲ್ಲಾಡಿಸುವಂತೆ ಆಕರ್ಷಕವಾಗಿಯೂ ಪರಿಣಾಮಕರವಾಗಿಯೂ ಬರೆಯಬೇಕು.

(೪) **ಔತಣಗಳು** (Invitations)

**ಮದುವೆ–ಉಪನಯನ** ಇತ್ಯಾದಿ ಅನೇಕ ಸಮಾರಂಭಗಳ ಕಾಲಕ್ಕೆ ನಾವು ನಮ್ಮ ಆಪ್ತ–ಇಷ್ಟರನ್ನು ಆಮಂತ್ರಿಸುವದುಂಟು. ಅದಕ್ಕಾಗಿ ಓಲೆಗಳನ್ನು ಬರೆಯುವದುಂಟು. ಎಷ್ಟೋ ಸಲ ಇಂಥ ಓಲೆಗಳು ಔಪಚಾರಿಕ ಸ್ವರೂಪವನ್ನು ತಾಳುವವು. ಆಗ ನಾವು ಬರೆಯಬೇಕಾದ ಪದ್ಧತಿಯನ್ನು ಮುಂದೆ ಕಾಣಿಸಿದ ಮಾದರಿಗಳಲ್ಲಿ ಕಂಡು ನಿರ್ಧರಿಸಬೇಕು.

## ೪. ಮಾದರಿಯ ಓಲೆಗಳು :—

(೧)

ಕುಶಲ ! ಓಂ ಅಥಣಿ

೨೦–೬–೩೮

ಪ್ರಿಯ ಮಗು !

ಅನೇಕ ಆಶೀರ್ವಾದಗಳು !

ನೀನಲ್ಲಿ ತಲುಪಿದ ಕೂಡಲೆ ಕಾಗದವನ್ನು ಬರೆಯಲು ಹೇಳಿದ್ದೆ. ಇಷ್ಟ

ರಲ್ಲಿ ಮರೆತೆಯೇನು? ನೀನು ಹೋಗಿ ನಾಲ್ಕು ದಿನಗಳಾದವು. ಇನ್ನೂ ನಿನ್ನ ಕುಶಲವಾರ್ತೆಯು ತಿಳಿಯಲಿಲ್ಲ. ನಾವೆಲ್ಲ ಚಿಂತೆಯಲ್ಲಿರುವೆವು. ಕೂಡಲೆ ಕಾಗದವನ್ನು ಬರೆ!

ನೀನಲ್ಲಿ ಇನ್ನೂ ಹೊಸಬ. ಯಾರ ಪರಿಚಯವೂ ನಿನಗಿಲ್ಲ. ಆದುದರಿಂದ ನನ್ನ ಗೆಳೆಯರಾದ ಶ್ರೀಮಾನ್ ರಂಗರಾಯರನ್ನು ಕಂಡು ಅವರ ಸಲಹೆಯ ಮೇರೆಗೆ ವರ್ತಿಸು. ಸಲ್ಲದ ಜನರ ಸಹವಾಸದಲ್ಲಿರಬೇಡ. ಒಳ್ಳೆಯ ಗೆಳೆಯರನ್ನಾಯ್ದು ಅವರ ಜೊತೆಯಲ್ಲಿಯೇ ನಿನ್ನ ಅಭ್ಯಾಸ ಸಾಗಲಿ! ನಾನಿಲ್ಲಿ ತಿಳಿಸಿದ ಹಿರಿಯ ಆದರ್ಶವನ್ನು ಮರೆಯದಿರು! ಸದಾ ಅದು ನಿನ್ನ ಕಂಗಳೆದುರು ಹೊಳೆಯುತ್ತಿರಲಿ. ಹಾಳುಕೀಳು ಹುಳಗಳಂತೆ ಕೊಳೆಯಲು ನೀನು ಹುಟ್ಟಿಲ್ಲವೆಂಬುದನ್ನು ಕಣ್ಮರೆಯಾಗಗೊಡಬೇಡ. ನಮ್ಮ ನಾಡಿಗೆ ನೀನೊಂದು ದಿವ್ಯ ಸಂದೇಶವನ್ನು ಕೊಡುವವನಿರುವೆ. ನಿನ್ನ ಈವರೆಗಿನ ವೃತ್ತಿಯೂ, ಪ್ರಗತಿಯೂ ನನಗೆ ಆ ಕನಸನ್ನು ತೋರಿಸುತ್ತಲಿವೆ. ಆ ಕನಸು ಕಣಸಾಗಬೇಕು.

ಪರಮಾತ್ಮನು ನಿನಗೆ ಸರಿಯಾದ ಬುದ್ಧಿಯನ್ನೂ, ಬಲವನ್ನೂ ದಯಪಾಲಿಸಲಿ. ಪ್ರಗತಿಪಥವನ್ನು ತುಳಿಯುವಾಗ ನಿನಗೆ ಸದಾ ನೆರವಾಗಲೆಂದೇ ನನ್ನ ಹೃತ್ಪೂರ್ವಕ ಪ್ರಾರ್ಥನೆ! ನಿನ್ನ ಓಲೆಯನ್ನೆದು ಕಾಯುತ್ತಿರುವೆ! ಇತಿ.

ನಿನ್ನವನೇ

'ಕಕ್ಕ'

(೨)

ಉತ್ತರ

ಕುಶಲ ಓಂ ಪುಣೆ

೨೧-೬-೩೮

ಪೂಜ್ಯ ತೀರ್ಥರೂಪರ ಸನ್ನಿಧಿಯಲ್ಲಿ,

ಬಾಲಕನ ಅನಂತ ವಂದನೆಗಳು.

ತಮ್ಮ ಕೃಪಾಪ್ರಸಾದವು ತಲುಪಿತು. ನಾನಿಲ್ಲಿ ಬಂದ ಕೂಡಲೆ ತಮಗೆ ಕಾಗದವನ್ನು ಬರೆಯುವವನಿದ್ದೆ. ಆದರೆ ಕೋಣೆಯು ಬೇಗ ದೊರೆಯದ್ದರಿಂದ, ಅದನ್ನು ಹುಡುಕುವ ಗೊಂದಲದಲ್ಲಿ ಕಾಗದವನ್ನು ಬರೆಯಲಾಗಲಿಲ್ಲ. ದಯವಿಟ್ಟು ಕ್ಷಮಿಸುವಿರೆಂದು ನಂಬಿಗೆ. ಪೂಜ್ಯ ರಂಗರಾಯರ ಮನೆಯ ಹತ್ತರವೇ ಒಂದು ಕೋಣೆ ನಿನ್ನೆ ತೆರವಾಯಿತು. ಅದನ್ನವರು ನನಗಾಗಿ

ಅತಿಪ್ರಯಾಸದಿಂದ ದೊರಕಿಸಿದರು. ಈಗ ನಾನು ಅಲ್ಲಿಯೇ ಇರುವೆ. ಪ್ರಕೃತಿಯು ಚೆನ್ನಾಗಿದೆ. ಚಿಂತಿಸಬೇಡಿರಿ ಎಂದು ತಾಯಿಗೆ ತಿಳಿಸಿರಿ.

ತಾವು ಎಳೆತನದಲ್ಲಿಯೆ ನನ್ನ ಮನಸ್ಸಿನಲ್ಲಿ ನೆಟ್ಟ ದಿವ್ಯ ಆದರ್ಶದ ಸಸಿಯು ಇನ್ನು ಅಳಿಯುವುದು ಸಾಧ್ಯವಿಲ್ಲ. ಅದು ಬೆಳೆಯಲೇಬೇಕು. ಬೆಳೆಯುವುದು ಎಂಬುದು ನನ್ನ ದೃಢವಾದ ನಂಬಿಗೆ. ಇಲ್ಲಿಯೂ ಪೂಜ್ಯ ರಂಗರಾಯರ ಆದರ್ಶವು ನನ್ನೆದುರು ಇದೆ. ತಮ್ಮ ಹೇಳಿಕೆಯಂತೆ ನಾನು ಗೆಳೆಯರನ್ನು ಎಚ್ಚರದಿಂದ ಆರಿಸುವೆ. ಗುರಿಯನ್ನು ಮರೆಯದಿರಲು ಯತ್ನಿಸುವೆ. ತಮ್ಮ ಆಶೀರ್ವಾದದ ಬಲವಿದ್ದಾಗ ನನಗೆ ಏತರ ಹೆದರಿಕೆಯೂ ಇಲ್ಲ.

ಚಿ. ಚನ್ನಮ್ಮ ಈಗ ನಡೆಯುತ್ತಿರುವಳೇನು? ನಮ್ಮ ಆಕಳು ಹೇಗಿದೆ? ಪೂಜ್ಯ ಮಾತೃಶ್ರೀಯವರಿಗೆ ಪ್ರಣಾಮಗಳು, ಎಳೆಯರಿಗೆ ಆಶೀರ್ವಾದಗಳು. ಇತಿ.

ತಮ್ಮ ಒಲವಿನ
**ಬಲವಂತ.**

(೩)
ಶ್ರೀರಾಮ

ಬಾಗಿಲುಕೋಟೆ
೪–೧–೩೭

ಮಹನೀಯರೇ,

ವಿಜ್ಞಾಪನೆಗಳು.

ತಮ್ಮಲ್ಲಿ ಕೆಳಗೆ ಕಾಣಿಸಿದ ಪುಸ್ತಕಗಳು ದೊರೆಯುವವೆಂದು ತಮ್ಮ ಪುಸ್ತಕಗಳ ಪಟ್ಟಿಯ ಮೇಲಿಂದ ತಿಳಿಯಿತು. ಅವು ನನಗೀಗ ಅತ್ಯಗತ್ಯವಾಗಿ ಬೇಕಾಗಿವೆ. ಅವನ್ನು ದಯವಿಟ್ಟು ಕೂಡಲೆ ಕಳುಹುವದಾದರೆ ಉಪಕಾರ. ಪುಸ್ತಕಗಳನ್ನು ರೈಲಿನಿಂದ ಕಳುಹಿ ರಸೀತಿಯನ್ನು ವ್ಹಿ. ಪಿ. ಮಾಡಿ ಕಳುಹಿರಿ. ವಿಳಾಸವನ್ನು ಕೆಳಗೆ ಬರೆದಿರುವೆ.

| | |
|---|---|
| ೧ ಕರ್ನಾಟಕ ದರ್ಶನ | ೧–೦–೦ |
| ೨ ಬುದ್ಧಿಯೋಗ | ೧–೮–೦ |
| ೩ ವಚನಶಾಸ್ತ್ರರಹಸ್ಯ | ೩–೦–೦ |
| ೪ ಗೀತೆಯ ಗುಟ್ಟು | ೧–೦–೦ |
| ೫ ಉಪನಿಷದ್ರಹಸ್ಯ | ೩–೦–೦ |
| | ೯–೮–೦ |

ಬೇಗ ಕಳುಹುವಿರಲ್ಲವೇ ದಯುವಿಟ್ಟು! ಇತಿ.

ವಿಳಾಸ :—

ರಾ. ರ. ಕುಲಕರ್ಣಿ, ಎಮ್. ಎ. ನಿಮ್ಮ

ಅಧ್ಯಾಪಕ ಹಾಯಸ್ಕೂಲ, ಬಾಗಿಲುಕೋಟೆ **ರಾ. ರ. ಕುಲಕರ್ಣಿ**

(೬)

ಉತ್ತರ

ಗುರುಪ್ರಸನ್ನ! ಹುಬ್ಬಳ್ಳಿ

೬-೧-೩೭

ಮಹನೀಯರೆ!

ವಂದನೆಗಳು!

ತಮ್ಮ ಕಾಗದವು ತಲುಪಿತು. ತಮ್ಮ ಸೂಚನೆಯ ಮೇರೆಗೆ ಪುಸ್ತಕಗಳನ್ನೆಲ್ಲ ರೈಲಿನಿಂದ ಇಂದೇ ಕಳುಹಿರುವೆ. ರಶೀತಿಯನ್ನು ವ್ಹಿ. ಪಿ. ಯ ಮೂಲಕ ಕಳುಹಿರುವೆ. ಅದನ್ನು ದಯವಿಟ್ಟು ಸ್ವೀಕರಿಸುವಿರೆಂದು ನಂಬುವೆ. ಇತಿ.

ನಿಮ್ಮ

**ಶಿ. ಶ. ಹಿರೇಮಠ**

ಮ್ಯಾನೇಜರ.

(೫)

**ಮೆಹರ್ಬಾನ್ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್, ದಕ್ಷಿಣಭಾಗ ಇವರ ಹುಜೂರಿಗೆ.**

ಅರ್ಜಿದಾರ, ಕಾರ್ಯದರ್ಶಿ ವಿಕ್ರಮ-ವ್ಯಾಯಾಮಮಂದಿರ, ಅಥಣಿ ಇವರ ವಿನಂತಿ ಅರ್ಜಿ ಏನಂದರೆ :—

(೧) ನಾವಿಲ್ಲಿ ಒಂದು **ವ್ಯಾಯಾಮ ಮಂದಿರವನ್ನು** ಹೊರಡಿಸಿ, ಇಂದಿಗೆ ನಾಲ್ಕು ವರುಷಗಳಾದವು. ಊರಲ್ಲಿಯ ಮಹನೀಯರ ನೆರವಿನಿಂದ ಅದಕ್ಕೊಂದು ತಾತ್ಪೂರ್ತಿಕ ಕಟ್ಟಡವೂ ಒಂದು ಚಿಕ್ಕ ಆಟದ ಬಯಲೂ ದೊರೆತಿವೆ.

(೨) ಆಡಲು ಪ್ರತಿದಿನ ಸು. ೪೦ ಹುಡುಗರು ಬರುವರು. ಹುಡುಗರು ಎಲ್ಲ ಜಾತಿಯವರಿರುವರು. ಜಾತಿ-ಪಂಥಗಳ ವೈಷಮ್ಯಕ್ಕೆ ಎಡೆಗೊಡದೆ ಇಲ್ಲಿಯ ಮಾನ್ಯಶಿಕ್ಷಕರು ಎಲ್ಲರಿಗೆ ಸಮನಾಗಿ ಕಲಿಸುತ್ತಿರುವರು. ಕುಸ್ತಿ, ಮಲಖಂಬ, ಲಾಠಿ, ಲೇಝಿಮ್, ಪೋಲಜಂಪ(ಕೋಲ್ ಜಿಗಿತ), ಹುತುತು,

ಕುಂಟಾಟ ಇತ್ಯಾದಿ ಆಟಗಳಲ್ಲಿ ಹುಡುಗರು ಸರಿಯಾದ ಪ್ರಗತಿಯನ್ನು ಹೊಂದಿರುವರು.

(೩) ಇತ್ತೀಚೆಗೆ ವ್ಯಾಯಾಮ ಶಾಲೆಗಳಿಗೆ ಸರಕಾರದವರು ಗ್ರ್ಯಾಂಟನ್ನು ಕೊಡುವ ಏರ್ಪಾಟನ್ನು ಮಾಡಿರುವರು. ನಮ್ಮ ಸಂಘವು ಯಥಾಶಕ್ತಿ ಲೋಕಸೇವೆಯನ್ನು ಕಳೆದ ನಾಲ್ಕು ವರುಷಗಳಿಂದ ಮಾಡುತ್ತ ಬಂದಿದೆ. ಅದಕ್ಕೆ ಹಣದ ಪ್ರೋತ್ಸಾಹವು ದೊರೆತರೆ ಅದರಿಂದ ಇನ್ನೂ ಹೆಚ್ಚಾಗಿ ಕಾರ್ಯವಾಗುವದರಲ್ಲಿ ಸಂದೇಹವಿಲ್ಲ.

(೪) ಆದುದರಿಂದ ತಾವು ನಮ್ಮ ಮಂದಿರಕ್ಕೆ ಒಮ್ಮೆ ಸಂದರ್ಶನವನ್ನು ಇತ್ತು, ಅದರ ಪ್ರಗತಿಯನ್ನು ಕಂಡು ಅದಕ್ಕೆ ಸರಿಯಾದ ಗ್ರ್ಯಾಂಟನ್ನು ಕೊಡಿಸುವಿರೆಂದು ನಂಬಿಗೆ. ತಮ್ಮ ಈ ನೆರವಿಗಾಗಿ ಸಂಸ್ಥೆಯು ತಮಗೆ ಸದೈವ ಋಣಿಯಾಗದಿರದು. ಇತಿ ವಿಜ್ಞಾಪನೆ—

ಅಥಣಿ
ತಾ. ೫-೧೦-೩೮

ತಮ್ಮ,
**ತ. ಅ. ಮುತಾಲೀಕ,**
ಗೌ. ಕಾರ್ಯದರ್ಶಿ.

ವಿ. ಸೂಚನೆ :—

ಉತ್ತರವನ್ನು ಕೆಳಗಿನ ವಿಳಾಸಕ್ಕೆ ಕಳುಹಬೇಕಾಗಿ ಪ್ರಾರ್ಥನೆ.

ವಿಳಾಸ :—

**ಶ್ರೀ. ತ. ಅ. ಮುತಾಲೀಕ,** ಎಲ್‌. ಬಿ.,
ಗೌ. ಕಾರ್ಯದರ್ಶಿ, ವಿಕ್ರಮ ವ್ಯಾಯಾಮ ಮಂದಿರ.
ವಿಕ್ರಮಪುರ, ಅಥಣಿ ; **ಪೋ. ಅಥಣಿ.**

(೬)

ಜಂಬುಕಿ
೧೦-೪-೩೬

ಸಂಪಾದಕ ಮಹನೀಯರೆ,

ಕೆಳಗಿನ ನಾಲ್ಕು ಸಾಲುಗಳಿಗೆ ತಮ್ಮ ಸನ್ಮಾನ್ಯ ಪತ್ರಿಕೆಯಲ್ಲಿ ಎಡೆ ಕೊಡುವಿರೆಂದು ನಂಬಿ, ತಮಗೀ ಕಾಗದವನ್ನು ಬರೆದಿರುವೆ. ಕೊಡುವಿರಲ್ಲವೆ ಸ್ಥಲವನ್ನಿದಕ್ಕೆ ?

ಪ್ರತಿವರುಷ .......ಲ್ಲಿಯ ಬಸವಣ್ಣನ ಯಾತ್ರೆಗಾಗಿ ಸಾವಿರಾರು ಭಕ್ತರು ತೆರಳುವರು. ದಾರಿಯು ನಮ್ಮೂರ ಮೇಲಿಂದ ಹಾದು ಹೋಗುವುದು. ದಾರಿಯುದ್ದಕ್ಕೆ ಅಲ್ಲಲ್ಲಿ ಹಳ್ಳಗಳು ಹರಿದು ದೊಡ್ಡದೊಡ್ಡ ಕೊರಕಲುಗಳು ಬಿದ್ದಿವೆ. ಮಳೆಗಾಲದಲ್ಲಂತೂ ಅಲ್ಲಿಂದ ಹಾದು ಹೋಗುವುದು ತೀರ ಕಠಿಣ. ಆ ಕಾಲಕ್ಕೆ

ಪಯಣಬೇಕೆನುವ ಯಾತ್ರಿಕರ ಗೋಳನ್ನು ಬಣ್ಣಿಸಲು ಬಾರದು. ಹುದಲಲ್ಲಿ ಬಂಡಿಗಳು ಸಿಲುಕಿದ್ದರಿಂದ ಒದ್ದಾಡುವ ಜನರು ಈ ದಾರಿಯನ್ನೂ ಅದನ್ನು ಇಂಥ ಒಳ್ಳಿತಾದ (?) ಸ್ಥಿತಿಯಲ್ಲಿಟ್ಟ 'ಸ್ಥಾನಿಕಸ್ವರಾಜ್ಯ' ಸಂಸ್ಥೆಯನ್ನೂ ತುಂಬಾ ತೆಗಳಿದ್ದುಂಟು. ಬೇಸಿಗೆಯಲ್ಲಿ ಬಂಡಿಗಳು ಒಗ್ಗಾಲಿಯಾಗಿ ಬೀಳದಿರುವುದು ಅಪರೂಪ. ಇದನ್ನೆಲ್ಲ ನಾನು ಅನೇಕ ಸಲ ಕಣ್ಣಾರೆ ಕಂಡಿರುವೆ.

ಸ್ಥಾನಿಕ-ಸ್ವರಾಜ್ಯ-ಸಂಸ್ಥೆಯ ಅಧ್ಯಕ್ಷರ ಸನ್ನಿಧಾನಕ್ಕೆ ಅನಂತ ಅರ್ಜಿಗಳನ್ನು ಕಳುಹಿಸಿದರೂ ಅವರ ಕಂಗಳು ಇತ್ತ ಹೊರಳಲೊಲ್ಲವು. ಅವರು ತಮ್ಮ ಬೇರೆ ಮಹತ್ಕಾರ್ಯಗಳಲ್ಲಿಯೇ ತೊಡಗಿರುವರು. ಅದಕ್ಕಾಗಿ ನಮ್ಮ ದೂರನ್ನು ನಿಮ್ಮ ಅಂಗಳಿಯ ಬಾಗಿಲಿಗಾದರೂ ಒಯ್ಯೋಣ, ಏನಾದರೂ ಉಪಯೋಗವಾಗುವುದೇನು ನೋಡೋಣ, ಎಂದು ಬಯಸಿ ಬರೆದಿರುವೆ. ಇನ್ನಾದರೂ ಅಧ್ಯಕ್ಷಸಾಹೇಬರು ಇತ್ತ ಹೊರಳಿ ನೋಡಿ, ದಾರಿಯನ್ನು ಚೆನ್ನಾಗಿರಿಸಿ ಬಡ ಯಾತ್ರಿಕರ ಗೋಳನ್ನು ಕಡಮೆ ಮಾಡುವ ಶ್ರೇಯಸ್ಸನ್ನು ಪಡೆಯುವರೋ? ತಮಗೆ ತೊಂದರೆ ಕೊಟ್ಟದ್ದಕ್ಕಾಗಿ ಕ್ಷಮಿಸಿರಿ, ಇತಿ. ನಿಮ್ಮ

ಗೋ. ಗೋ. ಚವ್ಹಾಣ.

(೭)

ಶ್ರೀ

ಮಹನೀಯರಿಗೆ ವಂದನೆಗಳು,

ಶ್ರೀಹರಿಯ ಕೃಪೆಯಿಂದ ನಮ್ಮ ಮೊಮ್ಮಗಳಾದ

ಚಿ. ಸೌ. ಕಾಂ. **ಚೆನ್ನಮ್ಮ** ಇವಳ

ಮಂಗಲಮಹೋತ್ಸವವನ್ನು

ಶ್ರೀಯುತ, **ದೇಸಾಯಿ ಅನಂತರಾಯರ** ಮಕ್ಕಳಾದ

**ಶ್ರೀ. ವೆಂಕಟರಾಯರೊಂದಿಗೆ**

ಇದೇ ಜ್ಯೇಷ್ಠ ಶು. ನವಮಿ ಸೋಮವಾರ ತಾ. ೬-೬-೩೮ ಸಾಯಂಕಾಲದ ೪-೩೦ಗಂಟೆಯ ಸುಮುಹೂರ್ತದಲ್ಲಿ ಧಾರವಾಡದಲ್ಲಿಯ ನಮ್ಮ ಮನೆಯಲ್ಲಿ **'ಲಕ್ಷ್ಮೀನಿವಾಸದಲ್ಲಿ'** ಮಾಡುವುದನ್ನು ಗೊತ್ತುಪಡಿಸಿರುತ್ತದೆ. ತಾವು ತಮ್ಮ ಆಪ್ತಮಿತ್ರರೊಂದಿಗೆ ದಯಮಾಡಿಸಿ, ವಧೂವರರನ್ನು ಆಶೀರ್ವದಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡುವಿರೆಂದು ಪ್ರಾರ್ಥಿಸುವ,

ಲಕ್ಷ್ಮೀನಿವಾಸ, ಮಾಳಮಡ್ಡಿ<br>
ಧಾರವಾಡ<br>
೧-೬-೩೮

ತಮ್ಮವನಾದ<br>
**ಹಣಮಂತರಾವ ಬುರ್ಲಿ.**

---

ಭೀಮರಾವ ಬುರ್ಲಿ, ಮೋಹನರಾವ ನರಗುಂದ, ಇವರ ವಂದನೆಗಳು.

## ಅಭ್ಯಾಸ ೧೫.

(ಅ) ಕೆಳಗೆ ಕಾಣಿಸಿದ ರೀತಿಯಲ್ಲಿ ಕಾಗದವನ್ನು ಬರೆಯಿರಿ.

೧. ತಾಯಿಯನ್ನು ಕಳೆದುಕೊಂಡ ಗೆಳೆಯನಿಗೆ ಸಂತೈಸಲು.

೨. ಇದೇ ಮದುವೆಯಾಗಲಿರುವ ತಂಗಿಗೆ ಯೋಗ್ಯವರನ ಆಯ್ಕೆಯ ವಿಷಯವಾಗಿ. (೧೯೨೭)

೩. ಇದೇ ಬೇನೆಯಿಂದೆದ್ದ ನಿನ್ನ ಗೆಳೆಯನಿಗೆ–ಬೇಸಿಗೆಯ ಬಿಡುವಿನಲ್ಲಿ ನಿನ್ನ ಊರಿಗೆ ಬರಲು ಔತಣವನ್ನು ಕೊಡಲು–ಅದರಲ್ಲಿ ನಿಮ್ಮಲ್ಲಿಯ ಪುನರಂಜನೆಯ ಕಾರ್ಯಕ್ರಮವನ್ನು ವಿವರಿಸು.

೪. ಪರದೇಶಕ್ಕೆ ತೆರಳುವ ಮುನ್ನ ನಿನ್ನ ತಾಯಿಗೆ–ಆ ವಿಷಯವನ್ನು ತಿಳಿಸಲು. (೧೯೨೮)

೫. ನಿನ್ನ ತಂದೆಗೆ–ಉತ್ತರ ಭಾರತದ ಪ್ರವಾಸಕ್ಕೆ ಹೊರಟ ಜನರೊಡನೆ ಹೋಗಲು ಅಪ್ಪಣೆಯನ್ನು ಪಡೆಯುವದಕ್ಕಾಗಿ.

೬. ನಿನ್ನ ನೆರೆಯವನಿಗೆ–ಆತನ ನಾಯಿಯಿಂದ ನಿನಗೊದಗುವ ತೊಂದರೆಯನ್ನರುಹಲು. (೧೯೨೯)

೭. ತಂದೆಯವರಿಗೆ–ನೀನು ಕುಳಿತ ಮೋಟಾರು ಮತ್ತು ಒಂದು ಬಂಡಿ–ಇವುಗಳ ತಾಕಲಾಟದಿಂದುಂಟಾದ ಅಪಘಾತವನ್ನು ತಿಳಿಸಲು–ನೀನು ಸುರಕ್ಷಿತ ಇದ್ದುದನ್ನು ಅರುಹಲು ಮರೆಯದಿರು. (೧೯೩೦)

೮. ನಿನ್ನ ಜಪಾನೀ ಗೆಳೆಯನಿಗೆ—ಭಾರತಕ್ಕೆ ಬರಲು ಔತಣ. ಅದಕ್ಕೆ ಅನುಕೂಲ ಸಮಯವನ್ನೂ–ನೋಡತಕ್ಕಂಥ ಅತ್ಯುತ್ತಮ ಸ್ಥಲಗಳನ್ನೂ ತಿಳಿಸು.

೯. ನಿನ್ನ ತಮ್ಮನಿಗೆ—ಅವನು ಸಾಲೆ ತಪ್ಪಿಸಿ ಅದನ್ನೆ ಸಮರ್ಥಿಸುತ್ತಿರುವುದು ಅನುಚಿತವೆಂದು ತಿಳಿಸಲು. (೧೯೩೧)

೧೦. ನಿನ್ನ ತಂದೆತಾಯಂದಿರಿಗೆ—ನಿನ್ನ ಬಡ ಗೆಳೆಯನಿಗೆ ಧನಸಹಾಯವನ್ನು ಮಾಡಿರೆಂದು ಪ್ರಾರ್ಥಿಸಲು.

೧೧. ನಿನ್ನ ರೇಗಿದ ಗೆಳೆಯನಿಗೆ–ಸಾಂತ್ವನಪರ. (೧೯೩೨)

೧೨. ಆಸ್ಪತ್ರೆಯಲ್ಲಿ ಬಳಲುವ ಗೆಳೆಯನಿಗೆ–ಅವನಿಗೆ ಸಂತೋಷವನ್ನೀಯಲು. ಅತೀವ ಅಂದವಾಗಿರಬೇಕು.

೧೩. ನಗರ–ಸಭೆಯ ಅಧ್ಯಕ್ಷರಿಗೆ :—ಓಣಿಯಲ್ಲಿ ಬಹುದಿನಗಳಿಂದ ಉಂಟಾಗಿರುವ ತೊಂದರೆಯನ್ನು ಕುರಿತು. (೧೯೩೩)

೧೪. ನಿನ್ನ ತಂಗಿಗೆ–ಹುಡುಗಿಯರ ವಸತಿಗೃಹವನ್ನು ಸೇರುವ ಬಗ್ಗೆ ನಿನ್ನ ಅಭಿಪ್ರಾಯವನ್ನು ತಿಳಿಸಲು.

೧೫. ನಿನ್ನ ಶಾಲೆಯ ಪ್ರಿನ್ಸಿಪಾಲರಿಗೆ—ನಿನಗೆ ದೊರೆತ ನೌಕರಿಯ ಸುದ್ದಿಯನ್ನು ತಿಳಿಸಿ–ಶಾಲೆಯು ನಿನಗೆ ಮಾಡಿದ ಉಪಕೃತಿಗಾಗಿ·ಅವರಿಗೆ ಕೃತಜ್ಞತೆಯನ್ನು

ಸಲ್ಲಿಸಲು ಒಂದು ಪತ್ರವನ್ನು ಬರೆ. (೧೯೩೫)

೧೬. **ನಿನ್ನ ತಮ್ಮನಿಗೆ**—ಅದೇ ಜರುಗಿದ ಕಾಯಿದೇ ಮಂಡಲದ ಚುನಾವಣೆಯನ್ನು ಬಣ್ಣಿಸಲು ಒಂದು ಪತ್ರವನ್ನು ಬರೆ. (೧೯೩೬)

೧೭. **ನಿನ್ನ ಗೆಳೆಯನೋರ್ವನ ತಮ್ಮನು** ತುಂಟನು. ಆತನನ್ನು ನಿನ್ನ ಶಾಲೆಗೆ ಕಳುಹಬೇಕೆಂದು ಗೆಳೆಯನು ಬಯಸಿ ನಿನ್ನ ಅಭಿಪ್ರಾಯವನ್ನು ಕೇಳಲು ಅವನೊಂದು ಓಲೆಯನ್ನು ಬರೆದಿರುವ. ಅದಕ್ಕೆ ಉತ್ತರವನ್ನು ಬರೆ.

೧೮. **ಕೆಳಗಿನ ಪ್ರಕಟನೆಗೆ** ಉತ್ತರವನ್ನು ಬರೆ. ಕಾರಕೂನನು ಬೇಕು. ಪತ್ರವ್ಯವಹಾರದಲ್ಲಿಯೂ, ಲೆಕ್ಕವನ್ನಿಡುವದರಲ್ಲಿಯೂ, ಕುಶಲನಾಗಿರಬೇಕು. ತನ್ನ ಶಿಕ್ಷಣ-ಅನುಭವ-ವಯಸ್ಸನ್ನೊಳಗೊಂಡ ಅರ್ಜಿಯನ್ನು ಮನೆ ನಂಬರ ೫೫ ಈ ವಿಳಾಸಕ್ಕೆ ಕಳುಹಬೇಕು. (೧೯೩೭)

(ಅ) ಕೆಳಗಿನ ಸ್ಥಲಕ್ಕೆ ಅರ್ಜಿಯನ್ನು ಬರೆಯಬೇಕು.

**ಕಾರಕೂನರು ಬೇಕು**—ಹಿಂದಿಯಿಂದ ಇಂಗ್ಲೀಷಿಗೂ ಇಂಗ್ಲೀಷಿನಿಂದ ಹಿಂದಿಗೂ ಕಾಗದಗಳನ್ನು ಭಾಷಾಂತರಿಸಲು ಬರಬೇಕು. ನಂಬಳ ೬೦-೫-೧೬೦. ಅರ್ಜಿಯನ್ನು ಕೆಳಗಿನ ವಿಳಾಸಕ್ಕೆ ಕಳುಹಬೇಕು. ಅರ್ಜಿದಾರನು ತನ್ನ ವಿಳಾಸವನ್ನೂ, ಜನ್ಮ ತಾರೀಖನ್ನೂ, ವಾಸಸ್ಥಲವನ್ನೂ, ಶಿಕ್ಷಣವನ್ನೂ ಬರೆಯತಕ್ಕದ್ದು.

'ಸಂಪಾದಕ—ಮುಂಬಯಿ ಸ್ಟ್ಯಾಂಡರ್ಡ' ಇವರಿಗೆ (೧೯೩೪)

## ೩. ಸಂವಾದಗಳು.

೧. **ಅಂದರೇನು ? :–ಸಂವಾದ**ವೆಂದರೆ ಇಬ್ಬರಲ್ಲಿ ನಡೆದ ಮಾತು; ಒಂದು ವಿಷಯವನ್ನು ಕುರಿತು ಎರಡು ವ್ಯಕ್ತಿಗಳಲ್ಲಿ ನಡೆದ ಚರ್ಚೆ. ಇದರಲ್ಲಿ ಪ್ರಶ್ನೋತ್ತರಗಳೂ, ಈರ್ವರು ತಮ್ಮ ತಮ್ಮ ಪಕ್ಷವನ್ನು ಸಮರ್ಥಿಸಲು ಮುಂದೊಡ್ಡಿದ ಯುಕ್ತಿವಾದಗಳೂ(Arguments) ಅಡಕವಾಗುವವು.

೨. **ಬರೆಯುವುದೇತಕ್ಕೆ ? :**—ಇದನ್ನು ಬರೆಯುವ ಕೌಶಲವು ಬರಬೇಕಾದರೆ ನಮಗೆ, ಚರ್ಚೆ ಮಾಡಲಿರುವ ವ್ಯಕ್ತಿಗಳ ಭೂಮಿಕೆಯನ್ನು ವಹಿಸಲು ಬರಬೇಕಾಗುವುದು. ಅವರ ಮನಸ್ಥಿತಿಯ ಪರಿಚಯವಿರಬೇಕಾಗುವುದು. ಆದುದರಿಂದ **ಸಂವಾದ-ಬರಹವು,** ನಮಗೆ ಅನ್ಯರ ಮನಸ್ಸಿನಲ್ಲಿ ಸೇರಿ ಅವರ ಅಭಿಪ್ರಾಯವನ್ನು ಅವರ ರೀತಿಯಿಂದ ಉಸುರಲು ಕಲಿಸುವುದು.

ಇದರ ಜೊತೆಯಲ್ಲಿ **ಸಂವಾದ-ಬರಹವು** ನಮಗೆ ಸಂಭಾಷಣೆಯ ಕೌಶಲವನ್ನು ನೀಡುವುದುಂಟು. ಸಾಧಕ-ಬಾಧಕ ಪ್ರಮಾಣಗಳನ್ನು ಪರಿಶೀಲಿಸಿ ಸರಿಯಾದ ಆಲೋಚನೆಯನ್ನು ಮಾಡಲು ಕಲಿಸುವುದು. ಇದರಿಂದ

ಮಾತಿನ ಶೈಲಿಯು ಸ್ವಾಧೀನವಾಗಿ ಕಾದಂಬರಿ—ನಾಟಕಗಳಲ್ಲಿಯ ಸಂವಾದಗಳನ್ನು ಬರೆಯುವ ಸಾಮರ್ಥ್ಯವು ಕೂಡ ಬರುವುದು.

೩. **ಹೇಗೆ?** :—(ಅ) **ಪೂರ್ವಸಿದ್ಧತೆ:**—(೧) ನಿಮ್ಮ ಸುತ್ತಲಿನ ಜನರು ಮಾತನಾಡುವುದನ್ನೂ ಅನೇಕ ವಿಷಯಗಳನ್ನು ಚರ್ಚಿಸುವುದನ್ನೂ ಸೂಕ್ಷ್ಮರೀತಿಯಿಂದ ಅವಲೋಕಿಸಿರಿ. ಸಾಧ್ಯವಾದಾಗ ಅವರ ಸಂಭಾಷಣೆಯ ವರದಿಯನ್ನು ಬರೆದಿಡಲು ಯತ್ನಿಸಿರಿ.

(೨) ಕಥೆಗಳನ್ನೂ—ಕಾದಂಬರಿಗಳನ್ನೂ—ನಾಟಕಗಳನ್ನೂ ಎಚ್ಚರದಿಂದ ಓದಿ ಅವುಗಳಲ್ಲಿಯ ಪಾತ್ರಗಳ ಸಂವಾದದ ರೀತಿಯನ್ನು ನಿರೀಕ್ಷಿಸಿರಿ; ಅದನ್ನು ಅನುಕರಿಸಲು ಯತ್ನಿಸಿರಿ.

(೩) ಸಂವಾದ ಮಾಡಲಿರುವ ಕಲ್ಪಿತ ವ್ಯಕ್ತಿಗಳ ಸ್ವಭಾವಪರಿಚಯವನ್ನು ಮಾಡಿಕೊಳ್ಳಬೇಕು. ಅವರ ಮನಸ್ಥಿತಿಯೊಡನೆ ಒಂದಾಗಲು ಅವರಲ್ಲಿ ಬೆರೆಯಲು ಕಲಿಯಬೇಕು. ಅವರು ವಿಶೇಷ ಪ್ರಸಂಗದಲ್ಲಿ ಹೇಗೆ ಮಾತನಾಡಬಹುದೆಂಬುದನ್ನು ಅರಿಯಲು ಯತ್ನಿಸಬೇಕು.

(೪) ಸಂವಾದಕ್ಕಾಗಿ ನಿಯಮಿಸಿದ ವಿಷಯದ, ಎರಡೂ ಪಕ್ಷಗಳಿಗೆ ಸಾಧಕ ಹಾಗೂ ಬಾಧಕವಾದ ಯುಕ್ತಿವಾದಗಳನ್ನು ಬೇರೆ ಬೇರೆಯಾಗಿ ಬರೆದಿಡಬೇಕು. ಮುಂದೆ ಅವನ್ನು ಕ್ರಮವರಿತು ಉಪಯೋಗಿಸಿ ಸಂವಾದವನ್ನು ಅರಳಿಸಬೇಕು.

(ಆ) **ಪ್ರತ್ಯಕ್ಷಬರಹ:**— ಇಷ್ಟು ಸಿದ್ಧತೆಯಾದ ಮೇಲೆ ಪ್ರತ್ಯಕ್ಷವಾಗಿ ಸಂವಾದವನ್ನು ಬರೆಯಲು ಪ್ರಾರಂಭಿಸಬೇಕು. ಆಗ ಮುಂದಿನ ಕೆಲವು ಸೂಚನೆಗಳನ್ನು ಗಮನಿಸಬೇಕು. ಅಂದರೆ ಸಂವಾದವು ಸಹಜವಾದದ್ದೂ ಅಂದವಾದದ್ದೂ ಆಗಬಹುದು.

(೧) ಸಂವಾದವಲ್ಲಿ ಒಂದೇ ವ್ಯಕ್ತಿಯು ಬಹಳ ಮಾತನಾಡಬಾರದು. ಇಬ್ಬರಿಗೂ ಸಮನಾದ ಸಂಧಿಯು ದೊರೆಯಲಿ. ಸಂವಾದವು ಶಿಥಿಲವಾಗಿ ಸಾಗಬಾರದು. ಅದರಲ್ಲಿ ಒಂದು ಓಟವು ಬೇಕು.

(೨) ನಿಜವಾದ ಸಂವಾದದಲ್ಲಿ ಜನರು, ನಡುವೆಯೆ ಒಬ್ಬರನ್ನೊಬ್ಬರು ತಡೆಯುವರು. ನಿಮ್ಮ ಈ ಕಲ್ಪಿತ ವ್ಯಕ್ತಿಗಳು ಕೂಡ ಈ ಮೇರೆಗೆ ತಡೆಯಲಿ. ಅದರಿಂದ ಸಂವಾದವು ಸ್ವಾಭಾವಿಕವಾಗಿ ಕಾಣುವುದು.

ಉದಾ :—ಭೀಮ:—ಮೊನ್ನೆ ನಿನ್ನ ತಮ್ಮನ ಕಾಗದವೊಂದು ಬಂದಿದೆ. ಅದರಲ್ಲವನು ಬರೆಯುವುವೇನೆಂದರೆ—

**ಶಾಮ** :—ಸಾಕು! ರೂಪಾಯಿ ಬೇಡಿದ್ದಾನು! ಆಯ್ತು ಮತ್ತೇನು ಬರೆಯುತ್ತಾನೆ ಅವನು?

(೩) ಒಮ್ಮೊಮ್ಮೆ ಪ್ರಶ್ನೆಗೆ ಉತ್ತರವನ್ನು ಇನ್ನೊಂದು ಪ್ರಶ್ನೆಯಿಂದ ಕೊಡಲಾಗುವುದು. ಕೆಲವು ಸಲ ಪ್ರಶ್ನೆಯನ್ನು ಕೇಳುವ ಪೂರ್ವದಲ್ಲಿ ಅದಕ್ಕೆ ಉತ್ತರವು ದೊರೆಯುವುದು. ಪ್ರತ್ಯಕ್ಷ ಜೀವನದಲ್ಲಿ ಕಂಡುಬರುವ ಈ ರೀತಿಯನ್ನು ನಿಮ್ಮ ಸಂವಾದದಲ್ಲಿ ಸೇರಿಸಬಹುದು.

ಉದಾ :—೧ **ರಾಮ** :—ಇಂಥ ಇಕ್ಕಟ್ಟಿನಲ್ಲಿ ನೀನೇನು ಮಾಡುವಿ?

**ಕೃಷ್ಣ** :—ನೀನೇನು ಮಾಡಬಹುದಾಗಿತ್ತು?

೨ **ಅವನು** :—ನಾನು ನಿನಗೊಂದು ಮಾತನ್ನು ಹೇಳಲೇನು?

**ಅವಳು** :—ನನಗೆ ಗೊತ್ತು ನೀನು ಹೇಳುವುದೆಲ್ಲ! ನಾನಂದು ನಗಲಿಲ್ಲೇಕೆಂಬುದನ್ನೇ ಅಲ್ಲವೆ?

(೪) ಅದೇ ಮೇರೆಗೆ ಅಲ್ಲಲ್ಲಿ ಕೆಲವು ಉದ್ಗಾರಗಳನ್ನು ಕೂಡ ಮಿತಿಯಿಂದ ಉಪಯೋಗಿಸಿರಿ. ನಿಜವಾದ ಸಂವಾದದಲ್ಲಿಯೂ ಬೇರೆ ಬೇರೆ ಭಾವನೆಗಳ ಉದ್ರೇಕಕ್ಕೆ ಸಿಲುಕಿ ಜನರು ಉದ್ಗಾರಗಳನ್ನು ಉಸುರುವುದುಂಟು. ಅದರ ಪ್ರತಿಬಿಂಬವು ನಿಮ್ಮ ಸಂವಾದದಲ್ಲಿಯೂ ಕಾಣಲಿ.

ಉದಾ :—ಅಯ್ಯೊ ಪಾಪ! ಅಬ್ಬಾ! ಸರಿ! ಇತ್ಯಾದಿ.

(೫) ಒಟ್ಟಿನಲ್ಲಿ ಸಂವಾದವು ಸ್ವಾಭಾವಿಕವಾಗಲಿ. ಸಹಜವಾದುದಾಗಲಿ. ಕೃತ್ರಿಮತೆಯು ಅಲ್ಲಿ ತಲೆದೋರದಿರಲಿ. ಶೈಲಿಯಲ್ಲಿ ಇವೇ ಗುಣಗಳಿರಲಿ. ವಾಸ್ತವ ಜಗತ್ತಿನಲ್ಲಿಯ ಜನದಂತೆಯೆ ನಿಮ್ಮ ಕಲ್ಪಿತ ಸೃಷ್ಟಿಯಲ್ಲಿಯ ಜನರು ನುಡಿಯಬೇಕು.

**೪. ಮಾದರಿಯ ಸಂವಾದಗಳು :—**

**(೧) ಅಸ್ಪೃಶ್ಯತೆ.**

**೧ ವಿಚಾರಾಂಶಗಳು :—**

| ಅನುಕೂಲ | ಪ್ರತಿಕೂಲ |
|---|---|
| (೧) ಇದು ಅತಿ ಪ್ರಾಚೀನ ರೂಢಿ. | (೧) ಪುರಾಣಮಿತ್ಯೇವ ನ ಸಾಧು ಸರ್ವಂ. |

(೨) ಅಸ್ಪೃಶ್ಯರು ಕ್ರೂರಕರ್ಮಿಗಳು. ಲೋಕಬಾಹಿರರು.

(೨) ಅವರು ಹಿಂದೆ ಕ್ರೂರರಿರಬಹುದು. ಇಂದು ಇಲ್ಲ. ಇವರಿಗಿಂತ ಹೆಚ್ಚು ಕ್ರೂರರನ್ನು ನಾವು ಮುಟ್ಟುವೆವು.

(೩) ಅವರು ಅಸ್ವಚ್ಛರು, ಅಪವಿತ್ರರು.

(೩) ಸ್ವಚ್ಛತೆಯ ಪಾಠಗಳನ್ನು ಇವರಿಗೆ ಕಲಿಸಬಹುದು.

(೪) ಅವರ ಸಂಪರ್ಕದಿಂದ ಸವರ್ಣಜನವು ಅಪವಿತ್ರವಾಗುವುದು.

(೪) ಇವರ ಸಂಸರ್ಗವೇನೂ ಸೋಂಕುವುದಿಲ್ಲ.

(೫) ಇದು ದೈವಕೃತ.

(೫) ಇದು ಮಾನವಕೃತ.

## ೨. ಪೀಠಿಕೆ:—

[ಓರ್ವ ಶಿಷ್ಯ ಆಚಾರ್ಯರ ಚಿಕ್ಕಮಗು ನೀರಡಿಸಿದ ಒಬ್ಬ ಹರಿಜನ ಬಾಲಕನಿಗೆ ನೀರನ್ನು ನೀಡುವುದು. ಅದನ್ನು ಕಂಡ ಆಚಾರ್ಯರು ಮಗುವಿನ ಕೆನ್ನೆಗೆ ಚೆನ್ನಾಗಿ ಹೊಡೆಯುವರು. ಅಷ್ಟರಲ್ಲಿ ಅವರ ಸುಧಾರಕ ಯಜಮಾನರು—ಅವರಿಗೆ ಔತಣವನ್ನು ಕೊಡಲು ಅಲ್ಲಿಗೆ ಬರುವರು. ಅಳುತ್ತಲಿರುವ ಮಗುವನ್ನು ಸಂತೈಸಲು ಯತ್ನಿಸುವರು. ಆಗ—]

**ಆಚಾರ್ಯ:**— (ಸಿಟ್ಟಿನಿಂದ) ಬಿಡಿರಿ ರಾಯರೇ! ಮುಟ್ಟಬೇಡಿರಿ, ಆ ಹೇಸಿ ಮುಂಡೆಮಗನನ್ನು! ಅವನಿಂದು ನಮ್ಮ ಕುಲವನ್ನೆಯೆ ಕೆಡಿಸಿರುವನು!

**ರಾಯರು:**— ಅದೇನಾಯಿತು ಸ್ವಾಮಿ! ಅದಾವ ಮಹಾಪಾತಕವನ್ನು ಮಾಡಿರುವ ಮಾಧವ?

**ಆಚಾರ್ಯ:**— ಯಾವ ಪಾತಕ ಅಂತೀರಿ? ಕೇಳರಿ ಅವನನ್ನೆ! ಆ ಹೊಲೇರ ಹುಡುಗನಿಗೆ ಮಡಿನೀರು ಹಾಕಬೇಕೆ? ಮೂರ್ಖ?

**ರಾಯರು:**— ಇಷ್ಟೇನ? ಅಲ್ಲ! ಆಚಾರ್ಯರೆ, ನೀರಡಿಸಿದವರಿಗೆ ನೀರನ್ನು ಎರೆಯುವುದು ಪಾಪವೋ ಪುಣ್ಯವೋ?

**ಆಚಾರ್ಯ:**— ಯಾರ ದರ್ಶನದಿಂದ ಪಾಪದ ಪರಿಚಯ, ಯಾರ ನೆರಳು ಕೂಡ ಪಾತಕದ ಮನೆ, ಇಂಥವರಿಗೆ ಪ್ರತ್ಯಕ್ಷ ನೀರನ್ನು ನೀಡುವುದೆಂದರೇನು? ನಿಮಗಿದು ಪುಣ್ಯಕರ್ಮವೆನಿಸುವದೇ?

**ರಾಯರು:**—ಇದೊಂದು ಗೊಡ್ಡುರೂಢಿಯ ಮೂಢವಿಚಾರ. ಅವರ

ದರ್ಶನ-ಸ್ಪರ್ಶನಗಳಲ್ಲಿಯೂ ಅಪವಿತ್ರತೆ ಇದೆ ಎಂದು ತಿಳಿಯುವುದು ಕುರುಡು ನಂಬಿಗೆಯ ಪರಮಾವಧಿ!

**ಆಚಾರ್ಯ:**—ಹು! ಸಾವಿರಾರು ವರ್ಷಗಳಿಂದ ನಡೆಯುತ್ತಬಂದ ನಂಬಿಕೆಯು ಕುರುಡೇನು? ಅದನ್ನು ತಳೆದ ಹಿರಿಯರೆಲ್ಲ ಕುರುಡರೇನು? ಹೊಸಬರಾದ ನೀವಷ್ಟೇ ಜಾಣರೆನ್ನಿ!

**ರಾಯರು:**— ಹಾಗಲ್ಲ ಆಚಾರ್ಯರೇ! ಹಿಂದೆ ಎಂದೋ ಒಮ್ಮೆ ಇವರ ಪೂರ್ವಜರು ಪಾತಕಗಳನ್ನು ಮಾಡಿರಬಹುದು. ಅದಕ್ಕಾಗಿ ಎಷ್ಟು ತಲೆಗಳವರೆಗೆ ನಿಮ್ಮ ಶಿಕ್ಷೆಯು ಸಾಗತಕ್ಕದ್ದು?

**ಆಚಾರ್ಯ:**— ಇಂದಾದರೂ ಅವರ ಸ್ಥಿತಿ ಏನಿದೆ? ಅವರ ಹೊಲಸು ನಡೆಯೇನು? ನುಡಿಯೇನು? ಹೊಲಸು ಪದಾರ್ಥಗಳನ್ನು ತಿನ್ನುವುದು; ಹೊಲಸು ಕೆಲಸಗಳನ್ನು ಮಾಡುವುದು; ಒಂದಾದರೂ ಒಳ್ಳೆಯ ಸಂಸ್ಕಾರವಿರಬೇಕು? ಮತ್ತೆ ಅವರ ಕೈವಾರಿಗಳಾಗಬಯಸುವಿರಿ!

**ರಾಯರು:**—ಅಹುದು! ಆಚಾರ್ಯ! ಅವರು ಹೊಲಸಾಗಿ ಇರುವರೆಂಬುದು ನಿಜ. ಆದರೆ ಅದರ ಹೊಣೆಯು ನಮ್ಮ ಮೇಲೆಯೂ ಇಲ್ಲದಿಲ್ಲ. ಅವರನ್ನು ಸಮಾಜಬಾಹಿರರನ್ನಾಗಿ ಮಾಡಿ ನಾವೇ ಅವರನ್ನು ಹೊಲಸಿನ ಕೊಳೆಯಲ್ಲಿ ಕೊಳೆಸುತ್ತಿರುವೆವು! ಇಂದು ಹೊಲಸಾಗಿದ್ದವರು ನಾಳೆ ನಿರ್ಮಲರಾಗಲರಿಯರೇ?

**ಆಚಾರ್ಯ:**—ಅದು ಹೇಗೆ ಸಾಧ್ಯ ರಾಯರೇ? ತೊಳೆದರೆ ಮೈಯ ಮೈಲಿಗೆಯು ಹೋಗಬಹುದು; ಮನಸ್ಸಿನದು ಹೇಗೆ ಹೋಗಬೇಕು? ಇಂಥವರ ಸಂಸರ್ಗದಿಂದ ಸಮಾಜವು ಹಾಳಾಗದಿರದೇ?

**ರಾಯರು:**—ಮನಸ್ಸಿನ ಮೈಲಿಗೆಯ ವಿಷಯವನ್ನು ಪರೀಕ್ಷಿಸುವುದು ಅಷ್ಟೇನು ಸುಲಭವಲ್ಲ ಆಚಾರ್ಯರೇ! ಹಾಗೆ ನೋಡಿದರೆ ಅದಾರ ಮನಸ್ಸು ಮಡಿಯಾದುದಿದೆ? ನಿಮ್ಮದಿದೆಯೇ? ನನ್ನದಿದೆಯೆ? ನೀವು ಪ್ರಮಾಣವಿಟ್ಟು ಹೇಳಬಲ್ಲಿರಾ, ನಿಮ್ಮ ಮನಸ್ಸಿನಲ್ಲಿ ಹೊಲಸು ಕಲ್ಪನೆಗಳು ಬರುವದಿಲ್ಲೆಂದು? ಹೊಲೆಯರ ಸಂಸರ್ಗದಿಂದ ನಮ್ಮ ಸಮಾಜವು ಹಾಳಾಗಬೇಕಾದರೆ, ಅದೇನು ಸೋಂಕುರೋಗವೇ? ಏಕೆ ಸುಮ್ಮನೆ ಸಲ್ಲದ ಕಲ್ಪನೆಗಳನ್ನು ಅಪ್ಪಿಕೊಳ್ಳುವಿರಿ!

**ಆಚಾರ್ಯ:**—ನೀವು ಏನೇ ಹೇಳಿರಿ; ರಾಯರೇ! ಬುದ್ಧಿಯು ನಿಮ್ಮ

ಕೆಲಮಾತುಗಳನ್ನು ಒಪ್ಪಿಕೊಂಡರೂ—ಹೃದಯವು ಅದನ್ನು ಸ್ವೀಕರಿಸಲು ಸಿದ್ಧ ವಾಗುವದಿಲ್ಲ.

**ರಾಯರು** :—ಆಗಲಿ—ಇಂದಾಗದ ಮಾತು, ನಾಳೆ ಆಗಬಹುದು. ವ್ಯರ್ಥ ಮಾಧವನನ್ನು ಮಾತ್ರ ಹಿಂಸಿಸಬೇಡಿ.

## ೨. ಕರ್ನಾಟಕ ಏಕೀಕರಣ

### ಪೀಠಿಕೆ.

[ಅದೇ ಮಾನ್ಯ ಮುಂದಾಳುಗಳ ಉಪನ್ಯಾಸವಾಗಿತ್ತು. ಕನ್ನಡಿಗರ ಎದೆಯಲ್ಲೆಲ್ಲ ಅದರಿಂದ ಅಲ್ಲೋಲಕಲ್ಲೋಲ; ತರುಣರ ತಲೆಯು ವಿಪರೀತವಾಗಿ ತಿರುಗಿತ್ತು. ಇಂಥ ಸಮಯದಲ್ಲಿ ಗೆಳೆಯರೀರ್ವರು ಇದನ್ನು ಕುರಿತು ಚರ್ಚಿಸುತ್ತಲಿರುವರು.]

**ವೀರಣ್ಣ** :— ಕೇಳಿದಿಯಾ ಪಾರಿಸಾ, ಇಂದಿನ ನಮ್ಮ ಉಪನ್ಯಾಸ ವನ್ನು ?

**ಪಾರ್ಶ್ವನಾಥ** :—ಅಹುದು ! ಯಾಕೆ? ಅಂಥದೇನಿದೆ ಅದರಲ್ಲಿ ?

**ವೀರಣ್ಣ** :— ಮತ್ತೇನಿರಬೇಕು ? ನಮ್ಮ ಏಕೀಕರಣದ ಕೆಲಸವು ಇದೇ ಹದಕ್ಕೆ ಬರುವ ಸಮಯ. ಇಂಥ ಸಮಯದಲ್ಲಿ ನಮ್ಮವರೇ ಈ ಬಗೆ ಯಾಗಿ ಕಾಲ್ತೊಡಕಾಗಬೇಕೇ ?

**ಪಾರ್ಶ್ವನಾಥ** :— ಹಾಗಾದರೆ ತಮಗೆ ಅನಿಸಿದ್ದನ್ನು ಅಡಲೇ ಬಾರದೆ? ಈ **ನವಯುಗದಲ್ಲಿ** ಇಷ್ಟು ಸ್ವಾತಂತ್ರ್ಯ ಬೇಡವೆ ?

**ವೀರಣ್ಣ** :—ಇಲ್ಲಿ ಸ್ವಾತಂತ್ರ್ಯದ ಪ್ರಶ್ನೆಯಿಲ್ಲ. ಇಂಥ ಸುಜ್ಞರಿಗೆ ಹೀಗೇಕೆನಿಸಬೇಕು ? ಎಂಬುದೇ ನನಗೆ ತಿಳಿಯದಾಗಿದೆ. ಇವರಿಗಿನ್ನೂ ಕನ್ನಡ ನಾಡಿನ ರೋಗದ ನಿದಾನವೇ ಆಗಿಲ್ಲೆನ್ನಬೇಕಾಗುವದು.

**ಪಾರ್ಶ್ವನಾಥ** :—ಅದು ಹೇಗೆ? ಅವರೆನ್ನುವದರಲ್ಲಾದರೂ ತಪ್ಪೇನಿದೆ ? ಅವರುಸುರಿದ ಒಂದೊಂದೇ ಮಾತನ್ನೆತ್ತೋಣ. ಇದು ನೋಡು! ಏಕೀಕೃತ ಕರ್ನಾಟಕವು **ಆರ್ಥಿಕ ದೃಷ್ಟಿಯಿಂದ ಸ್ವಯಂಪೂರ್ಣ**ವಾಗಿರ ಬೇಕಲ್ಲವೆ ? ಅದಿದ್ದ ಹೊರತು ನಮ್ಮ ಉನ್ನತಿಯಾಗುವುದೆಂತು ?

**ವೀರಣ್ಣ** :—ಹಂಗಿನರಮನೆಗಿಂತ ಅಂಬಲಿಯೆ ಲೇಸು ಕಾಣಾ ! ನಾವು ನಮ್ಮ ಪ್ರಾಂತಿಕ ಸಂಸಾರವನ್ನು ಇದ್ದ ಹಣದಲ್ಲಿ ಸಾಗಿಸುವೆವು. **ಪರತಂತ್ರ ಸಿರಿವಂತಿಕೆಗಿಂತ ಸ್ವತಂತ್ರ ಬಡತನವು ಮೇಲು** ! ನಮಗಿಂತ **ಕಡಿಮೆ ಉತ್ಪನ್ನವಿದ್ದ ಸ್ವತಂತ್ರ** ದೇಶಗಳು ತಮ್ಮ ಆಡಳಿತವನ್ನು ಸರಿ

ಯಾಗಿ ಸಾಗಿಸುತ್ತಿರುವಾಗ ನಮಗೆ ಅದು ಅಸಾಧ್ಯವೇಕಾಗಬೇಕೊ ತಿಳಿಯದು.

**ಪಾರ್ಶ್ವನಾಥ:**—ಇದು ನೋಡು! ತಾತ್ವಿಕ ಧ್ಯೇಯವಾದವು ವ್ಯವಹಾರವಲ್ಲಿ ಸರಿಬರುವದಿಲ್ಲ—ಸಮಾಜದ ವ್ಯವಹಾರದಲ್ಲಂತೂ—

**ವೀರಣ್ಣ:**— ತಡೆಯಪ್ಪಾ! ನಾನು ಬರೀ ಧ್ಯೇಯವಾದವನ್ನು ಹೇಳುವದಿಲ್ಲ! ಪ್ರತ್ಯಕ್ಷ ವ್ಯವಹಾರವನ್ನೇ—ಬೇರೆ ಬೇರೆ ದೇಶಗಳ ವ್ಯವಹಾರವನ್ನೇ—ನಿರ್ದೇಶಿಸಿರುವೆನಲ್ಲ? ಮೇಲಾಗಿ ಇಂದಿನ ವ್ಯವಹಾರವು ನಮಗೆ ಏನನ್ನು ತೋರಿಸುವುದು? ನಮ್ಮ ಹಣವನ್ನೇ ಬಳಸಿ ಬಲಶಾಲಿಗಳಾದ ಅನ್ಯರು, ನಮ್ಮದನ್ನು ನಮಗೆ ಕೊಡಲು ಒಲ್ಲರು, ತಮ್ಮದನ್ನೇನು ಮಣ್ಣು ಕೊಡುವರು? ಇಂಥವರ ನೆರವು ಕೊರಳಲ್ಲಿಯ ಬಂಡೆಗಲ್ಲು. ಅದೊಂದು ಮರಣಕ್ಕೆ ಕೊಟ್ಟ ಔತಣ.

**ಪಾರ್ಶ್ವನಾಥ:**— ಇದು ಹಿಂದಿನ ಆಡಳಿತದ ಮಾತು. ಇಂದಿನ ಕಾಂಗ್ರೆಸ್ ರಾಜ್ಯದಲ್ಲಿ—

**ವೀರಣ್ಣ:**—ಸಾಕು ನಿನ್ನ ಕಾಂಗ್ರೆಸ್ಸಿನ ಬಡಿವಾರ! ಅದು ಆಳುವವರ ಆಳು; ಆಳುವವರನ್ನು ಅದು ಅಳಿಸಿಯೇ ಬಿಡುವದು. ನಾವು ಬಲವಂತರಾಗದೆ ಕಾಂಗ್ರೆಸ್ಸು ನಮಗೆ ನೆರವನ್ನೀಯುವದು ಸಾಧ್ಯವಿಲ್ಲ. **ಏಕೀಕರಣವೇ ಈ ಸಾಮರ್ಥ್ಯದ ಸೆಲೆ.**

**ಪಾರ್ಶ್ವನಾಥ:**—ಇರಲಿ! ಆರ್ಥಿಕಮಾತನ್ನು ಬಿಟ್ಟರೂ **ಉಳಿದ ಸಿದ್ಧತೆ**ಯಾದರೂ ಇದೆಯೋ ನಮ್ಮಲ್ಲಿ?

**ವಿರಣ್ಣ:**—ಅದಾವುದಿಲ್ಲ?

**ಪಾರ್ಶ್ವನಾಥ:**—ಯಾವುದಿದೆ? ಹೇಳು ನೋಡೋಣ!

**ವೀರಣ್ಣ:**—ನಿಮಗೆ ಬೇಕು ಯಾವುದು? ನಮ್ಮಲ್ಲಿ ಎಲ್ಲವೂ ಇದೆ.

**ಪಾರ್ಶ್ವನಾಥ:**— ಮುಖ್ಯಮಾತನ್ನೇ ಎತ್ತುವೆ. ದಯವಿಟ್ಟು ತಪ್ಪು ತಿಳಿವಳಿಕೆಯನ್ನು ಮಾತ್ರ ಮಾಡಿಕೊಳ್ಳಬೇಡ! ಇದು ನೋಡು! ಏಕೀಕರಣವೆನ್ನುವಿ! ನಮ್ಮ **ಮನಸ್ಸಿನ ಏಕೀಕರಣವಾಗಿ**ದೆಯೋ? ನಮ್ಮಲ್ಲಿ ಸಾವಿರ ಪಂಗಡಗಳು! ಬಹುಸಂಖ್ಯಾಕರಾದ ನಾವು ಅಲ್ಪಸಂಖ್ಯಾಕರನ್ನು ಸಿಕ್ಕಿದಲ್ಲಿ ಅರೆಯುತ್ತಲಿರುವೆವು! ಅವರನ್ನು ಪ್ರೀತಿಯಿಂದ ನಡೆಯಿಸಿಕೊಳ್ಳುವ ಔದಾರ್ಯವು ಇದೆಯೋ ನಮ್ಮಲ್ಲಿ? ಸುಮ್ಮನೆ ದೊಡ್ಡ ದೊಡ್ಡ

ಮಾತುಗಳನ್ನಾಡಿ ಪ್ರಯೋಜನವೇನು?

**ವೀರಣ್ಣ** :— ಅಹುದು ! ನೀನೆನ್ನುವದರಲ್ಲಿ ವಿಪುಲವಾದ ಅರ್ಥವಿದೆ ! ನಿಜ. ಆದರೆ ಇವೆಲ್ಲ ನಮ್ಮವರಲ್ಲಿ ಈವರೆಗೆ ಮೂಡದಿರುವದಕ್ಕೆ ಏಕೀಕರಣದ ಅಭಾವವೇ ಕಾರಣ ! ನಾಳೆ ಆಡಳಿತವನ್ನು ವಹಿಸುವ ಹೊಣೆ ಬೀಳಲಿ! ಗುಣಗಳೆಲ್ಲ ತಾವಾಗಿಯೇ ಅರಳುವವು ! ಹೆರವರ ತುಳಿತವು ನಮ್ಮಲ್ಲಿಯ ಗುಣಗಳನ್ನೆಲ್ಲ ಮಣ್ಣುಪಾಲು ಮಾಡಿದೆ.

**ಪಾರ್ಶ್ವನಾಥ** :—ಇಂದಿನ ಅನುಭವವಂತೂ ವಿಪರೀತವಿದೆ. ಮುಂದೇನಾಗುವದೊ ನೋಡಬೇಕು !

ಅಭ್ಯಾಸ. ೧೬.

**ಕೆಳಗೆ ಕಾಣಿಸಿದ ರೀತಿಯಲ್ಲಿ ಸಂವಾದವನ್ನು ಬರೆಯಿರಿ.**

೧. **ತಂದೆ ಮಕ್ಕಳಲ್ಲಿ**–ಡಾಕ್ಟರನಾದ ತಂದೆಯು ಮಗನಿಗೆ ತನ್ನ ಉದ್ಯೋಗವನ್ನು ಮಾಡಲು ಹೇಳುವ–ಮಗನು ವಕೀಲನಾಗಬಯಸುವ.

೨. **ವಿದ್ಯಾರ್ಥಿಗಳೀರ್ವರಲ್ಲಿ**–ವಸತಿಗೃಹನಿವಾಸ–ಹೊರಗಿನ ನಿವಾಸ ಇವುಗಳ ಹಿತಾಹಿತಗಳ ವಿಷಯವಾಗಿ. (೧೯೨೭)

೩. **ಇಬ್ಬರು ಮೆಟ್ರಿಕ್ ಪಾಸಾದ ವಿದ್ಯಾರ್ಥಿಗಳಲ್ಲಿ**–ಒಬ್ಬನು ಮುಂದೆ ಶಿಕ್ಷಣ ಪಡೆಯಲೆಳಸುವ–ಇನ್ನೊಬ್ಬ ಉದ್ಯೋಗವನ್ನು ಕೈಕೊಳ್ಳ ಬಯಸುವ.

೪. **ಅಣ್ಣ ತಂಗಿಯರಲ್ಲಿ**–ಗ್ರಂಥ ಸಂಗ್ರಹಾಲಯ–ವಸ್ತು ಸಂಗ್ರಹಾಲಯಗಳ ಸಾಪೇಕ್ಷ ಮಹತ್ವವನ್ನು ಕುರಿತು. (೧೯೨೮)

೫. **ಶಿಕ್ಷಕ–ಅಧ್ಯಾಪಕರಲ್ಲಿ**–ಪರೀಕ್ಷೆಯಲ್ಲಿಯ ದೈವಲೀಲೆಯ ವಿಷಯವಾಗಿ.

೬. **ಕುದುರೆ–ನಾಯಿಗಳಲ್ಲಿ**– ತಮ್ಮ ತಮ್ಮ ಉಪಯುಕ್ತತೆಯ ಹೆಚ್ಚಳವನ್ನು ಕುರಿತು. (೧೯೨೯)

೭. **ನೀನು ಮತ್ತು ನಿನ್ನ ಗೆಳೆಯನಲ್ಲಿ**–ಹಾಯ ಸ್ಕೂಲಿನಲ್ಲಿ ಎಲ್ಲ ವಿಷಯಗಳನ್ನು ಇಂಗ್ಲೀಷಿನಲ್ಲಿ ಕಲಿಸಬೇಕೆಂದು ನಿನ್ನ ಮತ–ಅವನ್ನು ತಾಯ್ನುಡಿಯಲ್ಲಿ ಕಲಿಸಬೇಕೆಂದು ನಿನ್ನ ಗೆಳೆಯನ ಅಭಿಪ್ರಾಯ. (೧೯೩೦)

೮. **ಅಂಚೆಯ ಜವಾನ–ಮತ್ತು ಪೋಲೀಸಜವಾನರಲ್ಲಿ**–ತಮ್ಮ ತಮ್ಮ ಕೆಲಸದ ಗುಣಾವಗುಣಗಳನ್ನು ಕುರಿತು.

೯. **ಶಿಕ್ಷಕ–ವಿದ್ಯಾರ್ಥಿಗಳಲ್ಲಿ**–ಸ್ವತಂತ್ರ ವೃತ್ತಿಯೂ ಉದ್ಧತತನವೂ–ಇವುಗಳಲ್ಲಿಯ ಭೇದವನ್ನು ಕುರಿತು. (೧೯೩೦)

೧೦. **ತಂದೆತಾಯಿಂದಿರಲ್ಲಿ**–ಇದೀಗ ಮೆಟ್ರಿಕ ಪಾಸಾದ ಮಗನ ಮತ್ತು ಮಗಳ ಮುಂದಿನ ಜೀವನವನ್ನು ಕುರಿತು.

೧೧. ಗೆಳೆಯರಿಬ್ಬರಲ್ಲಿ—ಜೀವಸತ್ವೋ-ಮರಣವೋ ಎಂಬ ಬಗ್ಗೆ. (೧೯೩೨)

೧೨. ಗೆಳೆಯರಿಬ್ಬರಲ್ಲಿ—ಒಬ್ಬ ವ್ಯಾಯಾಮದಲ್ಲಿ ನಿಷ್ಣಾತನು; ಇನ್ನೊಬ್ಬ ಮೆಟ್ರಿಕ್ ವರ್ಗದಲ್ಲಿ ಸೋವಲನೆಯುವವನು.

೧೩. ಬಂಡಿಯ ಎತ್ತು, ಟಾಂಗಾದ ಕುದುರೆ ಇವುಗಳಲ್ಲಿ-ಮೋಟಾರದ ವಿಷಯವಾಗಿ. (೧೯೩೩)

೧೪. ತಂದೆಮಕ್ಕಳಲ್ಲಿ—ಮಗನು ಉದ್ಯೋಗ ಮಾಡಬೇಕೆಂದು ತಂದೆಯು ಅನ್ನುವನು. ಮಗನು ಅಭ್ಯಾಸವನ್ನು ಮುಂದುವರಿಸಬೇಕೆನ್ನುವನು.

೧೫. ಹುಡುಗಿಯರೀರ್ವರಲ್ಲಿ—ಹೆಂಗಸರಿಗೆ ವ್ಯಾಯಾಮದ ಅವಶ್ಯಕತೆ-ಅನವಶ್ಯಕತೆಯನ್ನು ಕುರಿತು. (೧೯೩೪)

೧೬. ಸೈನಿಕ-ನಾವಿಕರಲ್ಲಿ-ತಮ್ಮ ತಮ್ಮ ವ್ಯವಸಾಯದ ಸುಖ-ದುಃಖಗಳನ್ನು ಕುರಿತು. (೧೯೩೫)

೧೭. ಗೆಳೆಯರಿಬ್ಬರಲ್ಲಿ—ಸಿನೀಮಾದ ಹಿತಾಹಿತವನ್ನು ಕುರಿತು. (೧೯೩೬)

೧೮. ಮೆಟ್ರಿಕ್ ಪರೀಕ್ಷೆಗೆ ಕುಳಿತ ವಿದ್ಯಾರ್ಥಿಗಳೀರ್ವರಲ್ಲಿ—ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವ ಸಂಭವದ ಬಗ್ಗೆ. (೧೯೩೭)

೧೯. ಡಾಕ್ಟರ-ರೋಗಿ(Patient) ಇವರಲ್ಲಿ-ತನಗೊಂದು ದೊಡ್ಡ ರೋಗವಾಗಿದೆ ಎಂಬ ರೋಗಿಯ ಕಲ್ಪನೆಯನ್ನು ಕುರಿತು.

೨೦. ಮೋಟರ ಡ್ರೈವರ್-ಸೈಕಲ್ಲಿನವನು ಇವರಲ್ಲಿ—ಮೋಟಾರದ ಧಕ್ಕೆಯಿಂದ ಸೈಕ್ಲಿಸ್ಟನು ಬಿದ್ದಿರುವ. (೧೯೩೮)

## ೪. ರಹಸ್ಯ-ಗ್ರಹಣ

### ೧. ಅಂದರೇನು ?

ಒಂದು ಗದ್ಯ ಅವತರಣದಲ್ಲಿ ಅಡಗಿರುವ ಸಂಪೂರ್ಣ ಅರ್ಥವನ್ನು ಅರಿಯುವದೇ ‘ ರಹಸ್ಯ-ಗ್ರಹಣ ’ವು. ‘ ರಹಸ್ಯವು ’ ಅವತರಣದಲ್ಲಿಯ ಶಬ್ದ-ಶಬ್ದಗಳಲ್ಲಿಯೂ, ವಾಕ್ಯ-ವಾಕ್ಯಗಳಲ್ಲಿಯೂ, ಅವುಗಳ ಮಧ್ಯದಲ್ಲಿಯೂ ಅಡಗಿರುವುದು. ಒಮ್ಮೊಮ್ಮೆ ಶಬ್ದಗಳ-ವಾಕ್ಯಗಳ ಮೇಲಿನ ಅರ್ಥವು ತಿಳಿದರೂ, ಅವು ಸೂಚಿಸುವ ಬೇರೊಂದು ಅರ್ಥವು ಬೇಗನೆ ಹೊಳೆಯುವದಿಲ್ಲ. ಅದೇ ಅವುಗಳ ನಡುವಿನ ಮಹತ್ವದ ಅರ್ಥ. ಇದನ್ನರಿಯಲು ಸಾಲುಗಳ ಮಧ್ಯದಲ್ಲಿ ಓದಬೇಕು ’ (Read between the lines) ಎಂದು ಆಂಗ್ಲಭಾಷೆಯಲ್ಲಿ ಹೇಳಿರುವರು. ಬರಹಗಾರನು ಹಿರಿಯನಿದ್ದಷ್ಟು ಆತನ ಬರಹವು ರಹಸ್ಯಪೂರ್ಣವಿರುವುದು. ಅದನ್ನರಿಯಲು ತುಂಬ ಅಭ್ಯಾಸಬೇಕು. ಸರಿ

ಯಾದ ಅಭ್ಯಾಸಬಲದಿಂದಲೇ ಅದನ್ನರಿಯಬಹುದು. ಅದರ ಅಂದವನ್ನು ಸವಿಯಬಹುದು.

೨. ಬೇಕೇತಕ್ಕೆ ?

(೧) ಓದಿನಿಂದಲೇ ವೋದ, ಓದಿನಿಂದಲೆ ಬೋಧ! ಸರಿ. ಆದರೆ ಓದಿನ ಅರ್ಥವು ತಿಳಿಯಬೇಕಲ್ಲ! ಅರ್ಥದ ಮರ್ಮವನ್ನು ಅರಿಯದೆ ಓದಿ–ಕಲಿತ ಗದ್ಯ–ಪದ್ಯಗಳು ಕತ್ತೆಯು ಮುತ್ತು ಹೊತ್ತಂತೆ. ಅವುಗಳ ಬೆಲೆಯು ತಿಳಿಯದ್ದರಿಂದ ಅವು ನಮಗೆ ಸರಿಯಾದ ವೋದ–ಪ್ರಬೋಧಗಳನ್ನು ಸಲ್ಲಿಸಲರಿಯವು.

(೨) ನಮ್ಮ ಜೀವನದ ಅಂದ–ಚಂದಗಳು, ಅದರ ಮೇಲ್ಮೆ–ಕೀಳ್ಮೆಗಳು, ಅಡೆ–ತಡೆಗಳು ನಮ್ಮ ಓದಿನ ನೆರವನ್ನು ಕೆಲ–ಮಟ್ಟಿಗೆ–ಒಮ್ಮೊಮ್ಮೆ ಬಹು ಮಟ್ಟಿಗೆ–ಅವಲಂಬಿಸಿರುವವು. ನಮ್ಮ ಇಂದಿನ ಬಾಳಿಗೆ ಅತ್ಯಗತ್ಯವಾದ ಅನೇಕ ವಿಷಯಗಳನ್ನು ನಾವು ಗ್ರಂಥಗಳಿಂದ ಕಲಿಯಬಹುದು. ಆದುದರಿಂದ ಅವುಗಳ ರಹಸ್ಯವನ್ನು ಅರಿಯಲು ಕಲಿಯುವದು ಅತ್ಯವಶ್ಯ.

(೩) ಹಿಂದಿನ–ಇಂದಿನ ಹಿರಿಯರು ತಮ್ಮ ಜೀವನ ಸತ್ವವನ್ನೆಯೆ ಗ್ರಂಥರೂಪದಿಂದ ನಮಗೆ ಸಲ್ಲಿಸಿರುವರು. ತಮ್ಮ ಆಳವಾದ ಮನನದಿಂದಲೂ, ವಿಶಾಲವಾದ ಅನುಭವದಿಂದಲೂ, ಸೂಕ್ಷ್ಮವಾದ ಅಧ್ಯಯನ ನಿರೀಕ್ಷಣೆಗಳಿಂದಲೂ ಅನೇಕ ದಿವ್ಯ ತತ್ವಗಳನ್ನು ಕಂಡುಹಿಡಿದು, ಅವನ್ನವರು ನಮಗಾಗಿ ತಮ್ಮ ಹಿರಿ–ಹೊತ್ತಿಗೆಗಳಲ್ಲಿ ಇರಿಸಿರುವರು. ಅದೇ ಅವರು ನಮಗಾಗಿ ಕಾದಿಟ್ಟ ಬೆಲೆಯುಳ್ಳ ಸೊತ್ತು. ಇಂಥ ಮೌಲಿಕ ಸೊತ್ತನ್ನು ಉಪೇಕ್ಷಿಸುವದು ಸರಿಯೆ ?

(೪) ಹಿರಿಯರ ಅನುಭವ ಕಿರಿಯರ ಕೈದೀಪ. ಅದರ ಬೆಳಕಿನಲ್ಲಿ ಬಾಳುವವನಿಗೆ ಜೀವನದಲ್ಲಿಯ ತಗ್ಗು–ದಿನ್ನೆಗಳು ನಿಚ್ಚಳವಾಗಿ ಕಾಣುವವು. ಎಡವಿಯುರುಳುವ ಪ್ರಸಂಗಗಳು ತಪ್ಪುವವು. ತಾಗುವ ಮುನ್ನವೇ ಅವನಿಗೆ ಬಾಗಲು ಬರುವದು. ಬಾಳ್ವೆಯು ಅವರ ಜ್ಞಾನದ ನೆರವಿನಿಂದ ಮೇಲ್ಮೆಯನ್ನು ಪಡೆಯುವುದು. ಅದಕ್ಕಾಗಿಯೇ ಅವರ ಸಂದೇಶದ ತಿರುಳನ್ನು ಅರಿಯಲೆತ್ನಿಸುವದು.

೩. ಹೇಗೆ ?

(೧) ಈ ರಹಸ್ಯವನ್ನು ಅರಿಯಬಯಸುವವರು ನಾವು ಹಿಂದೆ 'ಸಾರ

ಸಂಗ್ರಹದ’ ಪೀಠಿಕೆಯಲ್ಲಿ ಅರುಹಿದ ‘ಪೂರ್ವಸಿದ್ಧತೆಯನ್ನು ಮೊದಲು ಚೆನ್ನಾಗಿ ಮಾಡಿಕೊಳ್ಳಬೇಕು. ತರುವಾಯ ಕೆಳಗಿನ ಮಾತುಗಳನ್ನು ಗಮನಿಸಬೇಕು.

(೨) ‘ಓದು ! ಮರಳಿ ಮರಳಿ ಓದು! ಓದಿದ್ದನ್ನು ಅರಗಿಸು-ಕರಗಿಸು’ ಅಂದರೆ ‘ಓದಿದ್ದು ತಿಳಿಯಬಹುದು, ತಿಳಿದದ್ದು ಹೊಳೆಯಬಹುದು, ಹೊಳೆದದ್ದು ಇಳಿಯಬಹುದು. ಉಳಿಯಬಹುದು’ ಎಂಬುದು ಬಲ್ಲವರ ಬೋಧೆ. ಇದನ್ನು ನಾವು ಚೆನ್ನಾಗಿ ಲಕ್ಷಿಸಬೇಕು.

(೩) ‘ಶ್ರವಣ (ವಾಚನ), ಮನನ (ಆಲೋಚನೆ), ನಿದಿಧ್ಯಾಸ (ತನ್ಮಯತೆ) ಇವೇ ಅರಿವಿನ ಮುಖ್ಯ ಸಾಧನಗಳು. ಅರಿಯಲು ಮೊದಲು ತುಂಬ ಕೇಳಬೇಕು-ಓದಬೇಕು. ಓದಿದ ವಿಷಯವು ಹೊಳೆಯಲು ಆಳವಾಗಿ ಆಲೋಚಿಸಬೇಕು. ‘ಓದುವಾಗ ಆಲೋಚಿಸು,’ ‘ಆಲೋಚಿಸುತ್ತ ಓದು.’ ಮನನದಿಂದ ಶಬ್ದಗಳ-ವಾಕ್ಯಗಳ ಒಡಲನ್ನು ಸೇರಿ ಅವುಗಳ ಹಿಂದೆ ಹಾಗೂ ಆಚೆಗಿರುವ ಸಂಪೂರ್ಣ ಅರ್ಥವನ್ನು, ಸೂಕ್ಷ್ಮ ಸೂಚಕತೆಯನ್ನು ಅರಿತುಕೊಳ್ಳು. ಕೊನೆಗೆ ಆ ಅರ್ಥದೊಡನೆ ತನ್ಮಯನಾಗಲು ಯತ್ನಿಸು. ಅಂದರೆ ಆ ಬರಹದ ಅಂತರಂಗವು-ರಹಸ್ಯವು ಚೆನ್ನಾಗಿ ಹೊಳೆದು ಅದು ಜೀವನದಲ್ಲಿ ಇಳಿಯಬಹುದು-ಉಳಿಯಬಹುದು.

(೪) ಕೇಳಿದ್ದನ್ನು ಹೇಳಲು ಬರಬೇಕು; ಅರಿತದ್ದನ್ನು ಅರುಹಲು ಬರಬೇಕು. ಚೆನ್ನಾಗಿ ತಿಳಿಯಲು, ಸರಿಯಾಗಿ ತಿಳಿಸಲು ಕಲಿ. ತಿಳಿಸಲು ಬಂದರೇನೇ ಅದು ತಿಳಿಯಿತೆಂದು ತಿಳಿ. ತಿಳಿಸಲು ಬರುವದೇ ತಿಳುವಳಿಕೆಯ ಒರೆಗಲ್ಲು. ಅದಕ್ಕೂ ಅಭ್ಯಾಸವು ಬೇಕು.

(೫) ಅದಕ್ಕಾಗಿಯೆ ಈ ವಿಷಯವು ಈ ರೀತಿ ನಮ್ಮ ಅಭ್ಯಾಸಕ್ರಮದಲ್ಲಿ ಸೇರಿಸಲಾದುದು. ಹಿರಿಯರ ಬರಹದಲ್ಲಿಯ ಕೆಲ ಅವತರಣಗಳನ್ನು ಕೊಟ್ಟು, ಅವನ್ನು ಅಭ್ಯಸಿಸಲು ಹೇಳಿ, ಅವುಗಳ ರಹಸ್ಯವು ಸರಿಯಾಗಿ ತಿಳಿದಿದೆಯೋ ಇಲ್ಲವೊ ಎಂಬುದನ್ನು ಅರಿಯಲು, ಅದನ್ನು ಕುರಿತು ಕೆಲ ಪ್ರಶ್ನೆಗಳನ್ನು ಕೇಳುವರು. ಅವುಗಳಿಗೆ ನಮ್ಮಿಂದ ಸರಿಯಾದ ಉತ್ತರಗಳನ್ನು ಅಪೇಕ್ಷಿಸುವರು. ಇದೊಂದು ಇತ್ತೀಚೆಗೆ ಪ್ರಚುರವಾದ ನೂತನ ಪ್ರಥೆ. ಕೆಳಗೆ ಮಾದರಿಗಳನ್ನು ಕೊಟ್ಟಿದೆ. ಅವನ್ನು ಅಭ್ಯಸಿಸಿ ಅಭ್ಯಾಸದಲ್ಲಿಯ ಬೇರೆ

ಅವತರಣಗಳ ಅಡಿಯಲ್ಲಿ ಕೇಳಿದ ಪ್ರಶ್ನೆಗಳಿಗೆ ಉತ್ತರಗಳನ್ನು ಬರೆಯಲು ಯತ್ನಿಸಿರಿ.

**ಮಾದರಿಗಳು:—**

ಕೆಳಗಿನ ಅವತರಣಗಳನ್ನು ಚೆನ್ನಾಗಿ ಮನನಪೂರ್ವಕವಾಗಿ ಓದಿ ಅವುಗಳ ಅರ್ಥವನ್ನು ಅರಿತುಕೊಳ್ಳಿ. ತರುವಾಯ ಅವುಗಳ ಅಡಿಯಲ್ಲಿ ಕೇಳಿದ ಪ್ರಶ್ನೆಗಳಿಗೆ ಸ್ವಂತ ಉತ್ತರಗಳನ್ನು ಬರೆಯಿರಿ. ಅವನ್ನು ಇಲ್ಲಿ ಬರೆದ ಉತ್ತರಗಳೊಡನೆ ಹೋಲಿಸಿ, ಸರಿಪಡಿಸಿಕೊಳ್ಳಿರಿ.

೧

ಆ ದಿನ ಆಶ್ರಮದಲ್ಲಿ ತುಂಬಾ ಗಡಿಬಿಡಿಯು. ಹನ್ನೆರಡು ವರ್ಷ ಗುರುಗೃಹದಲ್ಲಿ ಬ್ರಹ್ಮಚರ್ಯದಿಂದ ಇದ್ದು ಶ್ರದ್ಧಾಪೂರ್ವಕ ಅಧ್ಯಯನ ಮಾಡಿ ಕುಮಾರರು ತಮ್ಮ ಮನೆಗೆ ಹೊರಡುವ ದಿನವದು. ಪ್ರಾತಃಕಾಲದಲ್ಲಿ ಸ್ನಾನ ಸಂಧ್ಯಾದಿಗಳನ್ನು ಮುಗಿಸಿಕೊಂಡು ತೇಜಃಪುಂಜ ವಿದ್ಯಾರ್ಥಿಗಳು ತಮ್ಮ ಗುರುಗಳ ಅಪ್ಪಣೆ ಪಡೆಯಲು ಅವರೆದುರಿಗೆ ಬಂದರು. ಆ ರಮ್ಯಸ್ಥಲ, ಸಮವಯಸ್ಕರ ಸರಸವಾದ ಸಂಗತಿ, ತಂದೆಯಂತಿರುವ ಪ್ರೇಮಪೂರ್ಣ ಗಂಭೀರ ಗುರುಗಳ ಸಹವಾಸ ಇವುಗಳನ್ನು ಬಿಟ್ಟು ಅಜ್ಞಾತ ಜಗತ್ತಿನಲ್ಲಿ ಕಾಲಿಡಲು ಹಿಂದೆ ಮುಂದೆ ನೋಡುತ್ತಿರುವ ಆ ಕುಮಾರರೆಲ್ಲರೂ ಸಾಷ್ಟಾಂಗ ಪ್ರಣಿಪಾತ ಮಾಡಿ ಗದ್ಗದ ಕಂಠದಿಂದ, 'ಗುರುದೇವಾ! ಅಪ್ಪಣೆಯಾಗಬೇಕು' ಎಂದು ಒಬ್ಬೊಬ್ಬರೆ ತಮ್ಮ ಸ್ಥಲಕ್ಕೆ ಹೋಗಿ ಕುಳಿತರು. ಅಜ್ಞಾತಸಮುದ್ರದಲ್ಲಿ ಮೊಟ್ಟಮೊದಲು ನಾವನ್ನು ನೂಕುವ ನಾವಾಡಿಗನು ಅನುಭವಿಸುವ ಸಂಮಿಶ್ರ ಭಾವಕಲ್ಲೋಲವನ್ನು ಅವರೆಲ್ಲರು ಆ ದಿನ ಅನುಭವಿಸಿದರು.

ಈ ರೀತಿ ಮಿಶ್ರಭಾವನೆಗಳಿಂದ ತುಂಬಿದ ಶಿಷ್ಯವೃಂದವನ್ನು ಅನುಲಕ್ಷಿಸಿ ಗುರುಗಳು ಪ್ರೇಮಭರದಿಂದ ಕಣ್ಣೀರು ತುಂಬಿ ಅವರಿಗೆ ಅಂದದ್ದು :—

'ನನ್ನ ಹೃದಯಮಣಿಗಳಿರಾ, ನೀವು ಈ ದಿನ ನನ್ನನ್ನು ಬಿಟ್ಟು ಹೋಗುವಾಗ ನನಗೆ ಆಗುವ ದುಃಖವನ್ನು ಯಾವ ಪರಿ ವರ್ಣಿಸಲಿ? ತಾಯಿಗೂ ಮಗುವಿಗೂ ಆಗುವ ವಿಯೋಗವಿರಹವು ಇದಕ್ಕೂ ಹೆಚ್ಚು ಕಷ್ಟದಾಯಕವಿರಲಿಕ್ಕಿಲ್ಲ, ಇಷ್ಟೇ ನಾನು ಹೇಳಬಲ್ಲೆನು. ಆದರೆ ಈ ಭಾವನೆಗಳನ್ನು ನಾವು ಸಂಯಮಿಸಲಿಕ್ಕೆಬೇಕು. ನಮ್ಮ ಧ್ಯೇಯವನ್ನು ನಾವು ಯಾವಾಗಲೂ ನಿಚ್ಚಳವಾಗಿ ಕಣ್ಣಮುಂದಿಟ್ಟುಕೊಂಡು ಅದರಂತೆ ನಡೆಯ

ಲಿಕ್ಕೆ ಬೇಕು. ನೀವು ಇಲ್ಲಿ ನಿರಂತರ ನಿವಾಸಿಗಳಾಗಲಿಕ್ಕೆ ಬಂದವರಲ್ಲ. ಆದರೆ ಇಲ್ಲಿ ವಿದ್ಯೆ ಕಲಿತು ವಿಶ್ವಪ್ರಪಂಚದಲ್ಲಿ ವೀರಚರಿತ್ರರಂತೆ ವರ್ತಿಸುವ ಆಕಾಂಕ್ಷೆಯಿಂದ ಬಂದಿರುವಿರಿ. ಅಂದ ಬಳಿಕ ಈಗ ಈ ಪ್ರಸಂಗವು ಬಂದಿದೆ. ಮನುಷ್ಯನು ಮಲಗುವದು ಪುನಃ ಉತ್ಸಾಹದಿಂದ ಕಾರ್ಯಮಾಡಬೇಕೆಂದು; ಮನುಷ್ಯನು ಜ್ಞಾನ ಪಡೆಯುವದು ತಾನು ಸಮರ್ಥನಾಗಿ ವೀರಚರಿತನಾಗಬೇಕೆಂದು; ಹಾಗೆ ಮನುಷ್ಯನು ಕಲಿಯುವದು ಅಥವಾ ಆಶ್ರಮಕ್ಕೆ ಬರುವದು, ಅವನು ಪುನಃ ವಿಶಾಲಜಗತ್ತಿನಲ್ಲಿ ತನ್ನ ಕರ್ತವ್ಯವನ್ನು ಉತ್ತಮರೀತಿಯಿಂದ ಮಾಡಲೋಸುಗ ಹೋಗುವದಕ್ಕಾಗಿ. ಸಾಧನವು ಎಷ್ಟೇ ಮನೋಹರವಿದ್ದರೂ ಮನುಷ್ಯನು ಸಾಧ್ಯವನ್ನು ಮರೆಯಕೂಡದು. ಇಲ್ಲದಿದ್ದರೆ ಬಲು ಚೆಂದವಾಗಿದೆ ಎಂದು ಬಾರಿಸದೆ ಬರೀ ವೀಣೆಯನ್ನು ನೋಡುತ್ತ ಕುಳಿತ ಮರುಳ ಸಂಗೀತಗಾರನ ಕಥೆಯಂತೆ ನಿಮ್ಮ ಹಾಡಾಗುವದು. ಜ್ಞಾನದ ಪರೀಕ್ಷೆ ಕರ್ಮದಲ್ಲಿ ಹೊರತು ಕಲ್ಪನೆಯಲ್ಲಲ್ಲ, ವಿದ್ಯೆಯ ಪರೀಕ್ಷೆಯು ಪ್ರಪಂಚದಲ್ಲಿ ಹೊರತು ವಿದ್ಯಾಲಯದಲ್ಲಿ ಅಲ್ಲ. —ರಂಗನಾಥ ದಿವಾಕರ

**ಪ್ರಶ್ನೆಗಳು :—**

**೧. ಕುಮಾರರು ಹಿಂದೆಮುಂದೆ ನೋಡುವ ಕಾರಣವೇನು?**

**೨. ಅವರಲ್ಲಿ ಜನಿಸಿದ ಮಿಶ್ರಭಾವನೆಗಳಾವವು? ಎಂತಹವು?**

**೩. ಗುರುಗಳು ಅವರಿಗೆ ಹೇಳಿದುದು ಏನನ್ನು?**

**೪. ಜ್ಞಾನದ ಪರೀಕ್ಷೆ ಕರ್ಮದಲ್ಲಿ ಹೇಗಾಗುವದು?**

**೫. ನಿದ್ರೆ-ವೀಣೆಗಳ ದೃಷ್ಟಾಂತಗಳು ಏನನ್ನು ಸೂಚಿಸುವವು?**

**ಉತ್ತರಗಳು :—**

(೧) ಆಶ್ರಮದ ರಮ್ಯ ನಿವಾಸ, ಗೆಳೆಯರ ಸರಸ ಸಂಗತಿ, ಗುರುಗಳ ಪ್ರೇಮಲ ಸಹವಾಸ, ಇವುಗಳಿಂದ ದೊರೆತ ಸೌಖ್ಯವನ್ನು ತೊರೆದು, ಅಪರಿಚಿತವಾದ ಪ್ರಪಂಚವನ್ನು ಸೇರಲು ಅವರಿಗೆ ಕೂಡಲೆ ಮನಸ್ಸಾಗಲಿಲ್ಲ. ಮತ್ತು ಅದು ತೀರ ಸ್ವಾಭಾವಿಕವಾದ ಸಂಗತಿ. ಯಾರು ಬಲ್ಲರು, ಹೊರಗಣ ಪ್ರಪಂಚದಲ್ಲಿ ಏನಿದೆಯೆಂಬುದನ್ನು? ಅಲ್ಲಿಯ ಜನರೆಂಥವರು? ಅವರ ರೀತಿಯೇನು, ನೀತಿಯೇನು, ಬಲ್ಲವರಾರು? ಇದ್ದುದನ್ನು ಬಿಟ್ಟು ಇಲ್ಲದುದನ್ನು ಹಿಡಿಯಬಯಸುವದು ಸರಿಯೆ? ಅರಿತದ್ದನ್ನು ತೊರೆದು ಅರಿಯದುದನ್ನು ಸೇರುವದು ಒಳಿತೆ? ಈ ಸಂದೇಹವೇ ಅವರನ್ನು ಹಿಂದು ಮುಂದು ನೋಡಲು ಹಚ್ಚಿದುದು.

(೨) ಗುರುಗೃಹದ ಶಾಂತಿ-ಸೌಹಾರ್ದಗಳು ಇನ್ನು ಮುಂದೆ ದೊರೆಯುವಲ್ಲ ಎಂಬ ವ್ಯಸನ, ಹೊರಗಣ ಜೀವನ ಅದೆಂತಹದೊ, ಎಂಬ ಸಂದೇಹ. ಆದರೆ ಅಲ್ಲಿ

ಹೊಸಹೊಸದರಿಯ ಅನುಭವವನ್ನು ಪಡೆಯುವ ಕುತೂಹಲ, ತಮ್ಮ ಶೀಲಚಾರಿತ್ರವನ್ನು ಕಾಣಿಸುವ, ಅದರಿಂದ ಎಲ್ಲರನ್ನು ಬೆರಗುಗೊಳಿಸಿ ಅದರಿಂದ ಮನ್ನಣೆಯನ್ನು ಪಡೆಯುವ ಬಲವಾದ ಬಯಕೆ, ಇವೇ ಮುಂತಾದ ಭಾವನೆಗಳು ಕುಮಾರರ ಎದೆಯಲ್ಲಿ ಮೂಡಿರಬಹುದು. ಇದೇ ನೌಕೆಯನ್ನು ನಡೆಯಿಸಲು ಕಲಿತ ನಾವಿಕನು, ಅದನ್ನು ಅಪಾರವಾದ ಸಾಗರದಲ್ಲಿ ನೂಕುವಂತೆ, ಇವರು ತಮ್ಮ ಜೀವನ ನೌಕೆಯನ್ನು ಸಂಸಾರ ಸಾಗರದಲ್ಲಿ ನೂಕುತ್ತಿದ್ದರು. ಆದುದರಿಂದ ಆತನ ಮನಸ್ಥಿತಿಯಂತೆಯೇ ಇವರದೂ ಆದುದರಲ್ಲಿ ಆಶ್ಚರ್ಯವಿಲ್ಲ!

(೩) ಪ್ರೇಮಭರದಿಂದ ವಿಯೋಗವ್ಯಾಕುಲರಾದ ಗುರುಗಳು ತಮ್ಮ ಆವೇಗವನ್ನು ತಡೆದು, ಹೊರಹೊರಟ ಕುಮಾರರಿಗೆ ಈ ರೀತಿ ಬೋಧಿಸಿದರು: 'ನನ್ನ ಹೃದಯಮಣಿಗಳೆ! ನಿಮ್ಮ ಧ್ಯೇಯವನ್ನು ಮರೆಯದಿರಿ! ಅದು ನಿತ್ಯವ ನಿಮ್ಮೆದುರು ಮೆರೆಯಲಿ! ನೀವಿಲ್ಲಿ ಕಲಿತ ವಿದ್ಯೆಯನ್ನು ವಿಶ್ವಪ್ರಪಂಚದಲ್ಲಿ ಬಳಸಿರಿ. ನಿಮ್ಮ ಜ್ಞಾನ, ಬಲ, ಚಾರಿತ್ರ್ಯ ಇವುಗಳ ಉಪಯೋಗವು ಇಡೀ ಜಗತ್ತಿಗೆ ಚೆನ್ನಾಗಿ ಆಗಲಿ! ಆಶ್ರಮವಾಸವು-ವಿದ್ಯಾರ್ಜನೆಯು ಸಾಧನ; ಲೋಕಕಲ್ಯಾಣವು ಸಾಧ್ಯ. ಸಾಧ್ಯಕ್ಕಾಗಿ ಸಾಧನ; ಸಾಧನವೇ ಸಾಧ್ಯವಾಗಕೂಡದು. ಇದನ್ನು ಮರೆಯದೆ, ಇಲ್ಲಿ ಕಲಿತುದನ್ನು ಅಲ್ಲಿ ಬಳಸುವ ನಿಮ್ಮ ಕರ್ತವ್ಯಕರ್ಮವನ್ನು ಉತ್ಸಾಹದಿಂದ ನೆರವೇರಿಸಿ, ನಿಮ್ಮ ಹಾಗೂ ಪ್ರಪಂಚದ ಮಂಗಲವನ್ನು ಸಾಧಿಸಿರಿ.

(೪) ನಾವು ಪಡೆದ ಜ್ಞಾನವು ಸರಿಯಾದುದೊ, ಅಲ್ಲವೋ-ಹಿತಕರವೊ, ಅಹಿತಕರವೊ, ಉಪಯುಕ್ತವೊ-ಅನುಪಯುಕ್ತವೊ ಎಂಬುದು, ಅದನ್ನು ನಮ್ಮ ಹಾಗೂ ಅನ್ಯರ ಜೀವನದಲ್ಲಿ ಬಳಸಿದಾಗಲೇ ಚೆನ್ನಾಗಿ ಗೊತ್ತಾಗುವದು. ಜ್ಞಾನವು ಬಾಳಿನಲ್ಲಿಳಿಯುವದು ಆಚರಣೆಯ ಮುಖಾಂತರ, ಕರ್ಮದ ಮುಖಾಂತರ. ಆ ಕರ್ಮದಿಂದುಂಟಾದ ಒಳಿತು-ಕೆಡಕು ಪರಿಣಾಮಗಳನ್ನು ಕಂಡಾಗಲೇ ಅದರ ಯೋಗ್ಯಾಯೋಗ್ಯತೆಯ ಪರಿಚಯವು ನಮಗಾಗುವದು. ಅಲ್ಲಿಯವರೆಗೆ ಅದರ ಯಥಾರ್ಥವಾದ ಕಲ್ಪನೆಯು ನಮಗೆ ಆಗದು. ಆದುದರಿಂದ ಬರಿ ಮೆದುಳನ್ನೆಯೇ ಆಶ್ರಯಿಸಿದ ಜ್ಞಾನವು ಪರೀಕ್ಷೆಯ ಅಳವಿಗೆ ನಿಲುಕದು, ಸಿಲುಕದು.

(೫) ನಿದ್ರೆಯಲ್ಲಿ ದೊರೆತ ವಿಶ್ರಾಂತಿಯು ಹೊಸಹುರುಪನ್ನು ನೀಡುವಂತೆ, ಆಶ್ರಮದಲ್ಲಿ ದೊರೆತ ಶಿಕ್ಷಣವು ಹೊಸ ಬೆಳಕನ್ನೂ, ನವ ಚೈತನ್ಯವನ್ನೂ ದಯಪಾಲಿಸುವದು. ಆಶ್ರಮದ ವಿಶ್ರಾಂತಿ ಜೀವನವು ನಿದ್ರೆಯ ಶಾಂತಿಯಂತೆ ನವಜೀವನವನ್ನು ಸಲ್ಲಿಸುವದು.

ವೀಣೆಯನ್ನು ಕುಶಲ ಬೆರಳುಗಳಿಂದ ನುಡಿಸಿದರೆ, ಅದರಿಂದ ಸ್ವರ್ಗೀಯ ಸಂಗೀತವು ನುಸುಳಿ ಅದು ಕೇಳುವವರನ್ನು ಆನಂದ-ಸಾಗರದಲ್ಲಿ ತೇಲಿಸಬಹುದು. ಅದನ್ನು ಬರಿ ನೋಡುತ್ತ ಕುಳಿತರೆ ಇದಾಗಬಹುದೇ? ಅದೇ ಮೇರೆಗೆ ನಾವು ಜ್ಞಾನವನ್ನು ಬರಿ ಬುದ್ಧಿಯಲ್ಲಿರಿಸಿಕೊಂಡು ಕುಳಿತರೆ ಅದರಿಂದಾಗುವದೇನು? ಗಳಿಸಿದ ಜ್ಞಾನವನ್ನು ಲೋಕಕಲ್ಯಾಣಕ್ಕಾಗಿ ಬಳಸಬೇಕು. ಅದರಲ್ಲಿಯೇ ಜ್ಞಾನದ ಸಾಫಲ್ಯ.

(೨)

ಪ್ರಪಂಚದಲ್ಲಿ ಸಾಮಾನ್ಯವಾಗಿ ಜನವೆಲ್ಲವೂ ಪ್ರಾಣಿಗಳಂತೆ ಜೀವಿಸುತ್ತಿದೆ. ಒಂದನ್ನೊಂದು ಕೊಂದು ಬದುಕುತ್ತಿದೆ. ಇದಕ್ಕೆ ಬದುಕಿನ ಯುದ್ಧ ಎಂದು ಹೆಸರಾದ ಹೆಸರು. ....ಒಂದನ್ನೊಂದು ತಿಂದು ಬದುಕುವದು ಬದುಕಲ್ಲ, ಸಾವು. ಒಂದನ್ನೊಂದು ತಿಳಿದು ಬದುಕುವದು ಬಾಳು. ....ಪ್ರಾಣಿಗಳಂತೆ ಬದುಕಬೇಡಿರಿ, ಜೀವಿಗಳಂತೆ ಬಾಳಿ; ಪ್ರಾಣಹಿಂಡಿ ಜೀವತಿನ್ನಬೇಡಿ; ಜೀವಕ್ಕೆ ಜೀವ ಕೊಟ್ಟು ಜೀವಿಸಿರಿ. ....ಹಾಗಾದರೆ ನಮ್ಮ ಬದುಕಿನ ಕೊರತೆಯೇನು? ನಮ್ಮ ಪ್ರಾಣಕ್ಕೆ ಸಹನೆಯಿಲ್ಲ, ನಮ್ಮ ಬುದ್ಧಿಗೆ ವಿವೇಕ ಕಡಿಮೆ, ನಮ್ಮ ಹೃದಯಕ್ಕೆ ರಸಿಕತೆ ಇನ್ನೂ ಬೇಕು. ಪ್ರಾಣಿಜೀವನದ ವೈಷಮ್ಯದಿಂದ ಸಹನೆ ಅಸಹನೆಯಾಗುವದು, ಇಲ್ಲವೆ ಹೆದರಿ ಹೇಡಿಯ ಅತಿಸಹನೆಯಾಗುವದು. ಪ್ರಾಣಿಬುದ್ಧಿ ಅವಿವೇಕಕ್ಕೆ ಎಳೆಯುವದು, ಇಲ್ಲದಿದ್ದರೆ ದೀರ್ಘ ಪಾಂಡಿತ್ಯದ ಅತಿವಿವೇಕದಲ್ಲಿ ಹಾಳಾಗುವದು. ಪ್ರಾಣಿಹೃದಯವು ಮಾಡಿದ್ದೆಲ್ಲ ರುಚಿಯೆಂದು ಕಾಮನ ಹುಚ್ಚಿಕ್ಕೆಳಸುವದು, ಅದಿಲ್ಲದಿದ್ದರೆ ಅರಸಿಕನಾಗಿ ಬೈರಾಗಿಯ ಬೂದಿಯಲ್ಲಡಗುವುದು. ಈ ವೈಷಮ್ಯವನ್ನು ತಪ್ಪಿಸಿ ಸಮತೂಕದ ಜೀವನವು ಬರಬೇಕಾದರೆ ನಾವು ಜೀವಿಗಳೆಂಬ ಎಚ್ಚರದಲ್ಲಿ ಬಾಳಬೇಕು. ಭಾವಗಳಲ್ಲಿ ರಸದೃಷ್ಟಿ ಬೇಕು. ....ಆದರೆ ಹೀಗೆ ವಿವೇಕದ ರಸಿಕತೆಯನ್ನು ಕಾಯ್ದುಕೊಳ್ಳಲು ನಮಗೆ ಬೇಕು ಪ್ರಾಣಶಕ್ತಿಯ ತಾಳ್ಮೆ, ಸೈರಣೆ, ಧಾರಣೆ. ಪ್ರಾಣದ ಅಸಹನೆಯಿಂದಲೆ ವಿವೇಕ ಹಾದಿಗೆಡುವದು; ರಸ ವಿರಸವಾಗುವದು. ಹೊನ್ನಿನ ಜೀತದಲ್ಲಿ ಸಹನೆ ನೀರಿ ಹೋಗಬಾರದು. ಗಂಡು ಹೆಣ್ಣಿನ ದ್ವಂದ್ವದಲ್ಲಿಯೆ ರಸ ಇಂಗಿ ಹೋಗಬಾರದು, ಮಣ್ಣಿನ ಅಭಿಮಾನದಲ್ಲಿಯೆ ವಿವೇಕ ಸೋರಿ ಹೋಗಬಾರದು. ಈ ಮೂರರ ಸಮತೂಕವೆ ಜೀವದ ಮೆಚ್ಚು, ಆತ್ಮದ ಅಚ್ಚು.

—ಶ್ರೀ. ಬೇಂದ್ರೆ

ಪ್ರಶ್ನೆಗಳ :—

೧. ಪ್ರಾಣಿ-ಜೀವಿಗಳಲ್ಲಿಯ ಭೇದವೇನು?
೨. ಜನರು ಹೇಗೆ ಬಾಳುವರು? ಹೇಗೆ ಬಾಳಬೇಕು?
೩. ನಮ್ಮ ಬಾಳಿನ ಕೊರತೆಗಳಾವವು? ಅವುಗಳಿಂದುಂಟಾದ ಪರಿಣಾಮವೇನು?
೪. ಬಾಳಿಗೆ ಸಮತೂಕವನ್ನು ತರವುದೆಂತು?

ಉತ್ತರಗಳು :—

(೧) ಪ್ರಾಣಿಯು ಪ್ರಾಣಧಾರಣೆಯೊಂದನ್ನೆ ಬಲ್ಲದು. ತಿಂದುಂಡು ಬಾಳುವುದೇ ಅದರ ಗುರಿ. ಹಸಿವು ಅದರ ಪ್ರೇರಕ ಶಕ್ತಿ. ಅದನ್ನು ಹಿಂಗಿಸಲು ಅದು ಅನ್ಯರನ್ನು ನುಂಗಲು ಕೂಡ ಹಿಂಜರಿಯುವುದಿಲ್ಲ. ಸ್ವಾರ್ಥವು ಅದರ ಧರ್ಮ. ತನ್ನ ಸುಖ-ಸಮಾಧಾನಕ್ಕಾಗಿ ಅದು ಅನ್ಯರದನ್ನು ನಾಶಗೊಳಿಸಲು ಕೂಡ ಸದೈವ ಸಿದ್ಧ. ಜೀವಿಯು ಮಾತ್ರ ಹಾಗಲ್ಲ. ತಿಳುವಳಿಕೆಯಿಂದ ಅದಕ್ಕೆ ಪ್ರೇರಣೆ. ಪರಾರ್ಥ ಅದರ ಧರ್ಮ. ತನ್ನಂತೆ ಪರರನ್ನೆಣಿಸಿ ಅವರಿಗಾಗಿ ತನ್ನದನ್ನು ತ್ಯಜಿಸಲು ಅದರ ಸಿದ್ಧತೆ.

(೨) ಜನರಿಂದು ಬದುಕಲಿರುವುದು ಪ್ರಾಣಿಗಳಂತೆ, ಒಂದನ್ನೊಂದು ಕೊಂದು, 'ಪ್ರಾಣಹಿಂಡಿ ಜೀವತಿಂದು.' ಅದರಿಂದಲೆ ಅವರಲ್ಲಿ ಬದುಕಿಗಾಗಿ ಎಡೆಬಿಡದೆ ಯುದ್ಧ ನಡೆದಿರುವದು. ನಿಜವಾಗಿ ಜನರು ಜೀವಿಗಳಂತೆ ಬಾಳಬೇಕು. ಜೀವಕ್ಕೆ ಜೀವ ಕೊಟ್ಟು ಜೀವಿಸಬೇಕು. ಎಲ್ಲರ ಸುಖ-ಶಾಂತಿಗಳನ್ನು ಸಾಧಿಸಬೇಕು. ಆದರೆ ಇದರ ಪರಿವೆ ಈ ಪ್ರಾಣಿಗಳಿಗೆಲ್ಲಿಯದು ?

(೩) ನಮ್ಮ ಪ್ರಾಣಕ್ಕೆ ಸಹನೆಯಿಲ್ಲ; ಬುದ್ಧಿಗೆ ವಿವೇಕವಿಲ್ಲ; ಹೃದಯದಲ್ಲಿ ರಸಿಕತೆಯಿಲ್ಲ. ಆದುದರಿಂದ ನಾವು ಒಮ್ಮೊಮ್ಮೆ ಅಸಹನೆಯುಳ್ಳ ಕ್ರೂರಕರ್ಮಿಗಳಾಗುವೆವು; ಇಲ್ಲವೆ ಅತಿಸಹನೆಯುಳ್ಳ ಪುಕ್ಕರಾಗುವೆವು. ಒಮ್ಮೊಮ್ಮೆ ಬುದ್ಧಿಯಲ್ಲಿ ಅವಿವೇಕ ಮೂಡುವದು; ಇಲ್ಲವೆ ಅದು ಅತಿವಿವೇಕದಲ್ಲಿ ಮುಳುಗಿ ಹಾಳಾಗುವದು. ಒಮ್ಮೊಮ್ಮೆ ರಸಿಕತೆಯು ಬರೀ ಕಾಮನನ್ನು ಆರಾಧಿಸುವದು; ಇಲ್ಲವೆ ವೈರಾಗಿಯ ಬೂದಿಯನ್ನು ಬಳಕೊಳ್ಳುವದು. ಜೀವನದಲ್ಲಿ ಇದರಿಂದ ಈ ಮಾದರಿಯ ವಿಷಮತೆಯು ಮೈದಾಳುವದು.

(೪) ಜೀವನದಲ್ಲಿಯ ಇಂಥ ವಿಷಮತೆಯು ಅಡಗಿ, ಅದರಲ್ಲಿ ಸಮತೂಕ-ಸಾಮರಸ್ಯಗಳು ಜನಿಸಬೇಕಾದರೆ, ನಾವು ಬರೀ ಪ್ರಾಣವನ್ನೆಯೆ ಆರಾಧಿಸುವ ಪ್ರಾಣಿಗಳಲ್ಲ, ನಾವು ವಿವೇಕವನ್ನು ಆದರಿಸುವ ಜೀವಿಗಳು, ಎಂಬ ಅರಿವು ಬುದ್ಧಿಯಲ್ಲಿ ಹೊಳೆಯಬೇಕು, ಭಾವದಲ್ಲಿ ಇಳಿಯಬೇಕು. ಆದರೆ ಈ ತರದ ವಿವೇಕವು ನಮ್ಮಲ್ಲಿ ಬೆಳೆಯಲು, ನಾವು ತಾಳ್ಮೆಯನ್ನು-ಸಹನೆಯನ್ನು ಕಲಿಯಲುಬೇಕು. ತಾಳ್ಮೆಯುಳಿದೊಡನೆ ವಿವೇಕದ ತೂಕ ತಪ್ಪುವದು, ರಸವು ವಿರಸವಾಗುವದು. ಈ ಪ್ರಪಂಚದಲ್ಲಿಯ ಹೊನ್ನು-ಹೆಣ್ಣು-ಮಣ್ಣುಗಳ ಸೆಳೆತದಲ್ಲಿ ನಮ್ಮ ಸಹನೆ-ರಸ-ವಿವೇಕಗಳು ಹರಿದು-ಹೋಗಬಾರದು. ಅವುಗಳಲ್ಲಿಯ ಸಮತೂಕದಿಂದಲೇ ಜೀವನದಲ್ಲಿ ಸಾಮರಸ್ಯ.

## ಅಭ್ಯಾಸ ೧೭.

ಅವತರಣಗಳನ್ನು ಚೆನ್ನಾಗಿ ಓದಿ, ಅಡಿಯಲ್ಲಿಯ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

(೧)

ಪ್ರಾರ್ಥನೆಯು ಪ್ರಬಲವಾದ ಬೇಡಿಕೆ, ಭಾವಪೂರ್ಣ ಬೇಡಿಕೆ. ಬಲಹೀನ ಬೇಡಿಕೆ ಫಲಹೀನವಾದುದು. ಬಲವುಳ್ಳ ಬಯಕೆಯೆ ಫಲವನ್ನು ಪಡೆಯುವುದು.

ಇದು ನಿಸರ್ಗದ ನಿಯಮ. ತೀವ್ರ ಬೇಡಿಕೆಗೆ ತೀವ್ರ ಫಲ ದೊರೆಯುವುದು ಖಂಡಿತ.

ಆದರೆ ಬೇಡುವುದು ಯಾರನ್ನು? ಕಾಡುವುದು ಯಾರನ್ನು? 'ಬೇಡುವವರಿದ್ದರೆ ಬೇಡುವುದು ದೇವನನು. ಕಾಡುವವರಿದ್ದರೆ ಕಾಡುವುದು ದೇವನನು!' ಯಾಕೆಂದರೆ ಉಳ್ಳವನೆ ಕೊಡಬಲ್ಲ, ಇಲ್ಲದವ ಕೊಡಲರಿಯ. ಇಲ್ಲಿ ನಿಜವಾಗಿ ಉಳ್ಳವನು ಜಗದೊಡೆಯನೊಬ್ಬನೇ! ಉಳಿದವರೆಲ್ಲ ಇಲ್ಲದವರು. ಸಿರಿಯ ಸರದಲಿ ತೇಲುತ್ತಿದ್ದರೂ ಇಲ್ಲದವರು. ಎನಿತು ವಿಪುಲವಾದರೂ ಇವರ ಐಸಿರಿಯು ಮಿತಿಯುಳ್ಳದ್ದು. ಮೇಲಾಗಿ ಅವರು ಧನದಿ ಬಲ್ಲಿದರಾದರೂ ಮನದಿ ಬಡವರು. ಇಂಥ ಅಳಿಮನದ ಬೈರಾಗಿಗಳ ಬಳಿ ದೊರೆಯುವುದು ಬೂದಿಯ ಸತ್ಕಾರವಲ್ಲದೆ ಮತ್ತೇನು?

ಭಗವಂತನೊಬ್ಬನೆ ದಯೆಯ ಆಗರ, ಕೃಪೆಯ ಸಾಗರ. ಆತನೊಲಿದರೆ ಕೊರಡು ಕೊನರುವುದು, ಬರಡು ಹಯನಹುದು, ವಿಷವೆಲ್ಲ ಅಮೃತವಹುದು. ಆತನೊಲಿದರೆ ಕುರುಡ ಕಾಣಬಲ್ಲ, ಮೂಕ ನುಡಿಯಬಲ್ಲ, ಕುಂಟ ಕುಣಿಯಬಲ್ಲ. 'ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬಕ್ಕು.'

ಪ್ರಾರ್ಥನೆಯು ಜೀವ-ದೇವರಲ್ಲಿಯ ಆಂತರಿಕ ಸಂಬಂಧ-ಅಂತರಂಗದ ಕಿವಿ ಮಾತು, ಸವಿನುಡಿ. ಆದುದರಿಂದ ಅದರಲ್ಲಿ ಭಕ್ತಿಯಿಲ್ಲದ ಮಾತಿಗಿಂತ ಭಕ್ತಿಯುತ ಮೌನವೇ ಮೇಲು. ಎದೆಯಲ್ಲಿ ಉಕ್ಕುವ ಭಕ್ತಿ-ಭಾವವು, ಕಾರಂಜಿಯಂತೆ ಮೇಲಕ್ಕೆ ಪುಟಿದು, ಭಗವಂತನ ಕರುಣವನ್ನು ತನ್ನೆಡೆಗೆ ಸೆಳೆಯಬೇಕು. ಇದುವೆ ಪ್ರಾರ್ಥನೆಯ ಉನ್ನತವಾದ ನೆಲೆಯು. ಉಕ್ಕಿ ಬಂದ ಪ್ರಾರ್ಥನೆಯು ಎಲ್ಲವನ್ನೂ ಪಡೆಯುವುದು.

—ಚಿಕ್ಕಕೋರ.

**ಪ್ರಶ್ನೆಗಳು:—**

೧. ಪ್ರಾರ್ಥನೆಯ ಸಾಮಾನ್ಯ ಸ್ವರೂಪವೇನು?
೨. ಉಳ್ಳವರಾರು? ಇಲ್ಲದವರಾರು? ಯಾಕೆ?
೩. ದೇವರ ದಯೆಯು ಅದೇನನ್ನು ಮಾಡಬಲ್ಲದು?
೪. ಪ್ರಾರ್ಥನೆಯ ಉನ್ನತ ನೆಲೆಯಾವುದು?

(೨)

ಸಾಹಿತ್ಯ ಸೇವೆಗೆ ಅಭಿಮಾನ ಮಾತ್ರವೇ ಸಾಲದು, ಉತ್ಸಾಹ ಮಾತ್ರವೇ ಸಾಲದು. ಉತ್ಸಾಹ ಅಭಿಮಾನಗಳು ಅತ್ಯಂತ ಅವಶ್ಯವೆಂಬುದು ಸ್ವತಃಸಿದ್ಧವಾಗಿದೆ. ಅವುಗಳ ಜತೆಗೆ ಅಧ್ಯವಸಾಯವೂ ಸೇರಬೇಕು. ದೊಡ್ಡ ಸಾಹಿತ್ಯವೆಂಬುದು ದೊಡ್ಡ ತಪಸ್ಸಿನ ಫಲ. ಅದರ ಜೀವಾಳ ಸತ್ಯ-ಸಂದರ್ಶನ. ತಪಸ್ಸು ಮಾಡದೆ, ಮಿದುಳನ್ನು ಆಯಾಸ ಪಡಿಸದೆ, ರಾತ್ರಿ ನಿದ್ದೆ ಕೆಡದೆ, ಪುಸ್ತಕದ ಭಾರವನ್ನು ಹೊರದೆ, ಲೀಲಾಜಾಲವಾಗಿ ಮಹಾಸತ್ಯವನ್ನು ರಚಿಸುವೆನೆನ್ನುವವನು ಮಹಾಸಾಹಿತ್ಯದ ಸ್ವರೂಪವನ್ನು ಕಾಣದವನು. ನಮ್ಮ ಈಗಿನ ದಿವಸದಲ್ಲಿ ಮಹತ್ವದ್ದನ್ನು ಸುಲಭದಲ್ಲಿ ಸಾಧಿಸುವ ಆಶೆ ಸರ್ವಸಾಮಾನ್ಯವಾಗುತ್ತಿದೆ. ... ... ಕಾಲುನಡಿಗೆ ಅವರಿಗೆ ಬೇಸರ;

ಮೋಟಾರವೇಗ, ವಿಮಾನ ವೇಗಗಳ ಆತುರ ಜನಕ್ಕೆ ಬರುತ್ತದೆ. ಆದರೆ ಉತ್ತಮ ಸಾಹಿತ್ಯ-ವಿಜ್ಞಾನ ಸಿದ್ಧಿಗೆ ಇಂಥ ಸುಲಭೋಪಾಯಗಳಿಲ್ಲ. ಈ ರಾಜ್ಯದಲ್ಲಿ ನಾವು ಸಾವಕಾಶವಾಗಿಯೇ, ಹೆಜ್ಜೆಯ ಮೇಲೆ ಹೆಜ್ಜೆಯನ್ನಿಟ್ಟೇ, ನಡೆಯಬೇಕಾಗಿದೆ. ಮಂತ್ರವಾದಿ ಮಾವಿನಕಾಯನ್ನು ತಯಾರುಮಾಡಿದಂತೆ, ಕವಿ ಮಹಾಕಾವ್ಯ ರಚಿಸಲಾಗುವುದಿಲ್ಲ; ವಿಜ್ಞಾನ ಶೋಧಕನು ಅಷ್ಟು ಬೇಗ ಬೇಗ ನೂತನ ಸಿದ್ಧಾಂತಗಳನ್ನು ನಿರ್ಮಾಣ ಮಾಡಲಾಗುವುದಿಲ್ಲ. ಹುಡುಕಬೇಕು, ಹುಡುಕಾಡಬೇಕು, ಬೇಸರಪಡದೆ ಹುಡುಕಬೇಕು, ತಾಳ್ಮೆಯಿಂದ ಹುಡುಕುತ್ತಲೇ ಇರಬೇಕು; ನಿಲುಕಡೆಯಿಲ್ಲದೆ, ನಿಟ್ಟುಸುರಿನಿಂದ ಕೂಡಿದ ಹುಡುಕಾಟವೇ ಜ್ಞಾನಾರ್ಥಿಯ ಹಣೆಬರಹ. ಆದರಿಂದಲೇ ಸತ್ಯ ಸಂದರ್ಶನ. ವಿಜ್ಞಾನಿಯಾಗಲಿ, ಸಾಹಿತಿಯಾಗಲಿ, ದೊಡ್ಡವನಾಗಬೇಕೆಂದರೆ, ತಪಶ್ಚರ್ಯೆಯೊಂದೇ ಅವನಿಗಿರುವ ಸಾಧನ. —ಶ್ರೀ. ಡಿ. ವ್ಹಿ. ಗುಂಡಪ್ಪ

ಪ್ರಶ್ನೆಗಳು :—

೧. ಇಂದು ಜನಕ್ಕೆ ಬೇಕಾದುದೇನು?

೨. ಮಹಾಸಾಹಿತ್ಯವು ಹುಟ್ಟುವದೆಂತು?

೩. ವಿಜ್ಞಾನ-ಶೋಧಕನಿಗೆ ಸತ್ಯ ಸಂದರ್ಶನವು ಅದೆಂತಾಗುವದು?

(೩)

ಸುಬ್ಬಣ್ಣನವರು ಪಿಟೀಲು ನುಡಿಸುವುದರ ಸೊಗಸು ಹೀಗೆಂದು ನಾನು ಹೇಳಲಾರೆ. ಅವರು ... ದೇವಸ್ಥಾನದಲ್ಲಿ ನುಡಿಸುವಾಗ ಅದನ್ನು ನಾನು ಕೇಳಿದ್ದೇನೆ. ಇತರರು ಪಿಟೀಲು ಬಾರಿಸುವದನ್ನೂ ಕೇಳಿದ್ದೇನೆ. ಎರಡಕ್ಕೂ ವ್ಯತ್ಯಾಸವನ್ನು ಒಂದು ಮಾತಿನಲ್ಲಿ ಹೇಳಬಹುದು. ಅವರು ನುಡಿಸುವುದು ಆಪ್ತನಲ್ಲಿ ಹೇಳುವ ಮನಸ್ಸಿನೊಳಗಣ ಮಾತಿನಂತೆ; ಇತರರು ಬಾರಿಸುವುದು ಸಭೆಯಲ್ಲಿ ಕೊಡುವ ಉಪನ್ಯಾಸದಂತೆ. ಇತರರು ಪಿಟೀಲನ್ನು ತಮ್ಮ ಕೌಶಲವನ್ನು ತೋರಿಸುವುದಕ್ಕಾಗಿ ಇರುವ ಒಂದು ಸಾಧನವೆಂಬಂತೆ ಉಪಯೋಗಿಸುವರು. ಅವರು ಅದು ತಮ್ಮ ದೇಹದ ಹೊರಗಣ ಧ್ವನಿಯೆಂಬಂತೆ ಉಪಯೋಗಿಸುವರು. ಸ್ವಾರಸ್ಯ ಹುಟ್ಟಿದಾಗ ಇವರು ನುಡಿಸುವ ರೀತಿಯಂತೂ ನಮಗೆ ಆ ಪಿಟೀಲು ಬೇರೆಯ ವಸ್ತು, ಅದನ್ನು ಇವರು ಹಿಡಿದುಕೊಂಡು ಕೈಯಿಂದ ನುಡಿಸುತ್ತಿದ್ದಾರೆ, ಎಂಬ ಭಾವನೆಯೆ ಬರುತ್ತಿರಲಿಲ್ಲ. ಇತರರು ಸ್ವರವನ್ನು ಹುಡುಕಿಕೊಂಡು ಹೋಗುವರು. ಇವರನ್ನು ಸ್ವರವು ತಾನೆ ಹುಡುಕಿಕೊಂಡು ಬರುವಂತಿತ್ತು. ಅವರ ಮುಖದ ಮೇಲೆ ಒಂದು ಭಾವವು ಕಾಣುತ್ತಿರುವುದು. ಪಿಟೀಲಿನಲ್ಲಿ ಆ ಭಾವವು ಹೊರಹೊಮ್ಮುತ್ತಿರುವುದು. ... ಯಾವ ಸಂಗೀತಗಾರನು ಗಾನವನ್ನು ಅಂತರ್ಯದಲ್ಲಿ ದೇವರ ಪೂಜೆಗೆಂದು ಉಪಯೋಗಿಸುವನೋ, ತನ್ನ ಬುದ್ಧಿಶಕ್ತಿಯ ಪ್ರದರ್ಶನಕ್ಕೆ ಅವಕಾಶವೆಂದು ಉಪಯೋಗಿಸುವುದಿಲ್ಲವೋ, ಅವನಿಗೆ ಮಾತ್ರ ಈ ರೀತಿಯ ಸೊಗಸು ಲಭ್ಯ. ಯಾವನು ಗಾನ ದೊಡ್ಡದು ತಾನು ಅಲ್ಪನೆಂದು ತಿಳಿದಿರುವನೋ, ತಾನು ದೊಡ್ಡ ವಿದ್ವಾಂಸ ತನ್ನ ವಿದ್ಯೆಯನ್ನು

ತೋರಿಸುವುದಕ್ಕೆ ಗಾನ ಒಂದು ಸಾಧನ ಎಂದು ಇರುವುದಿಲ್ಲವೋ, ಅವನಿಗೆ ಮಾತ್ರ ಈ ರಸವು ಸಾಧ್ಯ.

—ಶ್ರೀನಿವಾಸ.

ಪ್ರಶ್ನೆಗಳು :—

೧. ಸುಬ್ಬಣ್ಣನವರ ಪಿಟೀಲು ನುಡಿಸುವ ರೀತಿಯೆಂತಹುದು ?

೨. ಇತರರ ಬಗೆ ಅದೆಂತಹುದು ?

೩. ನಿಜವಾದ ರಸವು ಹುಟ್ಟಲು ಗಾನವನ್ನು ಅದೆಂತು ಉಪಯೋಗಿಸಬೇಕು ?

(೪)

'ಹಾಯ್ದಾಡದೆ ಹಾದಿಯಿಲ್ಲ' ಎಂಬ ಮಾತೇನೊ ನಿಜವೆ. ಆದರೂ ಗುರಿಯು ಗೊತ್ತಾಗದೆ, ಹಾದಿಯೂ ನಿರ್ಣಯಕ್ಕೆ ಬರದು. ನಾಗಮೋಡಿಯಿಂದ ಸುತ್ತು ಬಳಸಿ ಹೋಗುವ ಹಾದಿಗಳು ಮನುಷ್ಯನ ಮನದ ಚಂಚಲ ಅನಿಶ್ಚಿತತೆಯನ್ನು ಗೆರೆ ಹಾಕಿ ತೋರಿಸುವವು. ಸಾಹಿತ್ಯವು ಲೇಖಕರಿಂದ ವಾಚಕರ ಕಡೆಗೆ ಹೋಗುವ ಹಾದಿಯಾದುದರಿಂದ, ವಾಚಕ ವರ್ಗದ ಮನದ ಉಬ್ಬಗಲಗಳನ್ನು, ಆಳ ಎತ್ತರಗಳನ್ನು, ಹಿಂಡಪಡದುಗಳನ್ನು ತಿಳಿಯಬೇಕಾಗುವದು. ಆದರೆ ನಮ್ಮ ವಾಚಕ ವರ್ಗವೆಂಬುದು ಸಮಸಂಸ್ಕಾರವನ್ನು ಹೊಂದಿದ ಏಕರಾಶಿಯಾದ ಅಖಂಡವಸ್ತುವಲ್ಲ. ಅವರಲ್ಲಿ ಕಲಿತವರಿದ್ದಾರೆ, ಕಲಿಯದವರಿದ್ದಾರೆ, ಬಹುಶ್ರುತರಿದ್ದಾರೆ, ಅಕ್ಷರಗಿವುಡರಿದ್ದಾರೆ. ಅರ್ಧಮೂರ್ಖ ಕಲಿತು ಬಹಳ ಬಲ್ಲವರೆಂದು ತಿಳಿಯುವ, ತಮ್ಮ ತಲೆಯ ಭಾರದಿಂದಲೇ ಎಲ್ಲವನ್ನೂ ತೂಗಿನೋಡುವ, ತಮ್ಮ ಪೊಳ್ಳು ಎದೆಯಿಂದ ಜಗತ್ತನ್ನೇ ಆಳಬೇಕೆನ್ನುವ ಹವ್ಯಾಸದವರೂ ಅಲ್ಲಲ್ಲಿದ್ದಾರೆ. ಕಲಿತವರಲ್ಲಿ, ಭಿನ್ನ ಸಾಹಿತ್ಯ ಸಂಪರ್ಕಗಳಿಂದ ಭಿನ್ನ ಸಂಸ್ಕಾರದವರೂ ಭಿನ್ನ ರುಚಿಯವರೂ ಇರುತ್ತಾರೆ. ಸಾಹಿತ್ಯವೆಂದರೇನು ಎಂದು ತಿಳಿಯದ ಸುಶಿಕ್ಷಿತರೂ, ಸಾಹಿತ್ಯದಿಂದ ತಾವು ಮುಕ್ತರೆಂದು ತಿಳಿಯುವ ಸುಶಿಕ್ಷಿತರೂ, ಸಾಹಿತ್ಯವನ್ನು ಕಿವಿಮುಚ್ಚಿ ಕೇಳದೆ ಕಣ್ಮುಚ್ಚಿ ಓದದೆ, ಸಾಹಿತಿಗಳಿಗೆ ಕೇವಲ ಉಪದೇಶ ಮಾಡಲು ಜನ್ಮ ತಾಳಿದ ಮಹಾತ್ಮರೂ, ಮತ್ತು ಕೇಳಿಕೆಯ ಸಾಹಿತ್ಯದ ತುಂಡುಗಳಿಂದ, ಹೇಳಿಕೆಯ ತತ್ವಗಳನ್ನು ಜಡಿಯುವ ಟೀಕಾಕಾರರೂ, ಹಾರಿಕೆಯ ಸುದ್ದಿಗಳಿಂದಲೆ ಸೇರಿಕೆಯ ಅಭಿಪ್ರಾಯಗಳನ್ನು ಪ್ರಸಾರಮಾಡುವ ಪ್ರಚಾರಕರೂ, ಒಮ್ಮೊಮ್ಮೆ ವಾಚಕವರ್ಗದಲ್ಲಿ ಸೇರಿರುತ್ತಾರೆ.

—ಶ್ರೀ. ಬೇಂದ್ರೆ

ಪ್ರಶ್ನೆಗಳು :—

೧. 'ಹಾಯ್ದಾಡದೆ ಹಾದಿಯಿಲ್ಲ' ಎಂದರೇನು ?

೨. ವಾಚಕರ ಮನಸ್ಸು ಏತರೊಡನೆ ಹೋಲಿಸಲಾಗಿದೆ ?

೩. ಲೇಖಕರು ಯಾರನ್ನು ತೆಗಳಿರುವರು ? ಹೇಗೆ ?

೪. ಬಹುಶ್ರುತ, ಅಕ್ಷರಗಿವುಡ, ಚಂಚಲ ಅನಿಶ್ಚಿತತೆ, ಸಮಸಂಸ್ಕಾರದ ಏಕರಾಶಿ, ಎಂದರೇನು ?

(೫)

ನಮ್ಮ ಈ ಪ್ರಚಂಡ ಆರ್ಯ ಜನಾಂಗವು ತನ್ನ ಹಳ್ಳಿಗಳ ಮನೆಗಳಲ್ಲಿ ಇಂದು ಕೂಳಿಲ್ಲದೆ ಸಾಯುತ್ತಲಿದೆ; ಜಾತಿ ಭೂತದ ಹಿಡಿತದಲ್ಲಿದ್ದ ಸಮಾಜದ ಕಲಕು ವಾತಾವರಣದಲ್ಲಿ ಕೊಳೆಯುಲಿದೆ; ಅಜ್ಞಾನ-ಜನಿತವಾದ ಸಾವಿರ ಭ್ರಮೆಗಳನ್ನು ಅಪ್ಪಲಿದೆ; ನೈರಾಶ್ಯಜನ್ಯ ನಿಷ್ಕ್ರಿಯತೆಯ ಕೊಳ್ಳದಲ್ಲಿ ಭರದಿಂದ ಇಳಿಯುಲಿದೆ. ಇಂಥ ಭೀಷಣ ನೋಟವು ನಮ್ಮ ನಾಡಿನ ಪ್ರತಿಯೊಬ್ಬ ಸುಪುತ್ರನ ಎದೆಯಲ್ಲಿ ಸಹಾನುಭವದ ಸ್ಪಂದನವನ್ನು ಹುಟ್ಟಿಸದಿರದು. ಆದುದರಿಂದ ನಮ್ಮ ಜನರು ತಮ್ಮ ಉಪಜೀವನದ ಸಾಧನವನ್ನು ಪಡೆಯುವದಕ್ಕಾಗಿಯೂ, ಅವರ ಹರಣವನ್ನೇ ಹೀರಲಿರುವ ಮರೆವಿನ ಮರಿಗಳಾದ ದುರುಳ ಪ್ರವೃತ್ತಿಗಳನ್ನು ಪ್ರತಿಭಟಿಸುವದಕ್ಕಾಗಿಯೂ, ಅಗತ್ಯವಾದ ಸಲಕರಣೆಗಳನ್ನು ಒದಗಿಸಿಕೊಡಲು, ಅವರಿಗೆ ಯೋಗ್ಯವಾದ ಶಿಕ್ಷಣವನ್ನು ಸಲ್ಲಿಸುವ ವ್ಯವಸ್ಥೆಯನ್ನು ಕೂಡಲೆ ಕೈಕೊಳ್ಳಲು ಬೇಕು. ನಮ್ಮ ವೀರ ವಿವೇಕಾನಂದರು ಗದ್ದರಿಸಿದ ಮೇರೆಗೆ, 'ಯಾವ ಶಿಕ್ಷಣವು ಜನಸಾಮಾನ್ಯರಿಗೆ ಜೀವನ ಕಲಹದಲ್ಲಿ ನೆರವಾಗುವದಿಲ್ಲವೋ, ಯಾವದು ಅವರ ಶೀಲಬಲವನ್ನು ಬೆಳೆಸುವದಿಲ್ಲವೋ, ಪರೋಪಕಾರ ಬುದ್ಧಿಯನ್ನು ಬಲಿಸಿ ಯಾವದು ಜನರಿಗೆ ಕೇಸರಿಯ ಕಸುವನ್ನು ನೀಡುವದಿಲ್ಲವೋ, ಅದು ಶಿಕ್ಷಣವೆಂಬ ಹೆಸರಿಗೆ ಪಾತ್ರವಾದರೂ ಆಗುವದೆಂತು? ಸ್ವಾವಲಂಬನದ ಸಾಮರ್ಥ್ಯವನ್ನು ದಯಪಾಲಿಸುವದೇ ನಿಜವಾದ ಶಿಕ್ಷಣವು.' ಇಂಥ ಸುಶಿಕ್ಷಣವೇ ನಮ್ಮ ದಿವ್ಯ ಜನಾಂಗವನ್ನು ಉದ್ಧರಿಸಬಲ್ಲದು.

ಪ್ರಶ್ನೆಗಳು :—

೧. ಭೀಷಣ ನೋಟವು ಎಂತಹದು?
೨. ನಮ್ಮ ಜನಾಂಗವನ್ನು ಉದ್ಧರಿಸುವದೆಂತು?
೩. ಸುಶಿಕ್ಷಣದ ಲಕ್ಷಣಗಳಾವವು?

(೬)

ಕಾವ್ಯವನ್ನು ಹೇಳುವ ಅನೇಕ ಪದ್ಧತಿಗಳುಂಟು. ಶಿಕ್ಷಕರ ಕಾಟ ಕಳೆಯುವದಕ್ಕಾಗಿ ವಿದ್ಯಾರ್ಥಿಗಳು ಅನುಸರಿಸುವ 'ಎಡ್ಡೋಡಿ' ರಾಗವು ಮೊದಲನೆಯದು. ಈ ಮಾರ್ಗದ ಪ್ರತಿಷ್ಠಾಪನಾಚಾರ್ಯರು ಶಿಕ್ಷಕರೇ! 'ಕುರುಡೋದು' ಎಂಬ ನಾಣ್ಣುಡಿಯಿದೆ. ಆದರೆ 'ಕಿವುಡೋದು' ಎಂಬ ಮಾತು ರೂಢಿಯಾಗುವದಗತ್ಯ. ಇಂಗ್ಲೀಷ್ ಶಾಲೆಗಳಲ್ಲಿ 'ಕಣ್ಣೋದಿಗೆ' (Silent Reading) ಅದು ಸರಿ ಹೋಗುವ ಮಾತು. ಕಿವಿಯಿಂದೀಂಟಿಸುವ ಪ್ರಯತ್ನವು ಕವಿಗಮಕಿಗಳದಾದರೆ, ಕಣ್ಣಿಂದೋದಿಸುವ ಪ್ರಯತ್ನವು ಶಿಕ್ಷಣಕರ್ತರದು. ಸಾವಕಾಶವಾಗಿ, ಚಿತ್ರಗಳನ್ನು ಕಿವಿಯಿಂದ ನೋಡಿಸುವ ಪ್ರಯತ್ನವನ್ನೂ ಅವರು ಮಾಡಬಹುದೇನೋ! ಇನ್ನೊಂದು ರೀತಿಯಿದೆ. ಈ ರೀತಿಯಲ್ಲಿ ಶಬ್ದಸೌಂದರ್ಯವನ್ನು ಮರೆಮಾಡಿ, ಸಾಧ್ಯವಿದ್ದರೆ ಕೆಡಿಸಿ, ಅರ್ಥಗಾಂಭೀರ್ಯವು ಎದ್ದು ಕಾಣುವಂತೆ ಕವಿತೆಯನ್ನು ಹೇಳಬೇಕಾಗುವದು.

ಗದ್ಯದಕೂಡ ಸಮಾನ ಶಕ್ತಿಯ ಬಲದಿಂದ ಏರಾಟವಾಡುವ ಪದ್ಯಮಾರ್ಗವಿದು. ರಾಗದ ದಾವಣಿಗೆ ಕಟ್ಟಿ ಸಾಹಿತ್ಯವನ್ನು ಎಳೆದೊಯ್ಯುವ ರಾಗರಸಮಾರ್ಗವು ಇನ್ನೊಂದು. ಇಲ್ಲಿ ಸಂಗೀತ ಸಾಹಿತ್ಯಗಳು ಪರಸ್ಪರ ಕೊರಳೊಳಗಿನ ಗುದ್ದು. ಅನ್ಯೋನ್ಯ ಪೂರಕಗಳಲ್ಲ; ಮಾರಕಗಳು. ಇಂಥವರ ಹಾಡು ಕೇಳಿಯೇ ಸಾಹಿತ್ಯಸಂಗೀತಗಳು ಕೂಡಬಾರದು,ಎಂದು ಕೆಲವರು ಹೇಳುತ್ತಿರಬೇಕು. ಮಧ್ಯಮಾರ್ಗವೊಂದಿರಲೇ ಬೇಕು. ಆ ಮಾರ್ಗವೇ ನಮ್ಮ ಕನ್ನಡ ಕವಿಗಮಕಿಗಳು ಅನುಸರಿಸಿದುದು. ಅಲ್ಲಿ ಸಾಹಿತ್ಯಸಂಗೀತಗಳು ಪರಸ್ಪರ ಪೂರಕಗಳು......ಆದರೆ ಗಮಕಿಗಳು ಇಲ್ಲದ್ದರಿಂದ, ತಮ್ಮ ಕೆಲಸವಾದದ್ದರಿಂದ, ಹಾಲಿಲ್ಲದಲ್ಲಿ ಮಜ್ಜಿಗೆಯೂ ಸಾಕು ಎಂದು ಈಗ ಒಮ್ಮೊಮ್ಮೆ ಕವಿಗಳೇ ತಮ್ಮ ಕೊರಳಮೇಲೆ ಕೈಯಾಡಿಸಿ ಕಂಠವಿದೆ ಎಂದು ಮನಗಂಡು, ಪಠಕಂಠರಾಗಿ ತಮ್ಮ ಕಾವ್ಯದ ಗುಂಡುಗಳ ಸುರಿಮಳೆಯನ್ನು ರಸಿಕರ ಎದೆಗೆ ಗುರಿಯಿಟ್ಟು ಸುರಿಸಬೇಕಾಗುವದು. ಈ ಪಠಕಂಠಮಾರ್ಗವೂ ಒಂದಿದೆ. ಆದರೆ ಅದು ಗಮಕಿಗಳನ್ನು ಕರೆಯುವ ಕೂಗು. —ಶ್ರೀ. ಬೇಂದ್ರೆ

ಪ್ರಶ್ನೆಗಳು :—

(೧) ‘ ಕುರುಡೋದು, ’ ‘ ಕಿವುಡೋದು ’ ‘ ಕಣ್ಣೋದು ’ ಎಂದರೇನು ?

(೨) ಕವಿತೆಯನ್ನು ಹೇಳುವ ಬೇರೆಬೇರೆ ರೀತಿಗಳಾವವು? ಅವುಗಳಲ್ಲಿ ಒಳ್ಳೆಯದಾವುದು ?

(೩) ಕವಿಗಳು ಕವಿತೆಯನ್ನು ಯಾಕೆ ಹೇಳುವರು? ಹೇಗೆ ಹೇಳುವರು ?

(೭)

‘ ನೀವು ಈಗ ನಿಮ್ಮ ಅಧ್ಯಯನವನ್ನು ಮುಗಿಸಿರುವಿರಿ, ವಿದ್ಯಾವಂತರೂ ಬಲವಂತರೂ ಆಗಿರುವಿರಿ.........ಸತ್ಯವನ್ನು ನುಡಿಯಿರಿ. ನಡೆನುಡಿಗಳನ್ನು ಯಾವಾಗಲೂ ಮೇಳಯಿಸಿರಿ. ಸ್ವಾಧ್ಯಾಯವನ್ನು ಎಂದೂ ತಪ್ಪಿಸಬೇಡಿರಿ. ಗುರು ಹಿರಿಯರಿಗೆ ಸಲ್ಲಿಸತಕ್ಕ ಸತ್ಕಾರಾದಿಗಳನ್ನು ಯಾವಾಗಲೂ ಸಲ್ಲಿಸುತ್ತ ಇರಿ. ಗೃಹಸ್ಥಾಶ್ರಮಿಗಳಾಗಿ, ವಂಶವನ್ನು ಮುಂದೆ ವೃದ್ಧಿಗೊಳಿಸಿರಿ..........ತಂದೆತಾಯಿಗಳು, ಗುರುಹಿರಿಯರು-ಅತಿಥಿಅಭ್ಯಾಗತರು ಇವರು ದೇವತೆಗಳೆಂದು ಮನ್ನಿಸಿರಿ. ಯಾವಾಗಲೂ ನಿರ್ದೋಷವಾದ ಕಾರ್ಯಗಳನ್ನೇ ಮಾಡಿರಿ. ನಿಕೃಷ್ಟವುಗಳಿಂದ ಯಾವಾಗಲೂ ದೂರ ಇರುವಂಥವರಾಗಿರಿ. ನಾವು ಮಾಡುತ್ತಿರುವ ಸತ್ಕಾರ್ಯಗಳನ್ನಷ್ಟೇ ನೀವು ಅನುಸರಿಸಿರಿ. ಉಳಿದವುಗಳನ್ನು ತ್ಯಜಿಸಿರಿ. ನಿಮಗಿಂತ ಶ್ರೇಷ್ಠರಿದ್ದವರನ್ನು ನೀವು ಆಸನಾದಿಗಳನ್ನು ಕೊಟ್ಟು ಸತ್ಕರಿಸತಕ್ಕದ್ದು. ಕೊಡುಗೈ ದೊರೆಯಂತೆ ನೀವು ದಾನ ಮಾಡತಕ್ಕದ್ದು. ಶ್ರದ್ಧೆಯಿಂದ ಕೊಡಬೇಕು, ವಿನಯದಿಂದ ಕೊಡಬೇಕು, ಸಾಕಷ್ಟು ಕೊಡಬೇಕು. ಯಾವ ಕರ್ಮವನ್ನು ಮಾಡಬೇಕು, ಯಾವುದನ್ನು ಬಿಡಬೇಕು, ಜೀವನ ಕ್ರಮವು ಹೇಗಿರಬೇಕು, ಮುಂತಾದ ಪ್ರಶ್ನೆಗಳ ಬಗ್ಗೆ ಸಂದೇಹವುಂಟಾದಾಗ ಒಳ್ಳೆಯ ವಿಚಾರವಂತರೂ ಸದಾಚಾರಿಗಳೂ ಆದ ಬ್ರಹ್ಮಜ್ಞಾನಿಗಳು ಆಯಾ ಸಂದರ್ಭಗಳಲ್ಲಿ ಯಾವ ರೀತಿ ವರ್ತ

ಸಿದರೊ ಆ ರೀತಿ ನೀವೂ ವರ್ತಿಸಬೇಕು. ಈ ಮಹತ್ವದ ಪ್ರಸಂಗದಲ್ಲಿ,......ನಾನು ಹೇಳುವ ಉಪದೇಶವು ಇಷ್ಟೇಯಿರುವದು. ಸದೈವ ಬೆಳಗುವ ಜ್ಯೋತಿಯಂತೆ ಇದನ್ನು ನೀವು ನೆನಪಿನಲ್ಲಿಟ್ಟುಕೊಂಡು ನಡೆದರೆ ಯಾವ ಸಂಕಟವೂ ಪ್ರಾಪ್ತವಾಗಲಿಕ್ಕಿಲ್ಲ. ನಿಮ್ಮ ಅಂತಃಕರಣವು ಯಾವಾಗಲೂ ಪ್ರೀತಿಯಿಂದ ತುಂಬಿ ನಿಮ್ಮಿಂದ ಯಾವಾಗಲೂ ವೀರೋಚಿತ ಉದಾತ್ತಕರ್ಮಗಳೇ ಆಗುವವು. ನಿಮ್ಮ ಧೃತಿ ಉತ್ಸಾಹಗಳು ಅಳಿಯದೆ ಉಳಿಯುವವು. ನಿಮ್ಮ ಆನಂದವು ನಿಸರ್ಗನಿರ್ಝರದಂತೆ ನಿರ್ಮಲವೂ ನಿರಂತರವೂ ಇರುವುದು. ನನ್ನ ಪ್ರಿಯ ಆತ್ಮಗಳೇ! ಇನ್ನು ಹೋಗಿ ಬನ್ನಿರಿ! ನಾನು ನಿಮಗೆ ಅಭಯವನ್ನೂ ಆಯುರಾರೋಗ್ಯಗಳನ್ನೂ ಆಶೀರ್ವದಿಸುವೆನು!

—ಉಪನಿಷತ್ ಕಥಾವಲಿ.

ಪ್ರಶ್ನೆಗಳು :—

(೧) ಇದು ಯಾರ ಸಂದೇಶವು? ಯಾರಿಗೆ?

(೨) ಏನನ್ನು ಮಾಡಬೇಕು? ಏನನ್ನು ಬಿಡಬೇಕು?

(೩) ಇಂಥ ನಡತೆಯ ಪರಿಣಾಮವೇನಾಗುವದು?

# ೫. ಗುಣಗ್ರಹಣ

**೧ ಅಂದರೇನು? :—**

ಕಾವ್ಯವು ಗದ್ಯವಿರಲಿ—ಪದ್ಯವಿರಲಿ, ಅದರ ಗುಣದೋಷಗಳ ವಿಮರ್ಶೆಯನ್ನು ಮಾಡಿ ಗುಣಗಳ ರುಚಿಯನ್ನು ಸವಿಯುವುದೇ '**ಗುಣಗ್ರಹಣ**'ದ ಕೆಲಸ. ಇದೊಂದು ಕಾವ್ಯದಲ್ಲಿಯ **ಕಸವನ್ನೆಸೆದು ರಸವನ್ನು ಸೇವಿಸುವ** ರೀತಿ. ಈ ಬಗೆಯಿಂದ ಪರೀಕ್ಷಣ ಮಾಡುವ ವಿಮರ್ಶಕನು ಕಾವ್ಯಕ್ಕೆ ಸರಿಯಾದ ಬೆಲೆ ಕಟ್ಟಿ ವರಕವಿಗಳನ್ನು ನರಕವಿಗಳಿಂದ ಬೇರ್ಪಡಿಸಿ, ಜನತೆಯ ಅಭಿರುಚಿಗೆ ಸರಿಯಾದ ವಲನವನ್ನು ಕೊಡುವನು.

**೨. ಏಕೆ ಬೇಕು?**

(೧) ಇದರಿಂದ ನಮಗೆ ಕವಿಯ ಭಾವದೊಡನೆ ಸಮರಸವಾಗಲು ಸಾಧ್ಯವಾಗುವದು. ಆಗ ಅವನ ಕೃತಿಯಿಂದ ಹೆಚ್ಚಿನ ಆನಂದವನ್ನು ಪಡೆಯುವ ಯೋಗ್ಯತೆಯು ಬೆಳೆಯುವುದು. ಸ್ವಲ್ಪದರಲ್ಲಿ ಹೇಳಬೇಕಾದರೆ ನಾವು ಕಾವ್ಯ—ರಸವನ್ನು ಸವಿಯುವ ರಸಿಕರಾಗುವೆವು.

(೨) ಇದರಲ್ಲಿ ಕಾವ್ಯದ ವಿವಿಧಾಂಗಗಳ ಪರಿಶೀಲನವು ಚೆನ್ನಾಗಿ ಆಗ ಬೇಕಾಗುವದರಿಂದ ನಮಗೂ ಕಾವ್ಯ ಬರೆಯಲು ಪಾತ್ರತೆಯು ಬರುವುದು.

(೩) ಈ ವಿಮರ್ಶೆಯಿಲ್ಲದ್ದರಿಂದಲೇ ಸಾಹಿತ್ಯಜೀವನದಂತೆ ಸಾಮಾನ್ಯ ಜೀವನದಲ್ಲಿಯೂ ಗೊಂದಲ ಉಂಟಾಗಿದೆ. ಮೇಲು-ಕೀಳನ್ನು ತಿಳಿಯುವ ವಿವೇಕವು ಅಳಿದು ಇಲ್ಲದ ಕೃತಿಗೆ ಸಲ್ಲದ ಮಹತ್ವವು ಬಂದು ಸಮಾಜದ ಶಾಂತಿಯು ಹಾಳಾಗಲಿದೆ. ಇದನ್ನೆಲ್ಲ ತಪ್ಪಿಸಲು ವಿಮರ್ಶೆ ಬೇಕು. **ಗುಣಗ್ರಹಣ** ಬೇಕು.

**೩. ಮಾಡುವುದು ಹೇಗೆ?-(ಪೂರ್ವಸಿದ್ಧತೆ) :—**

ಕಾವ್ಯದ ವಿಮರ್ಶೆಯನ್ನು ಚೆನ್ನಾಗಿ ಮಾಡಬಯಸುವವನಿಗೆ ಅದರ ವಿವಿಧಾಂಗಗಳ ಪರಿಚಯವಿರಲೇಬೇಕೆಂದು ಹೇಳುವುದು ಅನವಶ್ಯಕ. ಅದನ್ನೆಲ್ಲ ವಿವರವಾಗಿ ಇಲ್ಲಿ ಕೊಡುವುದು ಸಾಧ್ಯವಿಲ್ಲದ್ದರಿಂದ ಸಾಮಾನ್ಯ '**ಸವಿ**'ಗೆ ಬೇಕಾದ ಮುಖ್ಯಾಂಗಗಳ ವಿಚಾರಗಳನ್ನಷ್ಟು ಇಲ್ಲಿ ಮಾಡಿರುವೆವು.

೧) **ಕವಿಯ ಮೂರು ಗುಣಗಳು** :— ಪ್ರತಿಯೊಬ್ಬ ನಿಜವಾದ ಕವಿಯಲ್ಲಿ **ಪ್ರತಿಭೆಯೆಂ**ಬುದೊಂದು ಶಕ್ತಿಯು ಇದ್ದೆ ಇರುವುದು, ಇದ್ದೇ ತೀರಬೇಕು. ಅದಿಲ್ಲದವನು ಕವಿಯಾಗಲಾರನು, ಅದಿಲ್ಲದ ಬರಡು ಕವಿಯು ಬರೆದ ಕರಡು ಕವಿತೆಗಳು ಎಂದಿನಿಂದಲೂ ಬಲ್ಲವರ ಹೀಯಾಳಿಕೆಗೆ ಗುರಿಯಾಗಿವೆ, ಆಗಲಿವೆ. ಆದರೆ ದಿವ್ಯ ಪ್ರತಿಭೆಯುಳ್ಳ ಕವಿಶ್ರೇಷ್ಠನು ಸದೈವ ಸಮಾಜದಿಂದ ಗೌರವಿಸಲ್ಪಟ್ಟಿರುವನು.

'**ನವ ನವ ಉನ್ಮೇಷಗಳಿಂದ**' **ಮಿಂಚಿನಿಂದ** ಕೂಡಿದ ಹೊಸ ಹೊಸ ಬೆಳಕನ್ನು ನೀಡುವ, **ಈ ಪ್ರತಿಭೆಯು** ಒಂದು ಕವನವನ್ನು ರಚಿಸುವ ಪೂರ್ವದಲ್ಲಿ ಮುಂದಿನ ಮೂರು ಕೆಲಸಗಳನ್ನು ಮಾಡುವುದು. ಆ ಕೆಲಸಗಳನ್ನನುಲಕ್ಷಿಸಿ ಅದಕ್ಕೆ ಕೆಳಗಿನ ಮೂರು ಭಿನ್ನ ಭಿನ್ನ ಹೆಸರುಗಳು ಬಂದಿವೆ:—

(೧) **ದರ್ಶನ** (೨) **ಭಾವನೆ** (೩) **ಕಲ್ಪನೆ.** ಕೆಲವರ ಅಭಿಪ್ರಾಯದ ಮೇರೆಗೆ ಈ ಮೂರೂ ಕೆಲಸಗಳನ್ನು ಮಾಡುವ ಶಕ್ತಿಗಳು ಸ್ವತಂತ್ರವಾದವುಗಳು, ಪರಸ್ಪರ ಭಿನ್ನವಾದವುಗಳು. ನಮಗೆ ಅವು ಒಂದೇ ಶಕ್ತಿಯ ಮೂರು ಆವಿರ್ಭಾವಗಳು ಎಂದೆನಿಸುವುದು.

(೧) **ದರ್ಶನ** (Vision) :— ಈ ಶಕ್ತಿಯು ಕವಿಗೆ ವಿಶ್ವದಲ್ಲಿಯ ಪ್ರತಿಯೊಂದು ಒಡವೆಯ ಅಂತರಂಗವನ್ನೂ, ರಹಸ್ಯವನ್ನೂ, ತೋರಿಸುವುದು. ವಿಶ್ವದ ರಹಸ್ಯವನ್ನರಿತ ಹಿರಿಯರು ಅದೊಂದು ಆಳವಾದ

ಸೌಂದರ್ಯಸಾಗರದಲ್ಲಿ ತೇಲುವ ವಸ್ತುವೆಂದು ಹೇಳುವರು. '**ಆಳವಾಗಿ ಆಲೋಚಿಸುವಲ್ಲಿ ನಿಮಗೆ ಸೌಂದರ್ಯವು ತೋರುವುದು. ವಸ್ತುಗಳ ಆಳವಾದ ಅಂತರಾಳದಲ್ಲೆಲ್ಲ ಸಂಗೀತವಿದೆ**' ಎಂದು **ಕಾರ್ಲೈಯಿಲ್**' ಮಹನೀಯರು ಉಸುರಿರುವರು. ಕವಿಯ '**ದಿವ್ಯದರ್ಶನವು**' ಅವನಿಗೆ ಈ ಅಂದವನ್ನು ತೋರಿಸುವುದು. ಅದನ್ನು ಕಂಡ ಮಹನೀಯರು ಜಗದ ಕಡೆಗೆ ಬೇರೆ ದೃಷ್ಟಿಯಿಂದಲೇ ನೋಡುವರು. ಅದು ಅವರಿಗೆ ತನ್ನ ಅನೇಕ ಗೂಢಗಳನ್ನು ಅರುಹುವುದುಂಟು.

(೨) **ಭಾವನೆ** ( Emotion):— ಕವಿಯ ಹೃದಯವು ತೀರ ಕೋಮಲವಾದುದು, ಅತಿಯಾಗಿ ವಿಶಾಲವಾದುದು. ಅದರಿಂದ ಅವನಿಗೆ ಪರಮಾತ್ಮನ ಸಾಮ್ರಾಜ್ಯದಲ್ಲಿಯ ಪ್ರತಿಯೊಂದು ವಸ್ತುವಿನೊಡನೆ ಬೆರೆಯಲು, ಸಮರಸನಾಗಲು ಬರುವುದು. ಹೊರಗಣ ದೃಶ್ಯಗಳೂ ಧ್ವನಿಗಳೂ ಅವನ ಅಂತರಂಗದಲ್ಲಿ ಭಾವನೆಯ ಪ್ರಬಲವಾದ ಅಲೆಗಳನ್ನೆಬ್ಬಿಸಿ ಅವನಲ್ಲೊಂದು ಬಗೆಯ **ದೈವೀ ಅಸಂತೋಷವನ್ನು** ಹುಟ್ಟಿಸುವದು ! ಅದನ್ನು ಶಾಂತಗೊಳಿಸಲು—ಕಾವ್ಯರೂಪವಲ್ಲದನ್ನು ತೊಡಿಕೊಳ್ಳುವದೊಂದೆ ಸಾಧನ. ಹೀಗಾಗಿ ಆಯಾ ಪ್ರಬಲ ಭಾವನೆಯು ಕಾವ್ಯರೂಪವನ್ನು ತಳೆಯುವುದು.

**ಭಾವವು ರಸದ ಜನನಿ.** ಇದರಿಂದಲೇ ಕಾವ್ಯದಲ್ಲಿ ರಸದ ಉತ್ಪತ್ತಿ. ಭಾವವು ಸ್ಥಿರವಾಯಿತೆಂದರೆ ಅದೆ ರಸವಾಗುವುದು. '**ದರ್ಶನ**'**ವು ಒಂದು ಹೊಸ ದೃಷ್ಟಿಯನ್ನು ನೀಡುವುದು. ಭಾವವು ಅದರಲ್ಲಿ ರಸವನ್ನು ತುಂಬುವುದು.**

**(೩) ಕಲ್ಪನೆ** (Imagination) :—ಇದರ ಕೆಲಸವು ದ್ವಿವಿಧ. ಇದು **ನವ ನೋಟಗಳನ್ನು ಕಾಣುವುದು-ನವ ನಾದಗಳನ್ನು ಕೇಳುವುದು. ದರ್ಶನಕ್ಕೆ** ಬಂದ **ಕಾಣ್ಕೆ** ಅಮೂರ್ತವಾದುದು. **ಭಾವವು** ಹುಟ್ಟಿಸಿದ ರಸವು ಅಮೂರ್ತವಾದುದು. ಅದಕ್ಕೆ ಒಂದು ಮೂರ್ತಸ್ವರೂಪವನ್ನು ಕೊಡುವ ಕೆಲಸವು **ಕಲ್ಪನೆಯ**ದು. **ಶೇಕ್ಸ್‌ಪೀಯರ** ಮಹಾಕವಿಯು ಉಸುರಿದ ಮೇರೆಗೆ

It gives to airy nothing
A habitation and a name.

**ಇದು ಆ ಭಾವಕ್ಕೆ ಸ್ಥಲವನ್ನೂ ಹೆಸರನ್ನೂ ಕಲ್ಪಿಸಿಕೊಡುವುದು.** ಇವರ **ನೆರವಿನಿಂದಲೇ ಆ ಅಮೂರ್ತ ಸೌಂದರ್ಯ—ಭಾವನೆಗಳು ಅವುಗಳ ಚೆಲುವಿಗೆ ಸರಿಯಾದ ನಾಮ-ರೂಪಗಳೆನ್ನು ಪಡೆದು** ಅವುಗಳ ಜನಕ ರಾದ ಕವಿಗಳನ್ನೂ ಸವಿಯುವವರಾದ ರಸಿಕರನ್ನೂ ಆನಂದಸಾಗರದಲ್ಲಿ ತೇಲಿಸುತ್ತವೆ.

**ಈ ರೂಪ** (Image)—**ನಾದ** (Sound) ಗಳೇ ಕ್ರಮವಾಗಿ ಈ **ದರ್ಶನ-ಭಾವಗಳ ಸೂಕ್ಷ್ಮ-ಸ್ಥೂಲ** ದೇಹಗಳು. ಇವನ್ನು ತಾಳಿಯೇ ಅವು ಜನರಿಗೆ ಪ್ರತೀತವಾಗುವವು.

**೨) ಕವಿತೆಯಲ್ಲಿ ಅವನ್ನು ಕಾಣುವುದೆಂದು ?:—**

ಪ್ರತಿಯೊಂದು ಕವಿತೆಯಲ್ಲಿ ಕೆಲವಂಶದಿಂದ ಮೂಡಿದ ಈ ಗುಣಗಳ ನ್ನರಿಯಲು ಕೊನೆಯಿಂದ ಮೂಲದ ಕಡೆಗೆ ಸಾಗಬೇಕು. ಮತ್ತು ಇವೆಲ್ಲ ಯಾವ ಯಾವ ಪ್ರಮಾಣದಲ್ಲಿ ಕವನದಲ್ಲಿಳಿದಿವೆ ಎಂಬುದನ್ನು ಕಂಡು ಹಿಡಿಯಲು ಯತ್ನಿಸಬೇಕು. ಏಕೆಂದರೆ ಕವನದ ಬೆಲೆಯು ಇವುಗಳ ಅಸ್ತಿತ್ವ ವನ್ನವಲಂಬಿಸಿದೆ. (ಅ) **ನಾದ ಮಾಧುರ್ಯ**— (ಆ) **ರೂಪ—ಚಮತ್ಕೃತಿ**-(ಇ) **ಭಾವಪೂರ್ಣತೆ**- (ಈ) **ದಿವ್ಯದರ್ಶನ**-ಇವು ಒಂದ ರಿಂದೊಂದು ಮಿಗಿಲಾಗಿ ಇದ್ದಂತೆ ಕಾವ್ಯದ ಮೇಲ್ಮೆಯು ಹೆಚ್ಚುವುದು. ಕಡಮೆಯಿದ್ದಂತೆ ಕಡಮೆಯಾಗುವುದು. ಇವುಗಳಲ್ಲಿ ಪ್ರತಿಯೊಂದರ ಮೇಲ್ಮೆಯೂ ಯಾವ ಯಾವ ಸಂಗತಿಗಳನ್ನು ಅವಲಂಬಿಸಿರುವುದು ಎಂಬು ದನ್ನು ವಿಚಾರಿಸುವ.

(ಅ) **ನಾದಮಾಧುರ್ಯ :—ನಾದವು** ಕವನದ **ಸ್ಥೂಲಶರೀರ.** ನಮ್ಮ ಮನಸ್ಸನ್ನು ಕವಿತೆಯೆಡೆಗೆ ಮೊದಲು ಸೆಳೆಯುವುದು ಅದರಲ್ಲಿಯ **ಸಂಗೀತ.** ಈ ಮಾಧುರ್ಯವು ಕೇಳುವವರನ್ನು ಮುಗ್ಧರನ್ನಾಗಿ ಮಾಡು ವುದು.—ತಲ್ಲೀನರನ್ನಾಗಿ ಮಾಡುವುದು.

ಸಂಗೀತವಲ್ಲಿಯ ಈ ಶಕ್ತಿಯು **ಸ್ವತಃಸಿದ್ಧ**. ಅದು ಅದರಲ್ಲಿ ಉಂಟಾ ಗುವದೆಂತೆಂಬುದು ಸೃಷ್ಟಿಯ ಅಜ್ಞಾತ ಗೂಢಗಳಲ್ಲೊಂದು. ಕವಿಯು ಈ ರಹಸ್ಯಮಯವಾದ ಶಕ್ತಿಯನ್ನು ಅಷ್ಟೇ ರಹಸ್ಯಮಯವಾದ ರೀತಿ ಯಿಂದ ತನ್ನ ಕವನದಲ್ಲಿ ತರುವನು. ಈ ಸಂಗೀತವು ಕವನದ ಅಂಗ-ಅಂಗಗಳಲ್ಲಿ ತುಂಬಿತುಳುಕುತ್ತಿರುವದರಿಂದ ಪೃಥಕ್ಕರಣ ಪದ್ಧತಿಯಿಂದ

ಅದರ ಪರಿಚಯವನ್ನು ಮಾಡಿಕೊಡುವುದು ಅಸಾಧ್ಯವಲ್ಲದಿದ್ದರೂ ದುಃಸಾಧ್ಯ. ಆದರೂ ಸಾಧ್ಯವಿದ್ದಮಟ್ಟಿಗೆ ಅದನ್ನರಿತುಕೊಳ್ಳುವ. ಕವಿತೆಯ **ನಾದ-ಮಾಧುರ್ಯವು** ಮುಖ್ಯವಾಗಿ ಕೆಳಗಿನ ವಿಷಯಗಳನ್ನಾಶ್ರಯಿಸಿರುವುದು.

(i) **ಶಬ್ದಸಂಗೀತ**:— ಕವಿಯಲ್ಲಿ **ಭಾವಕ್ಕೆ ತಕ್ಕ ಶಬ್ದಗಳನ್ನಾರಿಸುವ** ಸಹಜವಾದ ಕೌಶಲ್ಯವಿರುವುದು. ಅವನ್ನೋದಿದೊಡನೆ ಕವಿತೆಯಲ್ಲಿಯ ಭಾವವು ತನ್ನಿಂದ ತಾನೇ ಹೊಳೆಯುವುದು. ಅವು ಕವಿಯ ಭಾವದಂತೆ ಮಣಿಯುವವು. ಕವಿಯು ನಗುವಾಗ ಅವು ಕುಣಿಯುವವು; ಅಳುವಾಗ ಬಾಡಿ ನಿಟ್ಟುಸಿರು ಬಿಡುವವು. ಅವನು ಸಿಟ್ಟಿಗೆ ಬಂದಾಗ ಅವು ರೌದ್ರರೂಪವನ್ನು ತಾಳುವವು. ಶಾಂತನಾದಾಗ ಅವು ಶಾಂತಿಯ ಕುಂಜಗಳಾಗುವವು. ಅವನು ಚೇತನಗೊಂಡಾಗ ಅವು ಜನರನ್ನು ಹುರಿಗೊಳಿಸುವವು. ತಾತ್ಪರ್ಯವೇನೆಂದರೆ ಕವಿಗಳು '**ಶಬ್ದ ಸೃಷ್ಟಿಯ ಅರಸರು**.' ಆದುದರಿಂದ ಅವು ಪೂರ್ತಿಯಾಗಿ ಅವರ ಆಧೀನವಾಗುವವು. ಅವುಗಳ ಶಕ್ತಿಯನ್ನು ಕೆಳಗಿನ ಸಾಲುಗಳು ಕೆಲಮಟ್ಟಿಗೆ ತೋರಿಸಬಹುದು.

ಉದಾ :—

೧ ಗರಿಗರಿ, ಗಿರಿ ಗಿರಿ, ಹಿಗ್ಗಿಗ್ಗಿ, ಹಿರಿಹಿರಿ !
ಸೈಸೈ ಸರಿಸರಿ ಕುಣಿಯೋಣ ಬಾ!

೨ ನೀರಮಣಿಯು ಹಾರವಾಗೆ
ಬೆವರ ಹನಿಯು ಭಾರವಾಗೆ
ಬಾಗಿಸಿತ್ತು ಮೊಗವನು.

೩ ನೆಲವನ್ನೆಲ್ಲಾ ತತ್ತುವೆನೆಂದು
ಗುಡುಗುತ್ತಿಹುದು ಗರ್ಜಿಸುತಿಹುದು
ಬಡವರ ಬಗ್ಗರ ತುತ್ತಿನ ಚೀಲದ
ಒಳಗಿನ ಒಳಗಿನ ಒಳದನಿಯೊಂದು

೪ ನಿನಗೆ ರಸನೊಂದೆ ಶಾಂತಮೆ ಜಿನೇಂದ್ರ !

೫ ಗರಿಗೆದರಿ ಹಾರು ! ಗರುಡಾತ್ಮ ! ಗಗನದೊಳೇರು
ಅರೆ ಬೆದರಿ ಕುಳಿತಲ್ಲೆ ಕೂಡಬಹುದೆ ?

ಈ ಮಾದರಿಯ ಉದಾಹರಣೆಗಳನ್ನು ಬೇಕಾದಷ್ಟು ಕೊಡಬಹುದು. ನಮ್ಮ ಕನ್ನಡ ಕಾವ್ಯಕಣಿಯು ಇಂಥ ಸಾವಿರಾರು ರತ್ನಗಳನ್ನು ಪಡೆದುದುಂಟು. ಕಾಣುವ ಕಣ್ಣು ಬೇಕು, ಆರಿಸುವ ಬುದ್ಧಿ ಬೇಕು.

(ii) **ತಾಲಬದ್ಧತೆ:—ತಾಲವು ಧ್ವನಿಯ ಇಂಪು-ಸೊಂಪುಗಳನ್ನು ಹುಟ್ಟಿಸುವ-ಹೆಚ್ಚಿಸುವ ಇನ್ನೊಂದು ಪ್ರಮುಖ ಸಾಧನ.** ತಾಲದ ರಹಸ್ಯವನ್ನರಿಯಲು, **ಛಂದಃಶಾಸ್ತ್ರದ** ಅಭ್ಯಾಸವನ್ನು ಮಾಡಬೇಕು. ಜಿಜ್ಞಾಸುಗಳು ಅದನ್ನು ಅಗತ್ಯವಾಗಿ ಮಾಡಿಯೇ ತೀರಬೇಕು. ಅದನ್ನೆಲ್ಲ ಈ ಗ್ರಂಥದಲ್ಲಿ ಹೇಳುವುದು ಶಕ್ಯವಿಲ್ಲ. ಸಾಮಾನ್ಯ ಓದುಗರಿಗಾಗಿ ಕಾವ್ಯದ ಸವಿಯು ತಿಳಿಯಲು ತೀರ ಅವಶ್ಯವಾದ ಕೆಲವು ಮಾತುಗಳನ್ನು ಈ ಮುಂದೆ ವಿವರಿಸುವೆವು :—

(ಅ) **ಮಾತ್ರೆಗಳು :—** ಒಂದು **ಕವಿತೆಯ ತಾಲವು** (Rhythum) ಅದರಲ್ಲಿಯ ಪ್ರತಿಯೊಂದು ಸಾಲಿನಲ್ಲಿಯ **ಮಾತ್ರೆಗಳ ಸಂಖ್ಯೆಯನ್ನ**ವಲಂಬಿಸಿರುವುದು. ಒಂದು ಅಕ್ಷರವನ್ನು ನುಡಿಯುವಷ್ಟು ಕಾಲಕ್ಕೆ '**ಮಾತ್ರೆ**' ಎನ್ನುವರು. **ಲಘು ಅಕ್ಷರಕ್ಕೆ ಒಂದು ಮಾತ್ರೆಯೂ ಗುರು ಅಕ್ಷರಕ್ಕೆ ಎರಡು ಮಾತ್ರೆಗಳೂ ಪ್ಲುತಕ್ಕೆ ಮೂರು ಮಾತ್ರೆಗಳೂ** ಆಗುವವು.

**ಸೂಚನೆ:**—ಗುರು-ದೀರ್ಘಾಕ್ಷರ,-ಜತ್ತಕ್ಷರದ ಹಿಂದಿನ ಅಕ್ಷರ,-ವಿಸರ್ಗ ಅನುಸ್ವಾರಗಳಿಂದ ಕೂಡಿದ ಅಕ್ಷರ, ಪಾದಾಂತ್ಯದಲ್ಲಿರುವ ಅಕ್ಷರ-ಇವು ಗುರು.

**ಲಘು:**—ಉಳಿದವು ಲಘು.

**ಪ್ಲುತ:**—ಗುರ್ವಕ್ಷರವನ್ನು ಒಂದು ಮಾತ್ರೆಯಷ್ಟು ಎಳೆದರೆ ಅಥವಾ ಲಘು ಅಕ್ಷರವನ್ನು ಎರಡು ಮಾತ್ರೆಗಳಷ್ಟು ಎಳೆದರೆ ಅದು 'ಪ್ಲುತ'ವು.

ಉದಾ :—

**ಲಘು :** ಕಮಲ, ರಮಣ.

**ಗುರು :** ಬಾ, ರಕ್ಷಂ, ಕಂ, ಯಶಃ.

**ಪ್ಲುತ:** ಹಾ ! ರಾಮಾऽ ಕುಕ್ಕೂऽ

(ಆ) **ಗಣ :** —ಗುರು-ಲಘು-ಮಿಶ್ರಿತ ಮೂರು ಅಕ್ಷರಗಳ ಗುಂಪಿಗೂ ಮೂರು-ನಾಲ್ಕು-ಐದು ಮಾತ್ರೆಗಳ ಗುಂಪಿಗೂ **ಗಣವೆಂದು** ಹೆಸರು. ಕನ್ನಡದಲ್ಲಿ **ಅಕ್ಷರಗಣಕ್ಕಿಂತ ಮಾತ್ರಾಗಣಗಳಿಗೇ** ಹೆಚ್ಚು ಪ್ರಾಶಸ್ತ್ಯವು ಬಂದಿರುವುದು.

(ಇ) **ವೃತ್ತ :—ಅಕ್ಷರ ಗಣಗಳಿಂದ** ಕೂಡಿದವುಗಳು **ಅಕ್ಷರ-ವೃತ್ತ**ಗಳು; **ಮಾತ್ರಾಗಣಗಳಿಂದ** ಕೂಡಿದವುಗಳು **ಮಾತ್ರಾವೃತ್ತ**ಗಳು. ಮೊದಲನೆಯವು ಸಂಸ್ಕೃತದಿಂದ ಕನ್ನಡದಲ್ಲಿ ಬಂದವು. ಎರಡನೆಯವು ಕನ್ನಡದ ಸ್ವತಂತ್ರ ವೃತ್ತಗಳು.

ಇತ್ತೀಚೆಗೆ ಎರಡನೆಯ ವರ್ಗದ ವೃತ್ತಗಳಿಗೆ ಪ್ರಾಶಸ್ತ್ಯವು ಬಂದಕಾರಣ ಅವುಗಳಲ್ಲಿಯ ಕೆಲವು **ಅಂಶಗಳನ್ನು** ಇಲ್ಲಿ ವಿವರಿಸುವೆವು.

ಈ ಮೊದಲೆ ತಿಳಿಸಿದಂತೆ ಇವುಗಳಲ್ಲಿಯ ಸಾಲುಗಳು ೩-೪-೫ ಮಾತ್ರಾಗಣಗಳಿಂದ ಕೂಡಿದವುಗಳು. ಈ ಗಣಗಳ ರಚನೆಯು ಕವಿಗಳ ಇಚ್ಛೆಯನ್ನವಲಂಬಿಸಿರುವುದು. ಈವರೆಗೆ ಕವಿಗಳು **ದ್ವಿಪದಿ-ತ್ರಿಪದಿ-ಚೌಪದಿ-ಷಟ್ಪದಿ-ಸಾಂಗತ್ಯ-ರಗಳೆ** ಇತ್ಯಾದಿ ಪ್ರಕಾರಗಳನ್ನು ನಿರ್ಮಿಸಿರುವರು.

ಇಂದಿನವರು ಇವುಗಳಲ್ಲಿಯ ಕೆಲವನ್ನು ಬಳಸಿ ಕೆಲ ಹೊಸ ವೃತ್ತಗಳನ್ನು ನಿರ್ಮಿಸತೊಡಗಿರುವರು. ಆಂಗ್ಲ ಭಾಷೆಯಿಂದ **ಸರಳ ರಗಳೆಯೂ** ( Blank verse ) **ಅಷ್ಟಷಟ್ಪದಿಯೂ** (Sonnet) ಪ್ರಚಾರದಲ್ಲಿ ಬರಲಿವೆ. ಮತ್ತು ಬೇರೆ ವೃತ್ತಗಳೂ ಇಲ್ಲಿಯೆ ಹುಟ್ಟಲಿವೆ. ಅವುಗಳ ಇಂಪು ಪೆಂಪುಗಳನ್ನು ಪ್ರತ್ಯಕ್ಷ ಕೇಳಿಯೇ ಅರಿತುಕೊಳ್ಳಬೇಕು.

ಈ ವೃತ್ತಗಳಲ್ಲಿ **ಮೂರು, ನಾಲ್ಕು ಮಾತ್ರೆ**ಗಳ ಗಣಗಳಿಂದ ಗತಿಯು ತೀವ್ರವಾಗಿ, ಅದರಿಂದ **ಲಾಲಿತ್ಯ**ವೂ ಸಂತಸವೂ ವ್ಯಕ್ತವಾಗಲು ಅನುಕೂಲವಾಗುವುದು. ಇಂಥ ಲಲಿತ ಭಾವಗಳನ್ನು ಉಸುರಲು ಕವಿಗಳು ಇಂಥ ಗಣಗಳಿಂದ ಕೂಡಿದ ಚಿಕ್ಕ ಚಿಕ್ಕ ಸಾಲುಗಳನ್ನು ಬರೆವರು. ಅದೇ ಗಂಭೀರ ವಿಚಾರಗಳನ್ನರುಹಲು ಅವರು **ಐದು ಮಾತ್ರೆ**ಗಳ ಗಣಗಳಿಂದ ಕೂಡಿದ ದೀರ್ಘ ಸಾಲುಗಳನ್ನು ಬರೆಯುವರು.

ಉದಾ :-

೧ ರಸವೆ ಜನನ
ವಿರಸ ಮರಣ
ಸಮರಸವೇ ಜೀವನ.

೨ ತಾರೆಗಳು ಮೇಳವಿಸಿ ಬೀಡುಬಿಟ್ಟಿಹ ನಾಡು ಈ ಕನ್ನಡದ ನಾಡು.

**ಸೂಚನೆ:**—ಇದಾಯಿತು ಸಾಮಾನ್ಯ ವಿಚಾರ. ಇಲ್ಲಿ ವೈವಿಧ್ಯಕ್ಕೆ ಸಾಕಷ್ಟು ಎಡೆ ಇದೆ. ನುರಿತ ಕವಿಗಳು ಇವನ್ನು ಬೇರೆ ಬೇರೆ ರೀತಿಯಿಂದ ಹೇಗೆ ಕೂಡಿಸಿ ಉಪಯೋಗಿಸುವರೆಂಬುದನ್ನು ಅವರ ಕವಿತೆಗಳನ್ನೋದಿ ತಿಳಿದುಕೊಳ್ಳಬೇಕು.

**ತಾಲವು ಕವಿತೆಯ ಜೀವಾಳ.** ಅವೆರಡರಲ್ಲಿ ಅಷ್ಟು ತಾದಾತ್ಮ್ಯವಿದೆ. **ಭಾವಪೂರ್ಣಭಾಷೆಯು ತಾಲಬದ್ಧವಾಗಿರಬೇಕೆಂಬುದು ನಿಸರ್ಗದ ನಿಯಮ.** ನಾವು ಯಾವುದಾದರೊಂದು ಪ್ರಬಲವಾದ ಭಾವನೆಗೆ

ಒಳಗಾದವೆಂಬರೆ ನಮ್ಮ ಉಸಿರು ತಾಲಬದ್ಧವಾಗುವುದು. ಆದುದರಿಂದ ಅಂಥ ಅವಸ್ಥೆಯಲ್ಲಿ ನಾವು ಉಸುರಿದ ಮಾತಿನಲ್ಲಿಯೂ ತಾಲವು ತಿಳಿಯದೆ ಹೊರಹೊಮ್ಮುವುದುಂಟು. ಅತ್ಯಾನಂದದಿಂದ ಮೈಮರೆತು ಕುಣಿದಾಡುವ ಮಗು 'ನನಗೊಂದು—ಗೊಂಬೆ ಸಿಕ್ಕಿತು! ನನಗೊಂದು— ಗೊಂಬೆ ಸಿಕ್ಕಿತು' ಎಂದು ತಾಲದಲ್ಲಿ ಹೆಜ್ಜೆ ಹಾಕುತ್ತ ತನ್ನ ಹಿಗ್ಗನ್ನು ತೋರಿಸುವುದು. ಆದುದರಿಂದ ತಾಲವು ಭಾವಪೂರ್ಣ ಕವಿತೆಯ ಸಹಜವಾದ ನಿರ್ಮಿತಿಯು.

**ತಾಲ-ಭಾವಗಳ** ಸಂಬಂಧವನ್ನೂ ಭಾವಕ್ಕೆ ಸರಿಯಾದ ತಾಲದ ರೀತಿಯನ್ನೂ ಅರಿತರೆ ಸಹೃದಯರ ಕೆಲಸ ತೀರಿತು. ಅಷ್ಟರಿಂದವರಿಗೆ ಕಾವ್ಯದ ಮಾಧುರ್ಯವನ್ನು ಸವಿಯಲು ಬರುವುದು. ಅದರ ವಿವರದ ಅಭ್ಯಾಸವು ಕವಿಗಳ ಕೆಲಸ. ಆದ್ದರಿಂದ ಇವರ ವಿವೇಚನೆಯು ಇಷ್ಟೇ ಸಾಕು.

(iii) **ಪ್ರಾಸ-ಅನುಪ್ರಾಸಾದಿಗಳು** :— ಇವುಗಳಿಂದಲೂ ಕವಿಯು ತನ್ನ ಕವಿತೆಯ ಇಂಪನ್ನು ಹೆಚ್ಚಿಸುವನು. ಕನ್ನಡ ಕೈಪಿಡಿಯ ಮಾನ್ಯ ಸಂಪಾದಕರು ಇವನ್ನು ಈ ಮೇರೆಗೆ ಬಣ್ಣಿಸಿರುವರು.

(೧) **ಪ್ರಾಸ** :—ಪದ್ಯದ ಪ್ರತಿಪಾದದಲ್ಲಿಯೂ ಆದಿಯಲ್ಲಿ ಒಂದೆರಡನೆಯ ಸ್ವರಗಳ ನಡುವೆ ಒಂದೇ ವಿಧವಾದ ವ್ಯಂಜನವಿರುವುದು ಪ್ರಾಸದ ಸಾಮಾನ್ಯ ಲಕ್ಷಣವು.

ಉದಾ :— ಏನನರಿಯುವೆ ದೇವ
ಹೀನನಾಗಿಹೆ ನಾನು !

(೨) **ಅನುಪ್ರಾಸ** :—ಅಕ್ಷರಗಳ '**ಆವೃತ್ತಿ**'ಯೆ ಅನುಪ್ರಾಸ. ಅವು ಒಂದೊಂದಾಗಿಯೂ-ಎರಡೆರಡಾಗಿಯೂ ಮತ್ತೆ ಮತ್ತೆ ಬರಬಹುದು.

ಉದಾ :—

ತಿಳಿವೆಳಗಿನ ತೀರ್ಥರೂಪನೆ ತಿಂಗಳ
ಬೆಳಗಿನೊಳಾದ ಪುತ್ತಳಿಯೆ.
ಕೊಡು ಕೊಡು ಬೇಗನೆ, ಕಡುಗವನೊಂದನು
ನಡೆಯುವೆ ನಾನೀ ಕಾಳಗಕೆ !

ಈ ಬಗೆಯಾಗಿ ಆದ ಅಕ್ಷರಗಳ ಪುನರಾವೃತ್ತಿಯಿಂದ ಕಿವಿಗೆ ಒಂದು ಅವಿದಿತವಾದ ಸಂತೋಷವಾಗುವುದು. ಇವೆಲ್ಲ ಸಾಧನಗಳು ಕವಿತೆಯಲ್ಲಿ ಸಂಗೀತವನ್ನೂ ಉಂಟುಮಾಡುವವು.

(ಅ) **ರೂಪಕಚಮತ್ಕೃತಿ :—ರೂಪ ಇಲ್ಲವೆ ಚಿತ್ರಚಮತ್ಕೃತಿಯು** ಕವಿತೆಯ ಕಮನೀಯತೆಯನ್ನು ಹೆಚ್ಚಿಸುವ ಇನ್ನೊಂದು ಉಪಕರಣ. ಇದು ಕವಿತೆಯ **ಸೂಕ್ಷ್ಮ ಶರೀರ. ಭಾವಪೂರ್ಣ ಭಾಷೆಯು ಸಹಜವಾಗಿ ನಾದ-ಮಧುರವಾಗುವಂತೆ, ಭಾವಪೂರ್ಣ ಕಲ್ಪನೆಯು ಚಿತ್ರಮಯವಾಗುವುದು.** ಚಿತ್ರವು ಭಾವವನ್ನರುಹುವ ಸಹಜ ಸಾಧನ. ಎಷ್ಟೋ ಸಲ ನಮ್ಮ ದಿನದ ಭಾಷೆಯಲ್ಲಿಯೂ ನಾವು ಚಿತ್ರಗಳನ್ನು ಪ್ರಯೋಗಿಸುವುದುಂಟು. ಅವು ತೀರ ರೂಢವಾದುದರಿಂದ ಅವುಗಳಲ್ಲಿಯ ಚಮತ್ಕೃತಿಯು ನಮಗೆ ಮರೆಯಾಗಿರುವುದು. **'ಅವನ ಮುಖವು ಅರಳಿತು'** ಎಂಬಲ್ಲಿ ನಾವು ಅರಳುವ ಹೂವೊಂದನ್ನು ಒಳಗಣ್ಣಿನೆದುರು ಚಿತ್ರಿಸುವೆವು. ಅದು ಅರಳುವಂತೆ ಮುಖವರಳಿತೆಂದು ಸೂಚಿಸುವೆವು.

**ಚಿತ್ರವು** ಅನೇಕ ಕಲ್ಪನೆಗಳ ಪ್ರತಿಮೆಯಾಗಿರುವುದರಿಂದ ಅದನ್ನು ಕಂಡು ನಾವು ಎಷ್ಟೋ ಸಂಗತಿಗಳನ್ನು ಸಹಜವಾಗಿ ತಿಳಿದುಕೊಳ್ಳುವೆವು. ಅವನ್ನೆಲ್ಲ ಬೇರೆ ಬೇರೆ ಶಬ್ದಗಳಿಂದ ಉಸುರುವದೆಂದರೆ ಅದೊಂದು ದೊಡ್ಡ ಹೊತ್ತಿಗೆಯೆ ಆಗಬಹುದು. ಕಿರಿದರಲ್ಲಿ ಪಿರಿದನ್ನು ಉಸುರಲು ಕವಿಯು ಯೋಜಿಸುವ ಯುಕ್ತಿಗಳಲ್ಲಿ ಇದೊಂದು.

ಈ ಚಿತ್ರವು **ತಿಳಿಯಾದುದಾಗಲೂ ಹೊಳಪುಳ್ಳದಾಗಲೂ ಪರಿಣಾಮಕರವಾಗಲೂ** ಕವಿಯು ಬೇರೆ ಬೇರೆ **ಅರ್ಥಪೂರ್ಣಶಬ್ದಗಳನ್ನೂ** ಅಂದವಾದ **ಅಲಂಕಾರಗಳನ್ನೂ** ಉಪಯೋಗಿಸುವನು. ಉಪಮಾದಿ ಕೆಲವು ಅಲಂಕಾರಗಳ ಪರಿಚಯವನ್ನು ಈ ಮೊದಲೇ ಮಾಡಿಕೊಟ್ಟಿರುವೆವು. ಅವನ್ನು ಈ ಸಂದರ್ಭದಲ್ಲಿ ಓದಿಕೊಳ್ಳುವುದು ಒಳಿತು.

ಉದಾ :—

೧ ಎನಿತು ಇನಿದು ಈ ಕನ್ನಡ ನುಡಿಯು
ಮನವನು ತಣಿಸುವ ಮೋಹನ ಸುಧೆಯು.

೨ ಹೊಸ ಜೀವವನು ತುಂಬ, ಕಸವ ರಸಗೈವ ದೊರೆಯೆ!
ಹಸಿನೆಲದ ಹುಳವಾಗಿ ಹೊಸೆಯುವುದು ಸಾಕಿನ್ನು;

೩ ಚಿಗರ‍್ಯಾಗಿ, ತಿಗರ‍್ಯಾಗಿ, ನಿದ್ದೀಯ ಭಗರ‍್ಯಾಗಿ
ಗಾಳಿಗೂ ಹಗುರಾಗಿ ಕುಣಿಯೋಣ ಬಾ

**ಸೂಚನೆ:**—ಮೇಲಿನ ಉದಾಹರಣೆಗಳಲ್ಲಿ ಕವಿಯ **ಚಿತ್ರಕಶಕ್ತಿಯು** ಚೆನ್ನಾಗಿ

ಒಡಮೂಡಿವೆ. ರೇಖಾಂಕಿತ ಶಬ್ದಗಳನ್ನು ಸ್ವಲ್ಪ ಹೆಚ್ಚು ದಿಟ್ಟಿಸಿ ನೋಡಿದರೆ ಅವು ತಮ್ಮಲ್ಲಡಗಿದ ಸೊಗಸಾದ ಚಿತ್ರಗಳನ್ನು ತೋರಿಸದೆ ಇರವು.

(ಇ) **ಭಾವಪೂರ್ಣತೆ** :—**ಭಾವವು ಕವಿತೆಯ ಪ್ರಾಣ.** ಭಾವ ವಿಲ್ಲದೆ ಗೀತವಿಲ್ಲ. ‘ **ವಿಶ್ರಾಂತಿಯಲ್ಲಿ ನೆನೆದ ಭಾವನೇ ಕವಿತೆಯ ಸೆಲೆ**’ ಎಂದು **ವರ್ಡ್ಸ್‌ವರ್ಥ್** ಕವಿಯ ಮತ. ಹಿಂದೆ ಹೇಳಿದ ಮೇರೆಗೆ ಕವಿಯು ಕಂಡ ದಿವ್ಯ ಕಾಣ್ಕೆಯು, ಅವನ ಭಾವವನ್ನು ಕೆರಳಿಸುವುದು. **ಕೆಲಕಾಲ ಕಳೆದ ಮೇಲೆ**, ಈ ಕೆರಳಿಕೆಯನ್ನು ನೆನೆದು, ಕವಿಯು ತನ್ನ ಕವಿತೆಯನ್ನು ಬರೆಯತೊಡಗುವನು. ಅದರಿಂದ ಕವಿತೆಯಲ್ಲಿ ರಸವು ತುಂಬುವದು. ಭಾವವು ದುಃಖಮಯವಿರಬಹುದು, ಸುಖಮಯವಿರಬಹುದು. ಅದು ಸರಿಯಾಗಿ ಹೊರಹೊಮ್ಮಿತೆಂದರೆ ಅದರಿಂದುಂಟಾಗುವುದು ಆನಂದವೆ—ಇನ್ನಾವುದಿಲ್ಲ.

ಉದಾ : —

ಎಂಥ ನಾಡಿದು ಎಂಥ ಕಾಡಾಯಿತು |
ಹುಲುಸಾದ ಬೆಳೆ ಹೋಗಿ ಹುಲ್ಲು-ಕೊಳೆ ತುಂಬಿಹುದೋ! ||

ಈ ಭಾಗವು ಎಲ್ಲಿದೆ? ಇದರ ಸ್ವರೂಪವೇನು ? ಇತ್ಯಾದಿಗಳನ್ನು ಕಂಡು ಹಿಡಿಯದೆ ಕವಿತೆಯ ರಸವೆ ತಿಳಿಯದು.

(ಈ) **ದಿವ್ಯದರ್ಶನ** :— ‘ **ರವಿ ಕಾಣದ್ದನ್ನು ಕವಿ ಕಾಣುವ**’ ಎಂಬ ನಾಣ್ಣುಡಿಯು ಕವಿಯ ಈ ಶಕ್ತಿಯನ್ನು ಸುಲಕ್ಷಿಸಿಯೆ ಪ್ರಚುರಗೊಂಡಿದೆ. ವಿಶ್ವದ ಒಳತಿರುಳಿನ ಅಂಶಗಳನ್ನು ಕಂಡು ಕವಿಯು ಅವನ್ನು ತನ್ನ ಕವನದಲ್ಲಿ ಜನರೆದುರು ಇಡುವನು. ಇವನ್ನು ಕಾಣುವ ‘ **ಕ್ರಾಂತದರ್ಶಿ** ’ ಗಳ (ಸರ್ವಜ್ಞರ) ಕವಿತೆಗಳೇ ನಿಜವಾದ ಕವಿತೆಗಳು. ಇದಿಲ್ಲದ ಕವಿತೆಯು ಕೆಳಗಿನ ತರಗತಿಯದೆಂದು ನಿರ್ವಿವಾದವಾಗಿ ಹೇಳಬಹುದು. ಏಕೆಂದರೆ **ಇದೇ ಕವಿತೆಯ ಆತ್ಮ.**

**೩) ಕವಿಯೊಬ್ಬನ ಸೂಚನೆಗಳು :—(ಪ್ರತ್ಯಕ್ಷ ಬರಹ):—**

ಕೊನೆಗೆ ಕವಿಯೊಬ್ಬನು ಕವಿತೆಯ ಗುಣಗ್ರಹಣದ ಬಗ್ಗೆ ಮಾಡಿದ ಕೆಲವು ಸೂಚನೆಗಳನ್ನು ಇಲ್ಲಿ ಕೊಡಬಯಸುವೆವು. ಪ್ರತ್ಯಕ್ಷ ಕವಿಯ ಅನುಭವದ ವಾಣಿಯು ಅದರಲ್ಲಿರುವುದರಿಂದ ಅದು ಸವಿಯುವವರಿಗೆ ಸರಿಯಾದ ದಾರಿಯನ್ನು ತೋರಿಸದಿರದೆಂದು ನಂಬುವೆವು. ಅವರು ಹೇಳುವುದೇನೆಂದರೆ: —

(೧) ಪದ್ಯಕಾವ್ಯದ ಉದ್ದೇಶವು **ಅರ್ಥವ್ಯಕ್ತಿ**ಯಾಗಿರದೆ **ಹೃದ್ಯತೆ** ಯಾಗಿದ್ದರೂ, ಪ್ರತಿಯೊಂದು ಕವನಕ್ಕೆ ಏನಾದರೂ ಒಂದು ಅರ್ಥವಿದ್ದೇ ಇರುವುದು. ಆ ಸ್ವಾಭಾವಿಕ ಅರ್ಥವನ್ನು ಮೊದಲು ಗ್ರಹಣ ಮಾಡಬೇಕು. ಅದೇ **ವಾಚ್ಯಾರ್ಥ**. ಯಾವುದೋ ಒಂದು ವಸ್ತುವನ್ನು ಕುರಿತು ಏನೋ ಕೆಲವು ಮಾತು ಹೇಳಿರುವರು. ಆ ಮಾತಿನ ಅರ್ಥವನ್ನು ತಿಳಿದುಕೊಳ್ಳ ಬೇಕು.

(೨) ಆ ಮಾತುಗಳಿಂದ ಆ ವಿಷಯದ ಬಗ್ಗೆ ಮಾತಾಡುವವನ ಅಭಿ ಪ್ರಾಯ-ಭಾವನೆಗಳೇನು ಸೂಚಿತವಾಗುವವೋ ಅವುಗಳಿಂದ ಮೂಲಾರ್ಥಕ್ಕೆ ಯಾವ ಸ್ವರೂಪ ಬರುವದೋ ಅದನ್ನು **ಲಕ್ಷಿಸಬೇಕು.**

(೩) ಸ್ವಂತಭಾವದ ಹೊರತು ಅವನಿಗೊಂದು **ಆವೇಶ-ಅಧಿಕಾರ** ವಿರುವದು. ಅದರಿಂದ ಆ ಸ್ವರೂಪಕ್ಕೆ ಯಾವ ಬಣ್ಣವೇರುವದೋ ಅದನ್ನು **ಗಮನಿಸಬೇಕು.**

(೪) ಇಷ್ಟೆಲ್ಲ ಆಗಿಯೂ ಕವಿಯ ಆಕಾಂಕ್ಷೆಯೇನು ಎಂಬುದನ್ನರಿತು ತಮ್ಮ ಸಹೃದಯತೆಯ ಭಾಂಡಾರದಿಂದ ಅವನ ಕೊರತೆಯನ್ನು ತುಂಬಿ ಅದರ ಪ್ರಾಣಶಕ್ತಿಯನ್ನು ಹೆಚ್ಚಿಸಿ ಅದರ ಚೈತನ್ಯವನ್ನು ಅನುಭವಿಸ ಬೇಕು.

(೫) ಹೀಗೆ ಮಾಡಬೇಕಾದರೆ ಕವಿಯ ಪದ-ಪದಕ್ಕೂ, ಅಕ್ಷರ-ಅಕ್ಷ ರಕ್ಕೂ ಏನು **ಧ್ವನಿಸಾಮರ್ಥ್ಯವಿದೆಯೋ** ಅದನ್ನು ಒಪ್ಪಿಸಬೇಕು.

(೬) **ಹೃದಯದಿಂದ ಬಂದ ಕವಿತೆ ಹೃದಯಕ್ಕೆ ಸೇರಬೇಕಾ ದರೆ, ಭಾವುಕನ ಹೃದಯಶಕ್ತಿಗಳು ಕಾರ್ಯಮಾಡಬೇಕು.** ನಮ್ಮ ಜೀವನವು **ಹೊಸದೊಂದು** ಕಾಣ್ಕೆಯನ್ನು ಕಾಣಬೇಕಾದರೆ, **ನವರಸ ವನ್ನು** ರುಚಿಸಬೇಕಾದರೆ, **ನವೋನವ ನಾದವನ್ನು** ಕೇಳಬೇಕಾದರೆ, ಅದ್ಭುತ **ಜೀವನದ ಉಸಿರನ್ನು** ಆಡಿಸಬೇಕಾದರೆ, ಇದನ್ನು ಮಾಡಲೇ ಬೇಕು.

(೭) ಈ ಮೇರೆಗೆ ಎದೆ ತೆರೆದು ಕೇಳಿದರೆ, ಇಂಪಿಗೆ ಕಿವಿ ಸೋಲುವುದು; ಬಣ್ಣನೆಗೆ ಕಣ್ಣು ರಳುವವು; ತಾಳಲಯಕ್ಕೆ ಪ್ರಾಣ ಕುಣಿಯುವುದು; ಅದರ ಕೊಂಕಿಗೆ, ವ್ಯಂಜನೆಗೆ, ಧ್ವನಿಗೆ ಮೈಮರೆಯುವುದು; ಮನವು ಉನ್ಮನವಾಗು

ವದು; ಜೀವ ನೀರ ಕುಡಿಯುವದು. ಭಾವಸಮಾಧಿಯಲ್ಲಿ ಮೈಮರೆತು ಮಾನವನು **ಅಮೃತಾನುಭವ** ಹೊಂದುವನು.

**೪. ಸವಿಯು ಮಾದರಿಗಳು :—**

(೧)

ಜನಕರಾಯನ ಮಗಳು। ವನಕೆ ತೊಟ್ಟಿಲ ಕಟ್ಟಿ।
ಕುಶಲವರನಿಟ್ಟು ತೂಗ್ಯಾಳೋ। ಸೀತಾದೇವಿ।
ನಗುತೆ ವನವಾಸ ಕಳೆದಾಳೊ॥

**ಸವಿ:—** ಜನಸಾಮಾನ್ಯರ ಕಾವ್ಯವೆಂದಮಾತ್ರಕ್ಕೆ ಈ ಕವನ ಸಾಮಾನ್ಯವೆಂದು ಭಾವಿಸಬೇಕಾದದ್ದಿಲ್ಲ. ಜನದ ಬದುಕು ವಾಸ್ತವವಾಗಿ ನಡೆದಷ್ಟು, ಜನದ ನಯ ಆಳವಾಗಿ ಇಳಿದಷ್ಟು, ಜನದ ನುಡಿಗೆ ಭಾವವ್ಯಂಜನೆಯ ಶಕ್ತಿಯೂ ಸೊಗಸೂ ನೆರೆಯುವವು. ಅದು ಹೇಗೆಂಬುದನ್ನು ನೋಡಿ:

**ಜನಕರಾಯನ ಮಗಳು**— ಎನ್ನುವಲ್ಲಿ ಕವಿ ಆಕೆಯ ತೌರ ಸೌಭಾಗ್ಯವೆಂತಹದೆಂದು ಸೂಚಿಸುತ್ತಾನೆ. ದಶರಥರಾಯನ ಸೊಸೆ ಎಂದು ಹೇಳಿಲ್ಲ; ಸೊಸೆಗೆ ಮಾವನ ಹಿರಿಮೆಯಲ್ಲಿ ಭಾಗವಿದೆ ಎಂದು ಹೇಳುವುದಕ್ಕಾಗುವುದಿಲ್ಲ. ಆದರೆ ಯಾವ ಹೆಣ್ಣುಮಗುವಿಗೂ ತೌರುಮನೆಯ ಕನಿಕರ ಬೆನ್ನ ಹಿಂದೆಯೇ ಬರುತ್ತದೆ. ಇದು ನಮ್ಮ ನಾಡು, ನಮ್ಮ ಮನೆಗಳ ಸಂಪ್ರದಾಯವನ್ನು ಸೂಚಿಸುತ್ತದೆ.

ಇಂಥ ಐಶ್ವರ್ಯದ ಮಗಳು **ವನಕ್ಕೆ ತೊಟ್ಟಿಲ ಕಟ್ಟಿದಳಂತೆ.** ಕಂಬಕ್ಕೆ ಸಂಸಾರ ಮಾಡುವದೇ ಎನ್ನುವಂತೆ, ವನಕ್ಕೆ ತೊಟ್ಟಿಲ ಕಟ್ಟುವುದು ಎನ್ನುವಲ್ಲಿ ಕನ್ನಡನುಡಿಯ ಒಂದು ಹದಿರು ಕಾಣುತ್ತದೆ. ಮಾತಿನ ಅರ್ಥ ಅಗಾಧವಾಗಿ ಹೋಗುತ್ತಿದೆ. ಅರಮನೆಗಲ್ಲ ವನಕ್ಕೆ; ಮರಕ್ಕೆ ಅಲ್ಲ ವನಕ್ಕೆ ; ಇಂದು ಒಂದು ಮರ, ನಾಳೆ ಒಂದು ಮರ. ಅಲ್ಲದೆ ಉದ್ಯಾನದಲ್ಲಿ ಗಾಳಿಬೀಸುವಂತೆ, ವಿನೋದವಾಗಿರುವಂತೆ ಮರಕ್ಕೆ ಎಂದೆಣಿಸಬಾರದು. ವನಕ್ಕೆ: ಕಾಡಿಗೆ; ಕಾಡಿನಲ್ಲಿ ವಾಸಮಾಡುವ ಇರುಳಿಗ–ಸೋಲಿಗರಂತೆ, ಅಥವಾ ಮನೆಯಿಲ್ಲದೆ ಅಲೆಯುವ ಕೊರಮ ಕೊರಚ ಹಂದಿ ಜೋಗಿಗಳಂತೆ, ಈ ರಾಜಪುತ್ರಿ ಮಗುವನ್ನು ತೂಗುವ ತೊಟ್ಟಿಲನ್ನು ಕಾಡಿನ ಮರಕ್ಕೆ ಕಟ್ಟಿದಳು.

ಅದರಲ್ಲಿ **ಕುಶಲವರನ್ನಿಟ್ಟು ತೂಗಿದಳು.** ಎಂದರೆ ತನ್ನ ನೋವನ್ನು

ಬಹಳ ನೆನೆದಿರಬೇಕಲ್ಲವೇ? ಇಲ್ಲ. ತನ್ನ ಮಕ್ಕಳಿರಡನ್ನೂ ಆ ತೊಟ್ಟಿಲಲ್ಲಿಟ್ಟು ತೂಗುತ್ತ–ತೂಗಲು ಚೇಪಿಸುಲ್ಲ. ಇದ್ದರೂ ಈಕೆ ಬಿಡುತ್ತಾ ಇರಲಿಲ್ಲ. ಮಾತೆಯು ಮಮತೆ ಹಿರಿದು.

**ನಗುತ ವನವಾಸ ಕಳೆದಳು**. ಮಕ್ಕಳನ್ನು ನೋಡುತ್ತಾ ನೋವನ್ನು ಮರೆಯಿಸಿಕೊಂಡಳು. ನಗು ಮಾತ್ರ ಕಾಣುತ್ತಿತ್ತು. ಕವಿ ಮೊದಲಲ್ಲಿ ಕತ್ತಲ ತೆರೆಯನ್ನು ಬರೆದು ಅದರ ಮೇಲೆ ಲೋಕಮಾತೆಯು ಈ ಹಸನ್ಮುಖವನ್ನು ಹಚ್ಚಿದ್ದಾನೆ. ಆ ನಗೆಯು ಹಿಂದೆ ಹಿರಿದಾದ ಅಳಲು ಕಾಣುತ್ತಿದೆ.

ಇಲ್ಲಿ ಕಾಣುವ ಭಾವನೆಯು ಸೊಗಸೂ, ಮಾತಿನ ಚಾತುರ್ಯವೂ ಅಸಾಧಾರಣವಾದುದು.

—ಶ್ರೀನಿವಾಸ.

## (೨)

## ಕೂಗು–ಹುಡುಕು.

ಬಂದೆನಾ! ಮನೆಗೆ 'ಅಮ್ಮಾ' ಎಂದು ಕೂಗುತಲಿ
'ಕಂದ!-ನಾಸಿಲ್ಲಿ ಕುಳಿತಿಹೆನು ಬಾ' ಎನ್ನುತಲಿ
ನೀನು ಮೆಲು ಮಾತಿನೊಳು ನುಡಿದ ದನಿಗೇಳಿ
ನಾನು ಬಂದೆನು ಒಳಗೆ ಓಡುತೋಡುತಲಿ
ಓಡುತೋಡುತಲಿ ಆತುರದಿ ಬಂದೆನು ಇಲ್ಲಿ
ನೋಡಿದೆನು ನೀ ಕಾಣಲೊಲ್ಲೆ! ಇರುತಿಹೆ ಎಲ್ಲಿ?
ಕುರುಳ ಸರಿಮಾಡಿಕೊಳ್ಳುವ ಹಣಿಗೆಯಿಲ್ಲಿಹುದು
ಮಿರುಗುವೊಗ ನೋಡಿಕೊಳ್ಳುವ ಕನ್ನಡಿಯು ಇಹುದು
ತುರುಬಿನಲಿ ಮುಡಿದ ಅರಳುಗಳು ಸುರಿದಿಹವು
ಕೊರಳ ಸರ ಬೆರಳುಂಗುರಗಳು ಬಿದ್ದಿಹವು
ಅರಿಷಿಣದ ಕುಂಕುಮದ ಕರಡಿಗೆಗಳಿಹವಿಲ್ಲಿ
ಅರಿಯೆನೇ! ಎಲ್ಲವೂ ನಿನ್ನವಿವು ನೀನೆಲ್ಲಿ?
ಅಡಿಗುರುಹು ಮೂಡಿಹುದು ಇಲ್ಲಿ ಎಡೆಯಾಡಿದೊಲು
ಹುಡುಗಾಟ ಮಾಡಬೇಕೆಂದು ನೀ ನಾ ಬರಲು
ಅಡಗಿರುವೆಯೆಲ್ಲಿಯೋ! ಎಂದು ಕಾಣವುದು
ಹುಡುಕದೆಯೆ ಬಿಡುವೆನೇ ನಿನ್ನ ನಾನಿಂದು?

ಎಲ್ಲಿಯಡಗಿದ್ದರೂ ಹುಡುಕಿ ನಾ ಹಿಡಿಯುವೆನು
ಬಲ್ಲೆನೌ ಚೆನ್ನಾಗಿ ಕಣ್ಣು ಮುಚ್ಚಾಟವನು
ಇನ್ನೊಮ್ಮೆ ಮುನ್ನಿನೊಲು ನನ್ನ ಕರೆ ನೀನು
ನಿನ್ನ ದನಿ ಬರುವ ದೆಸೆಯಲ್ಲಿ ಹುಡುಕುವೆನು. —ಆನಂದಕಂದ

**ಸವಿ:—**

**ಕವಿಭೂಷಣರ 'ಮುದ್ದನ ಮಾತು'** ಗಳ ಒಂದು ವೈಲಕ್ಷಣ್ಯ ವೆಂದರೆ ಭಾವದ ಮುದ್ದುತನ ಮತ್ತು ಮಾತಿನ ಚಾತುರ್ಯವೆಷ್ಟೊ ಅಷ್ಟೇ ಅವುಗಳಲ್ಲಿ **ಅರ್ಥದ ಪ್ರಸಾದಗುಣವಿದೆ.** ಚದುರ ಮಾತಿನೊಳಗಿಂದ ಕಡೆದಂತೆ, ಒಡೆಮೂಡೆದು ತೇಲಿ ಮೇಲೆ ಬಾಯಿಗೆ ಬರುವ ಬೆಣ್ಣೆಯ ಮುದ್ದೆ ಯಂತೆ, ನುಣ್ಣನ್ನ ಅರ್ಥವೂ ಮುದ್ದಾದ ಭಾವವೂ ಒಂದನ್ನೊಂದು ಅಪ್ಪಿ ಕೊಂಡು ಮನದ ಮನೆಯನ್ನು ಸೇರುವವು.

ಈ ಕವಿತೆಯಲ್ಲಿ **ವಾತ್ಸಲ್ಯವು** ಸ್ಥಾಯೀರಸವಾಗಿದೆ. ಹೊರಗಣ್ಣಿಗೆ ವಾಚ್ಯವಾಗಿ, ಮಗುವು ಮಾತಿಗೆ ಆಡಿದ ಮಾತೆಂಬು ತೋರಿದರೂ, ಆ ಅರ್ಥ ದಿಂದ ಕೂಡಿದ ಭಾವವು ರಮ್ಯವಾಗಿದ್ದರೂ, ಈ ಕವಿತೆಯೆಂದರೆ ಭಗ ವಂತನಿಗೆ **ಭಕ್ತನು** ತಾಯಿ—ಮಕ್ಕಳ ಆಟದಲ್ಲಿ ತನ್ನ ಭಕ್ತಲೀಲಾನಂದ ವನ್ನು **ಸೂಸುತ್ತಿ**ರುವದು ಸೂಚ್ಯವಾಗುವಂತಿದೆ. ಈ ಭಾವವು ರಮ್ಯ ವಾಗಿದೆ.

**ಜೀವ—ಪುರುಷೋತ್ತಮರ** ಅಗಲಿಕೆಯು ಆಡುವಿಕೆಗೆ ಅವಲಂಬನ. ಅವರ ಪರಸ್ಪರಾಕರ್ಷಣವು ಕೂಡುವಿಕೆಗೆ ಉದ್ದೀಪನ; ಆ ಕೂಗು—ಆ ಹಣಿಗೆ- ಆ ಕನ್ನಡಿ— ಆ ಹೂವು—ಇವೆಲ್ಲವುಗಳು 'ಇವ್ವಾಳೆ— ಇಲ್ಲಿಯೇ ಅಡಗಿದ್ದಾಳೆ- ಹುಡುಕು—ಸಿಗುವಳು ಹುಡುಕು' ಎಂದು ಪ್ರಚೋದಿಸುವ ಕುರುಹುಗಳು. ಹುಡುಗನು ಈ ಕಾಣದ ಕಾಟವನ್ನು ಹುಡುಕುವ ಆಟವೆಂದು ತಿಳಿದದ್ದರಲ್ಲಿ ಆನಂದದ ವಿಲಾಸವಿದೆ.

ಇಂಥ ಕವಿತೆಗಳನ್ನು ಮನವನ್ನೆಲ್ಲ ಮೌನವನ್ನಾಗಿಸಿ, ಜೀವವನ್ನೆಲ್ಲ ಕಿವಿಯಾಗಿಸಿ, ಆಡಿಕೊಳ್ಳಬೇಕು—ಹಾಡಿಕೊಳ್ಳಬೇಕು. ಅಂದರೆ ಗಾಢನಿದ್ರೆ ಯಿಂದೆದ್ದ ಮೇಲೆ ಶಾಂತಿಯ ಸ್ಮರಣೆಯೂ ಆನಂದದ ಅನುಭವವೂ ಆಗು ವಂತೆ ಇವುಗಳ ಏಕಾಗ್ರಶ್ರವಣದಿಂದ ಯಾವುದೋ ಒಂದು ನೆನಪಾಗಿ ಏನೋ ಒಂದು ಆನಂದವಾಗುವದು.

—ಬೇಂದ್ರೆ

## ೩
## ಆಯಾಸ

ತನ್ನ ಪಳಪೆ ತನಗೆ ಭಾರ
ಕತ್ತನೆತ್ತಿ ನೋಡಲಾರ
ದಾಗಲು ಹೂಬಿಸಿಲಿನಲ್ಲಿ
ಜಿಂಪು ಜಿಂಪುಗೊಂಡು ಜಾರಿ
ತೊಟ್ಟು ಬಿಟ್ಟು ಕಳಚಿ ಕೆಳಗೆ
ಬೀಳುವಂತೆ ಬಾಯಿಬಿಟ್ಟು
ನೀರಮುಣಿಸಿ ಹಾರವಾಗೆ
ಬೆವರ ಹಸಿಯೆ ಭಾರವಾಗೆ
ಬಾಗಿಸಿತ್ತು
ಮೊಗವನು
ಉಸಿರಬಿಡಲು ಉಸಿರೆ ಇಲ್ಲ
ಎದೆಯು ಎಸರು ಉಕ್ಕಲಿಲ್ಲ;
ಬಿಕ್ಕು ಮೀರಿ ಮಿಕ್ಕಲಿಲ್ಲ;
ತನಗೆ ತಾನೆ ನಕ್ಕಿತಲ್ಲ ?
ಆಳ ದುಗುಡ ಮಾಡಲೇಕೆ
ದುಗುಡವಿರಲು ಅಳಲೆ ಬೇಕೆ ?
ಆಸೆ ಹಿಂಗಿ ಆರಲಿಲ್ಲ;
ತಾನೆ ಇಂಗಿ ಆರಿತಿಲ್ಲಿ,
ಬೆಳಕು ಹೊತ್ತಿ ಹಾರಲಿಲ್ಲ.
ಬತ್ತಿ ಬತ್ತಿ ಆರಿತಿಲ್ಲಿ;
ಇತ್ತು ಎಲ್ಲಿ ಸುತ್ತೆ ಹಾದಿ
ಇದ್ದಕಿದ್ದ ಒಲು ಸಮಾಧಿ :
ಕ್ಷಣ ಮೀರಿತು
ಯುಗವನು
ಅತ್ತ ಇತ್ತ ನೋಡಲೇಕೆ ?
ಸುತ್ತ ಗಾಳಿ ಆಳ ನೀರು
ಬಾಳ ಕಾಡು ಜಿಟುಕು ಜೀರು;

ಬದುಕಿನ ನಡುಕಟ್ಟಿನಲ್ಲಿ
ಕಟ್ಟಿ ಹಿಟ್ಟಿದ ಕಟ್ಟಿಜಲ್ಲಿ
ರಸವು ಆರೆ, ಗಾಳಿ ಹಾರೆ, ತೊಟ್ಟು ಜಾರೆ
ಮುಳುಗಿ ಮುಳು ಮುಳುಂಗಿತು.
ಕೃತ್ಯ, ಅಕೃತ್ಯ ಎಲ್ಲಿ ಇತ್ತು
ಜೀವ ಸಾವ ಬೆನ್ನನಟ್ಟಿ ತಾನೆ ಬಂದಿತು
ಸಾವು ಅವರ ಬೆನ್ನ ತಟ್ಟಿ ಹಿಂದೆ ನಿಂದಿತು.
ಮುಳುಗಿತೆಂದು ನೊಗವದು
ಮುಗಿಯಿತೆಂದು ಯುಗವದು
ಕತ್ತಲಿಂದ ತಾನೆ ಬಿತ್ತು ಬಗಿದ ಜಗದ ನೊಗವದು.

—ಬೇಂದ್ರೆ

**ಸವಿ :—**

(೧) **ವಿಷಯ :**—ಈ ಕವಿಯ ವಿಷಯವು ಒಂದು '**ಹೂ.**' ಅದು ಒಂದು ಕಾಡಿನಲ್ಲಿ ಅರಳಿದೆ. 'ಸುತ್ತು ಮುತ್ತು ಗಾಳಿ—ನೀರು.' ಹೂಬಿಸಿಲಿನಲ್ಲಿಯೂ ಅದು ಬೆಂದು ಬೆಂಡಾಗಿದೆ, ಅದರ ದಳಗಳೇ ಅದಕ್ಕೆ ಭಾರವಾಗಿವೆ. ನೀರ ಹನಿಯ ಹಾರವನ್ನೂ ಕೂಡ ಧರಿಸಲು ಅದಕ್ಕೆ ಶಕ್ತಿ ಸಾಲದು. ಕೆಳಗೆ ಬಾಗಿ ಒಂದರಗಳಿಗೆಯ ಅದು ಅಲ್ಲಿ ನಿಂತಿತು. ಅನಿತರಲ್ಲಿ 'ರಸವು ಆರೆ, ಗಾಳಿ ಹಾರೆ, ತೊಟ್ಟು ಜಾರೆ' ಅದು ಕೆಳಗಿನ ನೀರಿನಲ್ಲಿ 'ಮುಳು—ಮುಳು—ಮುಳುಂಗಿತು.'

(೨) **ಧ್ವನಿ :—** ಇದಾಯಿತು ಕವಿತೆಯ ಸ್ವಾಭಾವಿಕ ಅರ್ಥ. ಆದರೆ ಕವಿಯು ಬರೀ ಇಷ್ಟೇ ಸಂಗತಿಗಳನ್ನು ಸುರಲು ಈ ಕವನವನ್ನು ಬರೆದಿಲ್ಲ. ಈ ಬೆಂದ ಹೂವನ್ನು ಕಂಡ ಕೂಡಲೇ ನಮ್ಮ ಸಮಾಜದಲ್ಲಿಯ ಇಂಥ ನಿರ್ಗತಿಕ ವ್ಯಕ್ತಿಗಳ ಚಿತ್ರವು ಕವಿಯ ಕಂಗಳೆದುರು ನಿಂತು, ಅವನ ಕರುಳನ್ನು ಕರಗಿಸಿತು. ಅವರ ಗೋಳನ್ನು ಈ ಹೂವಿನ ಮುಖಾಂತರ ಚಿತ್ರಿಸಲು ಅವನು ಮುಂದುವರಿದನು. ಆದುದರಿಂದ ಈ ಕವಿತೆಯ ಪ್ರತಿಸಾಲಿನಲ್ಲಿಯೂ ಇದರ ಧ್ವನಿಯು ಓದುಗರನ್ನು ಎದುರಿಸುವುದು. ಆದುದರಿಂದಲೇ ಇಲ್ಲಿಯ ಹೂವು 'ಕತ್ತನೆತ್ತಿ ನೋಡುವದಿಲ್ಲ—ಮೊಗವನ್ನು ಬಾಗಿಸುವದು—ತನಗೆ ತಾನೇ ನಗುವದು ! ಅದರ ಆಶೆ ಇಂಗಿ ಆರುವದು.' ಕೊನೆಗೆ ಅದರ 'ಕತ್ತಲಿಂದ

ಜಗದ ಸೊಗವು ಜಗಿಯುವದು.' ಇವೆಲ್ಲ ಮಾತುಗಳು ಒರ್ವ ಮಾನವ ಪ್ರಾಣಿಯ ಚಿತ್ರವನ್ನು ಸೂಚಿಸುವದಿಲ್ಲವೇ? 'ದುಗುಡವಿರಲು ಆಳಲೇಬೇಕೆ?' ಎಂದು ಕೇಳುವಾಗಲೂ ಕವಿಯು ಇದೇ ಮಾತನ್ನು ಸಮರ್ಥಿಸುವದಿಲ್ಲವೆ? ನಮ್ಮ ಸಮಾಜದಲ್ಲಿ ಈ ಬಗೆಯಾಗಿ ಗೋಳಾಡಿ ಅನನ್ಯಗತಿಕರಾಗಿ, 'ಇದ್ದಕಿದ್ದಂತೆ ಸಮಾಧಿಯನ್ನು' ಮಹಿಸಿ-ಮೃತ್ಯುವನ್ನಪ್ಪಿ, ಇಲ್ಲಿಯ ಬಾಳಿನ ಹೊಣೆಯಿಂದ ಪಾರಾದವರು ಅದೆಷ್ಟೋ ಜನರಿಲ್ಲವೇ? ಅವರ ವಿಷಮ-ವಿಷಮಯ ಪರಿಸ್ಥಿತಿಯು ನಮ್ಮಂಥ ಸಾಮಾನ್ಯರನ್ನೂ ಮರುಗಿಸುವದು; ಕವಿಯ ಕೋಮಲ ಹೃದಯವನ್ನು ಕರಗಿಸುವದರಲ್ಲಿ ಏನಾಶ್ಚರ್ಯ? ಈ ಬಗೆಯಾಗಿ ಕರಗಿದ 'ಎದೆಯ ಎಸರು' ಇಲ್ಲಿ ಉಕ್ಕಿದೆ.

**(೩) ಚಿತ್ರಚಮತ್ಕೃತಿ :—** ಇಲ್ಲಿ ಮೂರು ಚಿತ್ರಗಳನ್ನು ಬರೆಯಲಾಗಿದೆ.

**ಹೂವು**

೧. ಬಿಂದು ಬಾಗಿದ ಚಿತ್ರ.

೨. ಬತ್ತಿ ಬಾಡಿದ ಚಿತ್ರ.

೩. ಜಾರಿ ಮುಳುಗಿದ ಚಿತ್ರ.

ಈ ಮೂರೂ ಚಿತ್ರಗಳಲ್ಲಿ ಕವಿಯ ಚಿತ್ರಕ ಶಕ್ತಿಯು ಚೆನ್ನಾಗಿ ವ್ಯಕ್ತವಾಗಿದೆ. ಪ್ರತಿಯೊಂದು ಚಿತ್ರದಲ್ಲಿಯೂ ಸೂಕ್ಷ್ಮ ಅವಸ್ಥಾಂತರದ ವರ್ಣನೆಯು ಅವರ್ಣನೀಯವಾಗಿದೆ. ಮೊದಲಿನ ಚಿತ್ರವನ್ನು ನೋಡಿ! ತನ್ನ ವಳದ ಭಾರದಿಂದ ಹೂವಿಗೆ ಕತ್ತನೆತ್ತುವದಕ್ಕಾಗಲಿಲ್ಲ. ಹೂಬಿಸಿಲು ಕೂಡ ಅದನ್ನು ಹಣ್ಣು ಮಾಡಿತು. ಅದು ಕೆಳಗೆ ಬೀಳುವಂತೆ ಬಾಯಿ ಬಿಟ್ಟಿತು.... ಮಣ್ಣಿನಲ್ಲಿ ಕಣ್ಣು ನೆಟ್ಟಿತು. ಕೊನೆಗೆ ನೀರ ಮಣಿಯು ಅದರ ಮೊಗವನ್ನು ಬಾಗಿಸಿತು.

ಎರಡನೆಯದರಲ್ಲಿ ಅದು ಬಾಡಿದ ರೀತಿ.... ರಸವು ಆರಿದ ರೀತಿ. ವಿಶೇಷವಾಗಿ ಅದರಿಂದ ಉಂಟಾಗುವ ಧ್ವನಿಯು ಸರಿಯಾಗಿ ಚಿತ್ರಿಸಲಾಗಿದೆ. ಅದರಲ್ಲಿಯ ದುಗುಡವು ಯಾರಿಗೂ ತಿಳಿಯದಂತೆ ಇದ್ದಲ್ಲಿಯೆ ಇಂಗಿತು—ಬತ್ತಿಯು ಬತ್ತಿ ದೀಪವು ಆರುವಂತೆ ಇದರಲ್ಲಿಯ ರಸವು ಅಳಿಯಿತು. ಅದು ಉಕ್ಕಿ—ವ್ಯಕ್ತವಾಗಿ ಇಲ್ಲವಂತಾಗಲಿಲ್ಲ. ಉಕ್ಕಲಿಕ್ಕೆ ಸಮಯ ದೊರಕಲಿಲ್ಲ. ಈ ಮೇರೆಗೆ ಧ್ವನಿಯನ್ನು ಉಸುರುವಲ್ಲಿ ಎಷ್ಟು ಸೂಕ್ಷ್ಮತೆ?

ಮೂರನೆಯ ಮರಣದ ಚಿತ್ರವಂತೂ ಅತ್ಯದ್ಭುತವಾದುದು. 'ಗಾಳಿ ನೀರು-ಕಾಡು' ಇವುಗಳ ಮಧ್ಯದಲ್ಲಿ ನಡುವಿನಲ್ಲಿ ಒಂದು ಕಲ್ಲನ್ನು ಕಟ್ಟಿಕೊಂಡು ಇದು ಒಮ್ಮೆಲೆ ಕಳಚಿ ಬಿದ್ದು ಮುಳುಗಿತು. ಇದರ ಜೀವವು ಸಾವನ್ನು ಬೆನ್ನಟ್ಟಿತು. ಮತ್ತು ಸಾವು ಕೂಡ ಅದರ ಬೆಂಬಲಿಗನಾಗಿ ಅಲ್ಲಿಯೆ ನಿಂತಿತಂತೆ. ಹೌದು! ಜಗದ ನೊಗದ ನೋವನ್ನು ಜಿಗಿಸುವ ಸಾವು ಬೆಂಬಲಿಗನಲ್ಲದೆ ಮತ್ತೇನು? ಎಷ್ಟು ಅರ್ಥಪೂರ್ಣ ಶಬ್ದಗಳು! ಎಂಥ ಎದೆಯನ್ನು ಸೀಳುವ ಕರುಣ ಚಿತ್ರವಿದು!

೫ **ನಾದ-ಮಾಧುರ್ಯ :—** ಶಬ್ದಗಳ ಅರ್ಥಪೂರ್ಣತೆಯಿಂದ ಸ್ಪಷ್ಟವಾದ ಚಿತ್ರಗಳನ್ನು ಬರೆದು ಕವಿಯು ತನ್ನ ಭಾವವನ್ನು ತೋಡಿಕೊಳ್ಳುವಂತೆ, ಭಾವಕ್ಕೆ ತಕ್ಕ ಶಬ್ದಸಮೂಹಗಳನ್ನು ಉಪಯೋಗಿಸಿ ಅದೇ ಕಾರ್ಯವನ್ನು ಹೆಚ್ಚು ಪರಿಣಾಮಕಾರಿಯಾಗುವಂತೆ ಯತ್ನಿಸಿರುವನು.

ಇಲ್ಲಿ ಮೂರು ಮಾತ್ರೆಯ ನಾಲ್ಕು ಗಣಗಳಿಂದ ಕೂಡಿದ ಚಿಕ್ಕ ಚಿಕ್ಕ ಸಾಲುಗಳಿಂದಲೂ ಕರುಣರಸವನ್ನು ಚಿತ್ರಿಸಿದುದು ವಿಶೇಷ ಕೌಶಲ್ಯದ ಕುರುಹು ಸಾಮಾನ್ಯವಾಗಿ ಇಂಥ ಗಂಭೀರ ಭಾವಗಳನ್ನು ಸುರಲು ಐದೈದು ಮಾತ್ರೆಗಳ ಗಣಗಳನ್ನು ಪಯೋಗಿಸುವುದು ವಾಡಿಕೆ. ಅಲ್ಲಲ್ಲಿ ಅನುಪ್ರಾಸವು ತನ್ನ ಕೆಲಸವನ್ನು ಅತ್ಯುತ್ತಮವಾಗಿ ನೆರವೇರಿಸಿದೆ.

ರಸವು ಆರೆ, ಗಾಳಿ ಹಾರೆ, ತೊಟ್ಟು ಜಾರೆ
ಮುಳು—ಮುಳು—ಮುಳುಂಗಿತು.

ಇಲ್ಲಿಯ ಅನುಪ್ರಾಸದ ಹಾಗೂ ಪುನರುಕ್ತಿಯ ಚಾತುರ್ಯವು ಅವರ್ಣನೀಯವು. ಅದು ಕೊನೆಗೆ—

ಮುಳುಗಿತೆಂದು ಮೊಗವದು
ಮುಗಿಯಿತೆಂದು ಯುಗವದು.

ಎಂಬಲ್ಲಿಯೂ ಕಂಡುಬರುತ್ತದೆ.

ಈ ಬಗೆಯಾಗಿ ಆಯಾಸದ ವಾತಾವರಣವು ಸಹಜವಾಗಿ—ಅನಾಯಾಸವಾಗಿ ಕವಿತೆಯುದ್ದಕ್ಕೂ ಪಸರಿಸಿರುವದು.

ಅಭ್ಯಾಸ ೧೮

ಮುಂದಿನ ಕವನಗಳನ್ನು ಚೆನ್ನಾಗಿ ಓದಿ ಅವುಗಳ ಕೊನೆಗೆ ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆಯಿರಿ!

(೧)

## ಉದಯರಾಗ

ಮೂಡುವನು ರವಿ ಮೂಡುವನು
ಕತ್ತಲೊಡನೆ ಜಗಳಾಡುವನು.
ಮೂಡಣ ರಂಗಸ್ಥಲದಲಿ ನೆತ್ತರು
ಮಾಡುವನು ಕುಣಿದಾಡುವನು. ೧

ಬೆಳಕಿನ ಕಣ್ಣುಗಳಿಂದಾ ಸೂರ್ಯನು
ನೋಡುವನು ಬಿಸಿಲೂಡುವನು.
ಚಿಳಿಪಿಳಿ ಹಾಡನು ಹಾಡಿಸಿ ಪಕ್ಷಿಯ
ಗೂಡಿನ ಹೊರಹೊರದೂಡುವನು. ೨

ಬಂಗಾರದ ಚೆಲು ಬಿಸಿಲ ಕಿರೀಟದ
ಶೃಂಗಾರದ ತಲೆ ಎತ್ತುವನು
ತೆಂಗಿನ ಕಂಗಿನ ತಾಳೆಯ ಬಾಳೆಯ
ಅಂಗಕೆ ರಂಗನು ಮೆತ್ತುವನು. ೩

ಮಾಡಿನ ಹುಲ್ಲಲಿ ಚಿನ್ನದ ಗೆರೆಯನು
ಎಳೆಯುವನು ರವಿ ಎಳೆಯುವನು.
ಕೂಡಲೆ ಕೋಣೆಯ ಕತ್ತಲೆ ಕೊಳೆಯನು
ತೊಳೆಯುವನು ರವಿ ತೊಳೆಯುವನು. ೪

ಮಲಗಿದ ಕೂಸಿನ ನಿದ್ದೆಯ ಕಸವನು
ಗುಡಿಸುವನು ಕಣ್ ಬಿಡಿಸುವನು.
ಮುಲುಗಿದ ಹೂವಿಗೆ ಪರಿ ಪರಿ ಬಣ್ಣವ
ಉಡಿಸುವನು ಹನಿ ತೊಡಿಸುವನು. ೫

ಏರುವನು ರವಿ ಏರುವನು!
ಬಾನೊಳು ನಣ್ಣಗೆ ತೋರುವನು.
'ಏರಿದವನು ಚಿಕ್ಕವನಿರಬೇಕೆಲೆ',
ಎಂಬಾ ಮಾತನು ಸಾರುವನು. ೬

—ಕವಿಶಿಷ್ಯ

೧ ಸೂರ್ಯನು ಯಾರ ಸಂಗಡ ಜಗಳಾಡುವನು? ಅವರ ಪರಿಣಾಮ ವೇನಾಗುವುದು?
೨ ಅವನು ಮತ್ತೆ ಏನೇನನ್ನು ಮಾಡುವನು?
೩ ಅವನ ಕಂಗಳಾವವು? ಕಿರೀಟವೆಂತಹದು?
೪ ಅವನು ಮಕ್ಕಳಿಗೆ ಯಾವ ಪಾಠವನ್ನು ಕಲಿಸುವನು?

(೨)

## ತಡಸಲು

ತಡಸಲು ತಡಸಲು ಅಗೊ ಅಲ್ಲಿ
ಪಡಪಡ ಎನುವುದು ಎದೆ ಇಲ್ಲಿ
ದಿಡುಗದೊ ಗುಡುಗುಡು ಗುಡುಗುತಿದೆ
ಗಿಡ ಮರ ಜನಮನ ನಡುಗುತಿವೆ.
ಗುಡುಗೇ ನೀರಾಗಿಹುದಿಲ್ಲಿ
ಮೋಡ ಹುಟ್ಟುತಿವೆ ಮಳೆಯಲ್ಲಿ.
ತುಂತುರ ಮಳೆ ಹೊಳೆಯುಂಚಿಗಿದೆ.
ನೀರೇ ಮಿರಿ ಮಿರಿ ಮಿಂಚುತಿದೆ.
ಮುತ್ತಿನ ಸರಗಳು ಹರಿಯುತಿವೆ.
ಗಾಜುಗಂಬಗಳು ಸುರಿಯುತಿವೆ.
ಕಾಮನ ಬಿಲ್ ಮಣಿದಾಡುತಿವೆ.
ನೀರಿನ ಹೂ ಕುಣಿದಾಡುತಿವೆ.
ನೆಲ ಮುಗಿಲುಗಳ ನಡುವಿನ ಬೆಡಗು,
ರಮ್ಯ ಭಯಂಕರವೀ ದಿಡುಗು.
ಅದ್ಭುತ ಕರೆವುದು ' ಬಾ ಇಲ್ಲಿ. '
ಭಯ ಗದರಿಸುತಿದೆ, 'ನಿಲ್ಲಿಲ್ಲಿ '
ಮನ ದುಮುಕುತ್ತಿದೆ ಹೊಳೆಯಂತೆ.
ಸ್ತಂಭಿತ ಮೈ ತಡಸಲಿನಂತೆ.
ನಿಂತಲ್ಲಿಯೆ ಕಾಲಂಟಿತ್ತು
ಊಹೆ ದಿಗಂತಕೆ ಹೊರಟಿತ್ತು.

-ದ. ರಾ. ಬೇಂದ್ರೆ

೧ ತಡಸಲು ಕವಿಗೆ ಹೇಗೆ ಕಾಣಿಸಿತು ?

೨ ಅವನ ಮೈ ಮನಸ್ಸಿನ ಮೇಲೆ ಅದರ ನೋಟದಿಂದ ಯಾವ ಪರಿಣಾಮವು ಉಂಟಾಯಿತು ?

೩ ' ಗುಡುಗೇ ನೀರಾಗಿಹುದು'— 'ಮಳೆಯಲ್ಲಿ ಮೋಡ ಹುಟ್ಟುತಿವೆ ' ಈ ಮಾತುಗಳ ಸ್ವಾರಸ್ಯವೇನು ?

೪ 'ದಿಡುಗದು ಗುಡುಗುಡು ಗುಡುಗುತಿದೆ. ನೀರೇ ಮಿರಿ ಮಿರಿ ಮಿಂಚುತಿದೆ' ಈ ಸಾಲುಗಳ ಧ್ವನಿಯಲ್ಲಿ ಸೊಬಗೆಲ್ಲಿದೆ ?

೫ ' ಊಹೆ ದಿಗಂತಕೆ ಹೊರಟಿತ್ತು ' ಎಂದರೇನು ?

(೩)

ಝರಿ !

ಪರ್ವತಾಗ್ರದಿ ಚಿಮ್ಮಿ ತಗ್ಗಿನಾಳವ ನೆಮ್ಮಿ
ಹರಿವ ಝರಿಗೇನಿನಿತು ಬರಿಯ ಹೆಮ್ಮೆ ?
ಮಲೆಯ ತುದಿಯಲಿ ನೆಗೆದು ನೆಲವ ಸಿಗಿಯುತ ಚಿಗಿದು
ಬಂಡಿಗಳ ಬದಿಗೊಗೆದು ಗಿರಿಯೆದೆಯ ಕಿತ್ತೆಸೆದು
ನೊರೆದೆರೆಯ ಪಲ್ಮೊರೆದು ಮುಮ್ಮುಕುತಿಹುದೇಕೆ ?
ಮರಗಿಡಗಳುರುಳಿಸುತ, ಪಾತ್ರಗಳನರಳಿಸುತ,
ಘೋರೆಂದು ಚೀರಿಡುತ ವಿಲಯವನೆ ತೋರಿಸುತ
ರೋಷದಲಿ ರಭಸದಲಿ, ಹೊರಳುತಿರುವೇಕೆ ?
ಕ್ರಮವಾಗಿ ನಯವಾಗಿ ನಲಿಯುತ್ತ ಬಳುಕುತ್ತ,
ಅಂತಿಮದಿ ಭೂಮಿ ಹಿಂಗಿದರಾಯ್ತು; ಅಲ್ಲದಿರೆ
ಕಡಲ ನೀರೊಳು ಬೆರೆದು ಮರೆಯಾದರಾಯ್ತು.
ಈ ಪರಿಯ ಬದುಕಿನಲಿ ಹೆಮ್ಮೆಯೇಕೆಲೆ ಝರಿಯೆ ?
ಅವ್ಯಕ್ತವಾವುದನು ಸಡೆಬಡಿಯಲಾಶಿಸುವೆ ?
ಮಾರ್ಗವಾವುದನೊರೆದು ಸರಿಯುತಿಹೆ ನೀನು ?

ಜಿ. ಪಿ. ರಾ.

೧ ಝರಿಯು ಹೇಗೆ ಪ್ರವಹಿಸುವುದು ?
೨ ಅದು ಯಾವ ಬಗೆಯ ಶಬ್ದವನ್ನು ಮಾಡುತ್ತ ಹೊರಳುವುದು ?
೩ ಕವಿಗೆ ಅದರ ನಡತೆಯು ಹೇಗೆ ಕಾಣುವುದು ?

(೪)

ಮೂಹೂ !

ಮಲ್ಲಿಕಾ ಬಕುಲ ಚಂಪಕಾ
ಸಾಕು ನನಗೆ ಈ ಸುಕಾ !
ಇಲ್ಲಿ ನಾ ಸಕಲ ಶಾಂತಿಯಾ
ಉಂಡೆ ಕೈವಲ್ಯ ಕಾಂತಿಯ
ಎಲ್ಲ ಈ ಜಗ 'ಳಿಯಿಸಿ
ಹೂವ ಸೌರಭ್ಯ ಸುಳಿಯಿಸಿ
ದೇವ ಆ ಮರೆಯೆ ಆದರೂ
ಅವನ ಕಾರುಣ್ಯ ಹೋದರೂ
ಮಲ್ಲಿಕಾ ಲತೆಯ ಮನೆಯಲಿ
ಮೊಗ್ಗೆ ಹೂವುಗಳ ನೆರಳಲಿ

ಚಂಪಕಾವನಿಯ ಹಸಿರೊಳು
ಬಕುಲ ಸೂಸಿನಿಯ ಕೆಲದೊಳು
ಸಿಕ್ಕಿನಾ ನಲಿವನುಣ್ಣುವೆ
ಸಿಡಿಲನೂ ಸವಿಯ ಮಾಡುವೆ.

ಅಲ್ಲವೋ ಬರಿಯ ವಾಸನೆ
ಸೊಬಗಿನ ಕಣ್ಣು ಪಾರಣೆ
ಜೀವ ಹೂವೆನುವ ಗೆಳೆಯರು
ಸಾವು ಮೈ ಯಾಕಿಡ ಎಳೆಯರು.
ಗಾಳಿ ಮಂಚದಲಿ ಬೆರೆಯುತ
ತಾವು ನಾವೆಂದು ಮರೆಯುತ
ಹಿಗ್ಗಿನಾ ತುದಿಯನೇರುತ
ಸೇವ್ಯನಾ ಪದವ ಸೇರುತ
ಸಖ್ಯದಾ ಕಂಪು ತರುತಿಹಾ
ನಿತ್ಯ ಯಾತ್ರಿಕರ ಗಮ ಗಮಾ !

—ರಂ. ಶ್ರೀ. ಮು.

೧ ಕವಿಯು ಯಾವ ನಲಿವನ್ನು ಉಣ್ಣಲು ಬಯಸುವ ?
೨ ಅದು ಅವನಿಗೆ ಏತಕ್ಕಿಂತ ಮಿಗಿಲಾದುದು ಎಂದೆನಿಸುವುದು ?
೩ ಕವಿಯ 'ಗೆಳೆಯರು' ಆರು ? ಎಂಥವರು ? ಅವರೇನು ಮಾಡುವರು ?
೪ 'ನಿತ್ಯ ಯಾತ್ರಿಕರಾರು?' ಅವರೇನನ್ನು ತರಲಿರುವರು? ಅವರಿಗೆ'ಯಾತ್ರಿಕ' ರೆಂದು ಕರೆದುದೇತಕ್ಕೆ ?
೫ 'ಸಿಡಿಲನು ಸವಿಯ ಮಾಡುವೆ.' 'ಸೊಬಗಿನಾ ಕಣ್ಣು ಪಾರಣೆ' ಇವುಗಳ ಸ್ವಾರಸ್ಯವೆಲ್ಲಿದೆ ? ಅರ್ಥವೇನು ?

೫

## ದೀನಗಿಂತ ದೇವ ಬಡವ !

ಹರಿಗೆ ಎಂದು ಗುಡಿಯನೊಂದು
ಕಟ್ಟುತಿರುವೆಯಾ ?
ಹರಿಯ ಒಲುಮೆ ಪಡೆದು ಪುಣ್ಯ
ಗಳಿಸುತಿರುವೆಯಾ ?
ಮರಳಿ ನೀನು ಹಳ್ಳಿಗೋಡು
ದೀನ ಜನರ ಪಾಡ ನೋಡು
ಇರಲು ಗುಡಿಲು ಇಲ್ಲವಲ್ಲ !
ಹೊಟ್ಟೆ ತುಂಬ ಅನ್ನವಿಲ್ಲ.

ಹರಿಗೆ ಎಂದು ಗುಡಿಯನೊಂದು
ಕಟ್ಟುತಿರುವೆಯಾ ?
ಹರಿಯು ವಿಶ್ವರೂಪವನ್ನು
ಮರೆತುಬಿಟ್ಟೆಯಾ ?
ಜಗಕೆ ಗೋಡೆ ಹಾಕಿ ಗುಡಿಯ
ಕಟ್ಟಬಲ್ಲೆಯಾ ?
ದೀನಗೊಂದು ಗೂಡು ಸಾಕು
ದೇವಗೊಂದು ವಿಶ್ವ ಬೇಕು.
ಮಣ್ಣು, ಹುಲ್ಲು, ಸಣ್ಣ ಓಡು
ಬಡವಗದುವೆ ಚಿಕ್ಕ ಗೂಡು.
ಹರಿಗೆ ಎಂದು ಗುಡಿಯನೊಂದು
ಕಟ್ಟುತಿರುವೆಯಾ ?
ದೀನಗಿಂತ ದೇವ ಬಡವ–
ನೆಂದು ಬಗೆದೆಯಾ ?

—ದಿನಕರ ದೇಸಾಯಿ

೧ ಕವಿತೆಯು ಯಾರನ್ನುದ್ದೇಶಿಸಿ ಬರೆಯಲ್ಪಟ್ಟಿದೆ ?
೨ ಇದರಲ್ಲಿ ಕವಿಯು ಬೀರಿದ ಮುಖ್ಯ ಸಂದೇಶವಾವುದು ?
೩ ಇದರ ತಲೆಬರಹವು ಸರಿಯಾಗಿದೆಯೋ ? ಇನ್ನಾವುದನ್ನಾದರೂ ಸೂಚಿಸಬಹುದೇ ?
೪ ಗುಡಿಯು ಎಂತಹದಿರಬೇಕು ?

## (೬)
## ಮೊರೆ !

ಅನುಗೋಲೆ ಇಲ್ಲದಾ
ಹೆಳವ ಸಾಗಿದಂತೆಯೆ
ಶರಧಿಯಲ್ಲಿ ಬಿಸುಟಿದಾ
ಬಳ್ಳಿ ತೇಲುವಂತೆಯೆ
ಭಾನುಗೋಲವಿಲ್ಲದಾ
ಜಗವು ಬದುಕುವಂತೆಯೆ
ಸಾಗುತಿಹುದು, ತೇಲುತಿಹುದು, ಬದುಕುತಿಹುದು ಜೀವನ.
ಎಂದು ಬರುವಿ ? ಎಂದಿಗಹುದು ನನ್ನ ಬಾಳು ಪಾವನ ?

—ವಿನಾಯಕ

೧ ಕವಿಯ ಜೀವನವು ಹೇಗೆ ಸಾಗಿದೆ?

೨ ಹೇಗೆ ಸಾಗಬೇಕೆಂದು ಅವನು ಆಶಿಸುವ?

೩ ಅವನು ಯಾರನ್ನು ಕರೆಯುವ? ಏಕೆ?

(೭)

## ಕರುಣಾಳು! ಬಾ! ಬೆಳಕೆ!

(೧)

ಕರುಣಾಳು! ಬಾ ಬೆಳಕೆ! ಮುಸುಕಿದೀ ಮಬ್ಬಿನಲಿ ಕೈ ಹಿಡಿದು ನಡೆಸೆನ್ನನು.
ಇರುಳು ಕತ್ತಲೆಯ ಗವಿ; ಮನೆ ದೂರ; ಕನಿಕರಿಸಿ ಕೈಹಿಡಿದು ನಡೆಸೆನ್ನನು.
ಹೇಳಿ ನನ್ನಡಿಯಿಡಿಸು; ಬಲುದೂರ ನೋಟವನು
ಕೇಳೆನೊಡನೆಯೆ—ಸಾಕು ನನಗೊಂದು ಹೆಜ್ಜೆ

(೨)

ಮುನ್ನ ಇಂತಿರದಾದೆ; ನಿನ್ನ ಬೇಡದೆ ಹೋದೆ; ಕೈ ಹಿಡಿದು ನಡೆಸು ಎನುತ.
ನನ್ನ ದಾರಿಯ ನಾನೆ ನೋಡಿ ಹಿಡಿದೆನು;—ಇನ್ನು ಕೈ ಹಿಡಿದು ನಡೆಸು ನೀನು
ಮಿರುಗು ಬಣ್ಣಕೆ ಬೆರೆತು, ಭಯ ಮರೆತು, ಕೊಬ್ಬಿದೆನು
ಮರೆದಾಯ್ತು; ನೆನೆಯದಿರು ಹಿಂದಿನದನೆಲ್ಲ.

(೩)

ಇಷ್ಟು ದಿನ ಸಲಹಿರುವೆ ಮೂರ್ಖನನು; ಮುಂದೆಯೂ ಕೈ ಹಿಡಿದು ನಡೆಸದಿಹೆಯಾ?
ಕಷ್ಟದಡವಿಯ ಕಳೆದು, ಬೆಟ್ಟ ಹೊಳೆಗಳ ದಾಟಿ, ಇರುಳನ್ನು ನೂಕದಿಹೆಯಾ?
ಬೆಳಗಾಗ ಹೊಳೆಯದೇ, ಹಿಂದೊಮ್ಮೆ ನಾನೊಲಿದು
ಈ ನಡುವೆ ಕಳೆಕೊಂಡ ದಿವ್ಯಮುಖ ನಗುತೆ? —ಶ್ರೀ.

೧ ಕವಿಯು ಯಾವ ಪರಿಸ್ಥಿತಿಯಲ್ಲಿರುವ?

೨ ಅವನು ಯಾರನ್ನು ಬೇಡಿಕೊಳ್ಳುವ? ಏನನ್ನು ಬೇಡಿಕೊಳ್ಳುವ?

೩ ಬೆಳಕು-ಇರುಳು-ಅಡವಿ-ಬೆಟ್ಟ ಇವುಗಳಿಂದ ಸೂಚಿತವಾದ ಸಂಗತಿಗಳಾವು?

# ಐದನೆಯ ಭಾಗ—ಅನುಬಂಧಗಳು.

## ೧. ಪೀಠಿಕೆ.

೧. **ಉದ್ದೇಶ:**—ಈವರೆಗೆ ನಾವು ಪ್ರಬಂಧ-ಬರಹದ ಪರಿಚಯವನ್ನು ಮಾಡಿಕೊಡಲು ಯಥಾಮತಿ ಯತ್ನಿಸಿರುವೆವು. ಪ್ರಬಂಧದ ವಿವಿಧಾಂಗಗಳಲ್ಲಿ ಪ್ರಾವೀಣ್ಯವು ಬರಬೇಕಾದರೆ ಕನ್ನಡ ನುಡಿಯ ಅಭ್ಯಾಸವು ಕೂಲಂಕಷವಾಗಿ ಆಗಬೇಕು. ಕನ್ನಡದ ವೈಭವದ ಪರಿಚಯವು ಚನ್ನಾಗಿ

ಆಗಬೇಕು. ಕನ್ನಡ ಸಾಹಿತ್ಯದ ಹಿರಿಕಡಲನ್ನು ಕಡೆದು ಕೆಲವು ಮಹನೀಯರು ಇದೀಗ ಅದರಲ್ಲಿಯ ಹೊಳಪುಳ್ಳ ಮಣಿಗಳನ್ನು ಹೊರತೆಗೆದಿರುವರು. ಕೊನೆಗೆ ಅವನ್ನಾದರೂ ಕಂಡುಕೊಳ್ಳುವದು ಅತ್ಯಗತ್ಯ. ಅವನ್ನುಪಯೋಗಿಸಿ ತಮ್ಮ ಬರಹಕ್ಕೆ ಕಳೆಯನ್ನು ಕಟ್ಟಬೇಕು.

'ಅಡಿಗೆಯ ಮನೆಯ ಮತ್ತು ಓಣಿಯ ಮಾತಿನಲ್ಲಿಯೇ ಎಲ್ಲ ವಾಙ್ಮಯವು ಅಡಕವಾಗಬೇಕೆಂದು, ಕೆಲವು ಮೈಗಳ ಕನ್ನಡಿಗರು ಹೊಸ ಕನ್ನಡದ ಹೊಳೆಗೆ ತಮ್ಮ ಬಾಯಿಂದ ಒಡ್ಡನ್ನು ಹಾಕಲು ಬಯಸುವರು. ಆದರೆ ಹೊಳೆಯು ಹೊಂಡವಾಗದೆ ತನ್ನ ಸೆಳವಿನಲ್ಲಿ ಈ ಮೈಗಳವರನ್ನು ಸೆಳೆದುಕೊಂಡು ಹೋಗಿ ಅವರಿಗೆ ಮೈಮರವುಂಟಾಗುವಂತೆ ಮಾಡಲಿಕ್ಕೆಬೇಕು. ನಮ್ಮ ನುಡಿಯು ಒಡವೆ ಒಡೆಯುವ, ಜೀವದ ನೆರಳನ್ನು ತೋರಿಸುವ ಸೀರಾಗಬೇಕು. ನಮ್ಮ ನುಡಿಯು ಜೀವಜೀವದ ಜೀವಾಳವನ್ನು ತೋರಿಸುವ ಕನ್ನಡಿಯ ಹರಳಾಗಬೇಕು. ಕನ್ನಡವನ್ನು ಕನ್ನಡಿಯಾಗಿ ಮಾಡಬೇಕು....ಚಿತ್ತದ ಚಿತ್ರಗಳನ್ನೂ, ಅಹಂಕಾರದ ಉದ್ಗಾರಗಳನ್ನೂ, ಬುದ್ಧಿಯ ಭೇದಗಳನ್ನೂ, ಅಂತಃಕರಣದ ಕಿರಣಗಳನ್ನೂ, ಮನಸ್ಸಿನ ಹೊಯ್ದಾಟಗಳನ್ನೂ ಪ್ರತಿಬಿಂಬಿಸಲು ನಮ್ಮ ಭಾಷೆಯು ಸಮರ್ಥವಾಗಬೇಕು. ನಮ್ಮ ನುಡಿಯು ಜಗತ್ತಿನ ತಿರುಳನ್ನೂ, ಜಗದೀಶನ ಹುರುಳನ್ನೂ ತೋರಿಸುವ ಕನ್ನಡಿಯಾಗಬೇಕು. ಜಗತ್ತಿನ ಸೊಬಗನ್ನೂ, ಜಗದೀಶನ ಸೊಗಸನ್ನೂ ಸವಿಸವಿದು ನಲಿಯುವ ನಾಲಿಗೆಯಾಗಬೇಕು' ಎಂದು ನಮ್ಮ ನಾಡಿನ ಕವಿವರರೊಬ್ಬರು ಹಲವರುಷಗಳ ಪೂರ್ವದಲ್ಲಿಯೆ ಸಾರಿರುವರು.

ಇದೀಗ ಬೇಕಾದರೆ ಸಾಹಿತ್ಯದ ಆಳವಾದ ಅಭ್ಯಾಸವೇ ಹಿರಿದಾದ ಸಾಧನವೆಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಆದರೂ ಹೊಸಬರಲ್ಲಿ ಅಭಿರುಚಿ ಹುಟ್ಟಬೇಕೆಂದು ಮುಂದಿನ ಅನುಬಂಧಗಳನ್ನು ಕೊಟ್ಟಿರುವೆವು. ಈ ಮೊದಲು ಬಂದ ಉಜ್ವಲ ಅವತರಣಗಳು ಕನ್ನಡದ ಸೊಬಗನ್ನು ಕೆಲಮಟ್ಟಿಗೆ ತೋರಿಸಿ ವಿದ್ಯಾರ್ಥಿಗಳಲ್ಲಿ ಅಭಿರುಚಿಯನ್ನು ಹುಟ್ಟಿಸಿರಲಿಕ್ಕೆಸಾಕು. ಮುಂದಿನ ಅನುಬಂಧಗಳನ್ನು ಸರಿಯಾಗಿ ಉಪಯೋಗಿಸಿದರೆ ರಸದ ಜೊತೆಯಲ್ಲಿ ಬರಹದ ಕಸುವೂ ಬರದೆ ಇರದೆಂಬ ನಂಬಿಗೆಯಿದೆ.

**೨. ವಿವರ:**—ಮುಂದೆ ಕಾಣಿಸಿದ **ಅನುಬಂಧಗಳು** ನಾಲ್ಕು. ಅವುಗಳ ಹೆಸರುಗಳನ್ನು ಈ ಮೊದಲೆ ತಿಳಿಸಿರುವೆವು. ಅವನ್ನು ರಚಿಸುವಾಗ

**ಶ್ರೀಮಾನ್ ಶಂ. ಬಾ. ಜೋಶಿಯವರ 'ಕನ್ನಡ ನುಡಿಯ ಹುಟ್ಟು'** ಎಂಬ ಹೊತ್ತಿಗೆಯು ನೆರವು ಬಹಳವಾಗಿದೆ. ಜಿಜ್ಞಾಸುಗಳು ಮೂಲಗ್ರಂಥವನ್ನೇ ಪರಿಶೀಲಿಸಿ ತಮ್ಮ ಜ್ಞಾನದ ಹಸಿವನ್ನು ತಣಿಸಿಕೊಳ್ಳಬೇಕು.

ಇನ್ನು ಪ್ರತಿಯೊಂದು ಅನುಬಂಧದಲ್ಲಿಯ ವಿಷಯವನ್ನು ಕುರಿತು ಸ್ವಲ್ಪ ವಿವರಣವನ್ನು ಮಾಡುವುದು ಅವುಗಳ ತಿಳಿವಳಿಕೆಯ ದೃಷ್ಟಿಯಿಂದ ಅಗತ್ಯ.

(ಅ) **ಮೇಳನುಡಿ**:—ಅರ್ಥದಲ್ಲಿ **ಮೇಳವಿರುವಂತಹವೆ ಮೇಳನುಡಿಗಳು.** ಅವುಗಳಲ್ಲಿ ಅರ್ಥಸಾಮ್ಯವಿರುವದು. ಆದರೂ ರೂಢಿಯ ಮೂಲಕವಾಗಿ ಹಲವು ನುಡಿಗಳಲ್ಲಿ ಕೆಲವೊಂದು ಅರ್ಥಸಾಮ್ಯವು ತೋರಿದರೂ ಒಂದು ನುಡಿಯು ಮತ್ತೊಂದರ ಬದಲು ಎಲ್ಲೆಡೆಯಲ್ಲಿಯೂ ನಡೆಯಲಾರದು. ಸೂಕ್ಷ್ಮವಾದ ಅರ್ಥಭೇದವುಳ್ಳ ಮೇಳದ ನುಡಿಗಳು ವಿಪುಲವಾದ ಭಾಷೆಯೇ ಶ್ರೇಷ್ಠವೆನಿಸುವದು. ಇಂಥ ಕೆಲ **ಮೇಳನುಡಿಗಳನ್ನು** ಮುಂದೆ ಕೊಟ್ಟಿರುವೆವು. ಅವುಗಳಲ್ಲಿಯ ಅರ್ಥಭೇದವು, ಧಾತ್ವರ್ಥದ ಸಹಾಯದಿಂದಲೂ, ರೂಢಿಯಿಂದಲೂ ಇನ್ನೂ ನಿಶ್ಚಿತವಾಗಬೇಕಾಗಿದೆ. ಅಧಿಕಾರವುಳ್ಳ ಪಂಡಿತರು ಅದನ್ನು ಮಾಡುವರೆಂಬ ಆಶೆ.

(ಆ) **ದೇಸಿ-ನುಡಿ**:—**'ದೇಸಿಯು ಭಾಷೆಯ ಜೀವಾಳ.'** ಅದರ ಲಕ್ಷಣವನ್ನು ಹೇಳುವದು ದುಸ್ತರ. ಅದನ್ನು ಪರಭಾಷೆಗೆ ಶಬ್ದಶಃ ಪರಿವರ್ತಿಸಲಿಕ್ಕೆ ಬರುವದಿಲ್ಲ; ಇದೇ **ದೇಸಿನುಡಿಯ** ಹೆಗ್ಗುರುತು. ಒಂದು ಭಾಷೆಯಲ್ಲಿಯ ವೈಚಿತ್ರ್ಯಗಳೆಲ್ಲ ಸೇರಿ, ಸಾಧಾರಣವಾಗಿ ಅದುವೆ **ದೇಸಿಯೆನಿ**ಸುತ್ತದೆ. ಅದರ ಮುಂದೆ ವ್ಯಾಕರಣ-ತರ್ಕಶಾಸ್ತ್ರಗಳ ಆಟವೆ ನಡೆಯುವದಿಲ್ಲ.

**ದೇಸಿಯಲ್ಲಿ** ನುಡಿನುಡಿಗೂ ಹೊಸತನ ತುಂಬಿಕೊಂಡಿರುವದು; **ದೇಸಿಯೆಂದರೆ ಸಜೀವ ಭಾಷೆ; ಸಜೀವರ ಭಾಷೆ.** ದೇಸಿಯ ಒಂದೊಂದು ನುಡಿಯಲ್ಲಿಯೂ ಕಣ್ಣ ಮುಂದೆ ಸುಸ್ಪಷ್ಟವಾದ ಚಿತ್ರಗಳನ್ನು ತಂದು ನಿಲ್ಲಿಸುವ ಸಾಮರ್ಥ್ಯವಿದೆ. ಅದು ಮಾತಿನ ಸವಿಯನ್ನು ಹೆಚ್ಚಿಸುವದು; ಅದರಲ್ಲಿಯ ಆವೇಶವು ಬಿಚ್ಚುಮಾತಿನಲ್ಲಿಲ್ಲ. ಆದುದರಿಂದ ಇದಕ್ಕೆ **'ನಾಡನುಡಿ'** ಎಂದು ಹೇಳುವುದೂ ಉಚಿತವಾಗಿದೆ. ಇಲ್ಲಿ ಕೆಲವು **ಜೋಡುನುಡಿಗಳನ್ನೂ-ಕಿರುನುಡಿಗಳನ್ನೂ** ಕೊಟ್ಟಿರುವೆವು. ಇದರ ಅಂಶಗಳೇ ಆದ **ಪಡೆನುಡಿ-ನಾಣ್ಣುಡಿಗಳನ್ನು** ಮುಂದಿನ ಅನುಬಂಧದಲ್ಲಿ ಸೇರಿಸಿರುವೆವು.

(ಇ) **ಪಡೆನುಡಿ:—** ಕನ್ನಡ ದೇಸಿಯ ಎಲ್ಲ ಪ್ರಕಾರಗಳಲ್ಲಿ **ಪಡೆನುಡಿಯು** ಬಹಳ ಮಹತ್ವಪಡ್ದಾಗಿದೆ. ನಮ್ಮ ನುಡಿಯ ತಿರುಳು ಇದರಲ್ಲಿಯೆ ಅಡಕವಾಗಿದೆ. ಇದನ್ನು ಬಿಟ್ಟರೆ ಕನ್ನಡವನ್ನಾಡುವದೇ ಅಸಾಧ್ಯ. ಈ ಪಡೆನುಡಿಗಳ ಪರಂಪರೆಯು ಇಂದು ನಿನ್ನೆಯದಲ್ಲ. ಸಾವಿರಾರು ವರ್ಷಗಳ ಹಿಂದೆ ಉಪಯೋಗಿಸುತ್ತಲಿದ್ದ ಪಡೆನುಡಿಗಳು, ಈಗಲೂ ದಿನದ ಮಾತಿನಲ್ಲಿ ಕಿವಿಗೆ ಬೀಳುತ್ತಿರುವದನ್ನು ನೋಡಿ ಮನಸ್ಸು ಹಿಗ್ಗುವದು. ಇವುಗಳ ಅಭ್ಯಾಸದಿಂದ ಹೊಸಗನ್ನಡಕ್ಕೊಂದು ಹೊಚ್ಚ ಹೊಸ ಬಣ್ಣವೇರದೆ ಇರಲಾರದು.

(ಈ) **ನಾಣ್ಣುಡಿ :—** ಪ್ರಚಲಿತವಿದ್ದ ಪ್ರಾಸಬದ್ಧ ಸಾಲುಗಳೇ **ನಾಣ್ಣುಡಿಗಳು.** ಅವುಗಳಲ್ಲಿಯ ಕುಸುರಿನ ಜಾಣ್ಮೆಯ ರೀತಿಯೆ ಅವುಗಳ ಲೋಕಪ್ರಿಯತೆಗೆ ಕಾರಣವಾಗಿದೆ. ಅವುಗಳ ಅಭ್ಯಾಸದಿಂದಲೂ ಕನ್ನಡದ ಬೆಳೆವಣಿಗೆಗೆ ತುಂಬಾ ಸಹಾಯವಾಗದಿರದು.

(ಉ) **ಜಾಣ್ಣುಡಿ:— ಜಾಣ್ಣುಡಿಗಳು** ಅಂದಿನ ಇಂದಿನ ಹಿರಿಯರ ಸುಭಾಷಿತಗಳು. ನಮ್ಮ ಕರು—ನಾಡು, ಹಿರಿ—ನಾಡು, ಹಿರಿಯರ—ನಾಡು. ಅವರ ಮುತ್ತಿನಂತಹ ಮಾತುಗಳನ್ನು ಆಯ್ದು ಅವನ್ನು ನಮ್ಮ ಬರಹದಲ್ಲಿ ಆಗಾಗ ಮಿತಿಯನ್ನರಿತು ಬಳಸಿದರೆ, ಅದಕ್ಕೆ ರತ್ನ—ಮಾಲೆಯ ಸೊಬಗು ಬರದಿರದು. ಆದುದರಿಂದ ನಮ್ಮ ಹಳೆಯ ಹೊಸ ಕವಿಪುಂಗವರ ಹಾಗು ಸಾಹಿತ್ಯ ಶಾರ್ದೂಲರ ಹಿರಿ—ನುಡಿಗಳಲ್ಲಿ ಕೆಲವೊಂದನ್ನು ಕೊಡಲು ಉಪಕ್ರಮಿಸಿದ್ದು, ಅವನ್ನು ಕೂಡ ವಿದ್ಯಾರ್ಥಿಗಳು ಪ್ರಯತ್ನಪೂರ್ವಕವಾಗಿ ಉಪಯೋಗಿಸುವರೆಂಬ ಆಶೆ.

# ಅನುಬಂಧ ೧.

## **ಮೇಳ—ನುಡಿಗಳು.**

**ಅಡಗು—** ಹುದುಗು, ಮರೆಯಾಗು, ಮೈಗರೆ, ಕಾಣದಾಗು, ಅವಿತುಕೊಳ್ಳು, ತಲೆಗರೆ.

**ಅಡೆ—** ತಡೆ, ಎಡರು, ತೊಂದರೆ, ಅಡ್ಡಿ, ಕಾಟ, ಪೀಡೆ.

**ಅಂಚು—** ತುದಿ, ದಂಡೆ, ದಡ, ಕಡೆ, ಕರೆ, ತಡಿ.

**ಅಂಜು—** ಅಳುಕು, ಆದಿರು, ನಡುಗು.

**ಅಪ್ಪು—** ತಬ್ಬು, ಅಮರು ತಕ್ಕೆಯ್ಸು, ಮುಂಡಾಡು, ಬೋಳೈಸು.

**ಅರಸು**— ಅರಿಸು, ಆರಯ್ ಆಯ್ದುಕೊಳ್ಳು, ಹುಡುಕು.

**ಅರಿವು**— ಎಚ್ಚರ, ಪರಿವೆ, ನೆನಪು.

**ಅಳತೆ**— ತೂಕ, ಕಟ್ಟು, ಮಾರು, ಮಾನ, ಮಾಪು.

**ಆಟ**— ಕೇಳಿ, ಚಿನ್ನಾಟ, ಹುಡುಗಾಟ, ಸಲ್ಲಾಟ.

**ಇಂಪು**— ಸೊಂಪು, ನುಂಪು; ಅಲಂಪು, ನರುಗು, ಸೊವಡು, ಮಗಮಗ.

**ಇಂಬು**— ಎಡೆ, ಬಿಡುವು, ತೆರಪು, ಅನುವು, ತೆರಪು, ಗೊತ್ತು.

**ಉಡುಗು**- ಒಣಗು, ಮುದುಡು, ಬಾಡು, ಸುರುಟು, ಸುರುಳ್ಳು, ಕ್ಷೀಣ, ಮುರು(ಂ)ಟು.

**ಊರು**— ಕೇರಿ, ಬೀಡು, ಬಾಡ, ಬಾಳು, ವಾಡ, ವಾಡಿ, ಹಟ್ಟಿ, ಪಟ್ಟಿ, ಪಾಳ್ಯ, ಪಟ್ಟಣ, ಪ್ರೊಳಲು, ಹಳ್ಳಿ, ಕಟ್ಟೆ, ಕೊಪ್ಪ(ಲು, ಳು), ಕೋಟೆ.

**ಎಗ್ಗ**— ಹುಂಬ, ಹುಂಡ, ಕೆಂಚ, ಗಾಂಪ, ಗಾವಿಲ, ಹೆಡ್ಡ, (ಪೆಡ್ಡ), ಪೆಚ್ಚ.

**ಎನ್ನು**— ಅನ್ನು, ಆಡು, ಹೇಳು, ಉಸಿರು, ಒರೆ.

**ಏಳ್ಗೆ**– (ಏಳಿಗೆ) ಮೇಲ್ಮೆ, ಪೆಂಪು, ಹೆಗ್ಗಳಿಕೆ, ಹೆಚ್ಚಳ.

**ಒಡೆಯ**— ದೊರೆ, ಆಳ್ವ, ಅಣ್ಮ, ಎರೆಯ, ಅರಸು, ಯಜಮಾನ.

**ಒದರು**— ಚೀರು, ಕೂಗು, ಬೊಬ್ಬಿರಿ, ಅರಚು, ಕಿರಚು, ಮೊರೆ, ಹುಯ್ಯಲಿಡು.

**ಒಪ್ಪು**— ಅಮರು, ಎಸೆ, ಕಂಗೊಳಿಸು, ಒಡಂಬಡು, ಚಂದಕಾಣು, ಸೊಗಸು.

**ಒಲವು**— ಸಲವು, ಒಲುಮೆ, ಸಲುಮೆ, ಕೂರ್ಪು, ಕೂರ್ಮೆ, ಒರಲು, ಎರಕ, ಅಕ್ಕರು (ಅಕ್ಕರ), ಅಕ್ಕರತೆ, ಕರುಳು. ಕಕ್ಕುಲತೆ, ಮುದ್ದು, ಲಲ್ಲೆ.

**ಕರು**— ಕುನ್ನಿ, ಮರಿ, ಚಿಳ್ಳೆ, ಪಿಳ್ಳೆ, ಕಂದ, ಕೂಸು, ಹಸುಳೆ, ಚಿಣ್ಣ, ಮಗ, ಹುಡುಗ.

**ಕಸಬು**— ಕೆಲಸ, ಹೋರೆ, ಬೇಸಾಯ, ಕಾಯಕ, ವ್ಯಾಪಾರ, ಉದ್ಯೋಗ. ಉದ್ದಿಮೆ (ಉದ್ಯಮ), ಊಳಿಗ, ಗೆಯ್ಮೆ, ದುಡಿಮೆ.

**ಕಸುವು**— ಅಣ್ಮು, ಅಪುರ್ಗ, ಅದಟು, ಉಕರ್ಗ, ಅಳವು, ಆಳ್ತನ, ಬಲ, ಗಂಡು, ಜಿಗಟು, ಗಟ್ಟಿಗತನ, ಆಕೆವಾಳತನ, ಬಂಟತನ.

**ಕಿಚ್ಚು**— ಕೆಂಡ, ಬೆಂಕಿ, ಬೇಗೆ, ಉರಿ.

**ಕೆರೆ**— ತುರಿಸು, ತಿಕ್ಕು, ಚಿವುಟು, ಚಿವುರು, ಜಿಗಟು.

**ಕೊನರು**— ಚಿಗುರು, ತಳಿರು, ಮುಗುಳು.

**ಕೊಳ್ಳೆ**— ಸುಲಿಗೆ, ಸೂರೆ, ದಾಳಿ, ಲಗ್ಗೆ.

**ಕೋರಿಕೆ**— ಹಾರೈಕೆ, ಬಯಕೆ, ಬೇಡಿಕೆ.

**ಗಳಿಕೆ**— ಆಯ, ಉತ್ಪನ್ನ, ಹುಟ್ಟುವಳಿ, ಆದಾಯ, ಲಾಭ.

**ಗುಂಪು**— ಬಂಬಲು, ಸಂದಣಿ, ಜಂಗುಳಿ, ತಿಂತಿಣಿ, ಹಿಂಡು, ಗಡಣ, ಒಟ್ಟಜೆ, ತಟ್ಟು, ಗೊಂದಣ.

**ಚದುರು**— ಜಾಣ್ಮೆ, ಜಾಣು, ಕುಸುರು.

**ಚಿಗಿ**— ಮೊಳೆ, ಪಬ್ಬು, ಪಡಲುವತ್ತೆ, ಕೊನರ್, ಕುಡಿಬಿಡು, ಚಿಗುರು.

**ಚುಚ್ಚುಮಾತು**— ಕಚ್ಚುಮಾತು, ಬಿಚ್ಚುಮಾತು, ಮೂದಲಿಕೆ, ಕವಡು, ಕಟಕಿ, ಕಡುನುಡಿ, ಬಿರುನುಡಿ, ಅಣಕ.

**ಚೆಂದ**— ಚೆಲುವು, ಸೊಗಸು, ಸೊಬಗು, ಸೊಂಪು, ಪೇಸೆ, ಗಾಡಿ, ಅಂದ, ಲೇಸು, ಒಳ್ಪು.

**ಜಳ್ಳು**— ಟೊಳ್ಳು, ಪೊಳ್ಳು, ಬರಡು.

**ಜೋಡಿಸು**— ಕೂಡಿಸು, ಕಟ್ಟು, ಹೊಂದಿಸು, ಬೆಸೆ, ಸವೆ, ಹೆಣೆ, ಹೊಲಿ.

**ತಣಿ**— ದಣಿ, ಚಳಿ, ಸಾಕಾಗು, ಆಸರು, ಬೇಸರು.

**ತಲ್ಲಣ(ಳ)**— ತಳಮಳ, ತಡಬಡೆ, ಕಳವಳ, ಸಿಡಿಮಿಡಿ, ಕಸಿವಿಸಿ, ಬೇಗುದಿ, ಅಳಲು, ತೊಳಲು.

**ತೀರ**— ಪೂರ, ತುಂಬ, ಕಡು, ಬಹಳ, ಒಳ್ಳೆ, ಸಲೆ, ಮಿಗೆ, ನಾಡೆ, ಉರೆ, ತವೆ.

**ತುಡುಕು**— ದುಡುಕು, ಎರಗು, ಬೀಳು, ಹಾಯು, ತಾಗು, ತಳ್ತಿರಿ.

**ತುಂಟ**— ಪೋಕ, ಪೋಲಿ, ಪೋಕರಿ, ಅಗಡ, ಟೊಣಪ, ನಾಡಾಡಿ, ಉಡಾಳ, ಊಡಕ, ಉಂಡಾಡಿ, ಕೂಳ, ಗೂಳಿ.

**ತೊಡೆ**— ಅಳಿಸು, ಒರೆಸು, ತೊಳೆ, ಉಜ್ಜು, ತಿಕ್ಕು.

**ತೊಂದರೆ**— ಕಷ್ಟ, ಕಾಟ, ಕೇಡು, ಕೋಟಲೆ, ಉಪಟಳ, ಗಸಣಿ, ದೈವ, ಹಣೇಬರಹ.

**ತೊಳಗು**— ಬೆಳಗು, ಹೊಳೆ, ತೆರಂಬೊಳೆ, ತಳ್ಪೊಯ್.

**ನನ್ನಿ**— ನಿಕ್ಕುವ, ನಸಸು, ದಿಟ, ಸತ್ಯ, ಸಾಜ, ನಿಜ.

**ನಲ್ಲ**— ಇನಿಯ, ಗಂಡ, ಓಪ, ಮನದನ್ನ, ಕಾದಲ, ಕೂರ್ಪ.

**ನವೆ**— ಸವೆ, ತವಿ (ತವು), ಸೊರಗು, ಕೊರಗು, ನೆಳ್ಗು (ನೆಗ್ಗು).

**ನುರಿತ**— ಪಳಗಿದ, ಹಣ್ಣಾದ, ಹದಕ್ಕೆ ಬಂದ, ಪಾಡಾದ.

**ನೆವ**— ನೆಪ, ನಿಮಿತ್ತ, ಕಾರಣ, ಕತೆ, ಮೂಸರು, ದೆಸೆ, ಸಲುವಾಗಿ, ಓಸ್ಕರ.

**ಪೊರೆ**— ಸಾಕು, ಸಲಹು, ಕಾಯು, ಕಾಪಾಡು, ಓವು, ನಡಪು, ಜೋಕೆಮಾಡು, ಜೋಪಾನಮಾಡು.

**ಫಕ್ಕನೆ**— ಭೋಂಕನೆ, ಒಮ್ಮೆಲೆ, ತೊಟ್ಟನೆ, ತಟ್ಟನೆ, ಚಟ್ಟನೆ, ಗುಮ್ಮನೆ, ಗಕ್ಕನೆ, ಬುದಿಂಗನೆ, ಪುಸಕ್ಕನೆ.

**ಬಗೆ**— ತೆರ, ಅಂದ, ಪಾಂಗು, ಮಾಳ್ಕೆ, ಪೊಲಬು.

**ಬಯಸು**— ಬೇಡು, ಕೇಳು, ಕೋರು, ಹಾರೈಸು, ಪಾರು.

**ಬರು**— ಸಾರು, ಎಯ್ದು, ಐತರು, ಎಳ್ತರು.

**ಬಾಗು**—ಬೀಳು, ಮಣಿ, ಎರಗು, ಪೊಡಮಡು, ವಂದಿಸು, ಕೈಮುಗಿ.

**ಬಯ್**— ಹಳಿ, ಜರಿ, ಮೂದಲಿಸು, ತರಿ, ತುಡರು, ತೆಗಳು.

**ಭಾವುಕ**—ರಸಿಕ, ಚದುರ, ಬಗೆಗಾರ, ಜಾಣ.

**ಮಗ್ಗುಲು**— ಬಳಿ, ನೆರೆ, ಹೊರೆ, ಒತ್ತು, ಬದಿ, ಹತ್ತಿರ, ಕೆಲ.

ಮಳೆ— ಸರಿ, ಸೋನೆ, ಹನಿ, ಸಿಡಕಲು.

ಮಿರುಗು— ಮಿನುಗು, ಮಿಸುಗು, ಮಿಂಚು.

ಮುಳಿಸು— ಸಿಟ್ಟು, ಸಿಡುಕು, ರೊಚ್ಚು, ಕಿಚ್ಚು.

ಮೂಡು— ಕಾಣು, ಒಗೆ, ಉಣ್ಮು, ಪೊಣ್ಮು, ತಲೆಯೆತ್ತು, ತಲೆ ದೋರು, ಹುಟ್ಟು.

ಮೋಡಿ— ಬಗೆ, ಹದ, ಕೀಲ, ಹಿಡಿತ, ರೀತಿ.

ಸರತಿ— ಬಾರಿ, (ವಾರಿ), ಪಾಳಿ, ಸೂಳು, ಪರಿವಿಡಿ.

ಸರಿ— ದೊರೆ, ಸಾಟಿ, ಪಾಸಟಿ, ಪಾಟಿ, ಗೆಡೆ, ಎಣೆ, ಜೋಡು, ತೋಡು; ಈಡು, ಒರೆ, ಹೋಲುವೆ, ಹೋಲಿಕೆ.

ಸಾರು-ಬರು, ಎಯ್ತರು, ಎಳ್ತರು.

ಸೊಟ್ಟ— ಅಂಕು, ಡೊಂಕು, ಒಂಕು, ಕೊಂಕು, ಕುಡು, ಅಡ್ಡ, ತಿಡ್ಡ.

ಸೋಜಿಗ— ಬೆರಗು, ಬೆಕ್ಕಸ, ಅಕ್ಕಜ, ಅಚ್ಚರಿ, ಚೋದ್ಯ.

ಸೋಲು — ಜೋಲು, ಹಿಂಜರಿ, ಹಿಂದೆಗೆ, ಪ್ಯಾದೆಗೆ, ಹಿಡು, ಚದರು, ಬೆನ್ನು ತೋರು.

ಹಿಗ್ಗು — ಉಬ್ಬು, ಗುಡಿಗಟ್ಟು, ನಲಿವೇರು, ಜುಮ್ಮೆನ್ನು.

ಹೀಚು— ಮಿಡಿ, ಕಸಕು, ಒಗರು ಕಾಯಿ, ಕಗ್ಗ.

ಹುಡುಕು— ಬೆದಕು, ಅರಸು, ಅರಿಸು, ಅಯ್ದು.

ಹೊಗು — ಹೋಗು, ಸೇರು, ನುಸುಳು, ನುಗ್ಗು.

ಹೊಡೆ -ಬಡಿ, ಜಡಿ, ಕಡಿ, ಇಕ್ಕು.

ಹೊಸ — ಮೀಸಲು, ಬಳಸದ.

ಹೊಳಪು—ಹೊಗರು, ಪೊಡರ್ಪು, ತಳಕು (ಥಳಕು), ಬೆಳಕು, ಬೆಡಗು, ಮಿಂಚು, ಮಿರುಗು, ಮೆರುಗು.

## ಅನುಬಂಧ ೨.

## ದೇಸಿ-ನುಡಿಗಳು

### ೧. ಜೋಡುನುಡಿ— (ಸಾಮ್ಯ)

ಅಚ್ಚು-ಮೆಚ್ಚು; ಕಾಳು- ಕಡಿ;
ಅಡ್ಡ-ತಿಡ್ಡ; ಕೆಲಸ-ಬೊಗಸೆ;
ಅರವು-ಮರವು; ಕೈ-ಬಾಯಿ;
ಅಲ್ಪ-ಸ್ವಲ್ಪ ಗುಡಿ-ಗುಂಡಾರ;
ಆಟ-ನೋಟ ಗೊತ್ತು-ಗುರಿ
ಉಡಿಗೆ-ತೊಡಿಗೆ ತಪ್ಪು-ತಡೆ
ಎಣ್ಣೆ-ಬೆಣ್ಣೆ ತಾರಗ- ಬೀರಗ;
ಕಪ್ಪ-ಕಾಣಿಕೆ; ತಾಳ-ಮೇಳ;
ತಿಂಡಿ-ತೀರ್ಥ ಬಡವರು-ಬಗ್ಗರು
ದನ-ಕರು ಮಳೆ-ಬೆಳೆ
ನಡೆ-ನುಡಿ ಮುಚ್ಚು-ಮರೆ
ನಯ-ಭಯ ಯಂತ್ರ-ಮಂತ್ರ-ತಂತ್ರ
ನೀರು-ನಿಡಿ ಸಂದಿ-ಗೊಂದಿ
ನುಚ್ಚು-ನುರಿ ಹಬ್ಬ-ಹುಣ್ಣಿವೆ
ನೆರೆ-ಹೊರೆ ಹಳ್ಳ-ಕೊಳ್ಳ
ಬಂಧು-ಬಳಗ ಹಾಸು-ಹೊಕ್ಕು
ಹೋಳಿಗೆ-ತುಪ್ಪ

## ೨. ಜೋಡುನುಡಿ–(ವಿರೋಧ)

ಅಡಿ-ಮುಡಿ; ತಣಿ-ದಣಿ
ಅಳಿ-ಉಳಿ, ತಪ್ಪು-ಒಪ್ಪು.
ಆಗು-ಹೋಗು; ತಿಪ್ಪೆ-ಉಪ್ಪರಿಗೆ
ಆಳು-ಅರಸು; ತೇಲು-ಮುಳುಗು
ಇಲಿ-ಹುಲಿ; ನಗೆ-ಹೊಗೆ
ಎಗ್ಗ-ಅರಿಗ; ನಚ್ಚು-ಮೆಚ್ಚು
ಏರು-ಇಳಿ; ನಾಡು-ಕಾಡು
ಏಳು-ಬೀಳು; ಪೆದ್ದ-ಪಂಡಿತ
ಒಳ-ಹೊರ; ಬಿತ್ತು-ಕಿತ್ತು
ಕನಸು-ನನಸು; ಬೆಳಗು-ಬೈಗು
ಕಾಗೆ-ಕೋಗಿಲ; ಬೇವು-ಬೆಲ್ಲ
ಕಾಯು-ಕೊಲ್ಲು; ಮೆಚ್ಚು-ಕಚ್ಚು
ಕೊಡು-ಕೊಳ್ಳು; ಸಾವು-ಉಳಿವು
ಕೊನರು-ಕಮರು; ಹಿಗ್ಗು-ಕುಗ್ಗು, ತಗ್ಗು
ಗಳಿಸು-ಬಳಿಸು; ಹಿರಿ-ಕಿರಿ
ಜಾಣ-ಕೋಣ; ಹೊಗಳು-ತೆಗಳು-
ಟೊಳ್ಳು-ಗಟ್ಟಿ –ಬೊಗಳು
ತಗ್ಗು-ದಿನ್ನೆ;
ತಗ್ಗು -ತಿಟ್ಟು

## ೩. ಕಿರುನುಡಿ– (ಅ) ಅನುಕರಣ

ಕತಕತ ಕುದಿ
ಕರಕರ ಕಟಕಟ ಕಡಿ
ಕಿಕ್ಕಿರಿದು ತುಂಬು
ಕಿಡಿಕಿಡಿ ಆಗು
ಗಟಗಟ ಕುಡಿ
ಗಪಗಪ ತಿನ್ನು
ಗಳಗಳ ಅಳು
ಗುಣುಗುಣು ಮಾತಾಡು
ಚಕ್ಕನೆ ಮಿಂಚು
ಚರಚರ ಹೆಚ್ಚು-ಹರಿ
ಜುಳುಜುಳು ಹರಿ
ಝುಂಪಝುಂಪ ನಡೆ
ತಳತಳ ತೊಳಗು, ಹೊಳೆ
ಥಕಥಕ ಕುಣಿ
ದುರು ದುರು ನೋಡು
ಧಗಧಗನೆ ಉರಿ
ಪಳ-ಪಳ ಉದಿರು-ಬೀಳು
ಫಡಾಫಡಾ ಹೊಡೆ
ಬಟ್ಟಬಯಲು
ಬರಸಿಡಲು
ಬೆಳ್ಳಗೆ ಬೆಳಗಾಗು
ಭೋರ್ಗರೆ
ಮಿಕಿಮಿಕಿ ನೋಡು
ಮಿರಿಮಿರಿ ಮಿಂಚು

### (ಆ) ಉಪಮಾನಗಳು

ಎಳೆ-ಕರು, ಮುದರಂಗಿ
ಕಹಿ-ವಿಷ
ಕಾರ-ಬೆಂಕಿ.
ಜಡ-ಕಲ್ಲು.
ಬಲಿತ-ಬದನೇಕಾಯಿ.
ಮುದಿ-ಹದ್ದು-ಗೂಗೆ-ಕೋಣ.
ಹಗುರ-ಹುಲ್ಲು.
ಹರೆಯ-ಹೋರಿ.
ಅರಳು ಹುರಿದಂತೆ ಮಾತು.
ಮುತ್ತಿನಂತಹ ಮಾತು.
ಮಾತಿನಮಾಲೆ

### (ಇ) ತತ್ವಗಳು

**ಅಂದಣವನೇರಿದ ಸೊಣಗ—**

ಪಂಜರದೊಳಗಣ ಕಾಗೆ, ಶಿಖರದ ಮೇಲಣ ಕಾಗೆ.

ಅಳಲಿ ಭಕ್ತಿ— ಅಳಿಲು ಸೇವೆ, ತುಳಸಿ ಪತ್ರ, ಹೂವಿನ ಎಸಳು.

**ಉಂಡ ಉಪವಾಸಿ—** ಬಳಸಿ ಬ್ರಹ್ಮಚಾರಿ.

**ಉರಿಯ ನೆಳಲು—** ಹಾವಿನ ಹೆಡೆಯ ನೆಳಲು, ಹುಲಿಯ ಒಲವು, ಮಂಜಿನ ಮಳೆ, ಬಿಸಿಲ ಕುದುರೆ.

**ಒಡಲೆರಡು ಜೀವೊಂದು-** ಅವಳಿ ಜವಳಿ.

**ಒಲಿದುದು ಓಸರಿಸದು-** ನಂಬಿದುದು ಸಂದೇಹಿಸದು, ತುಂಬಿದುದು ತುಳುಕದು, ನೆರೆಯರಿದುದು ಮರೆಯದು, ನಚ್ಚಿ ಬಿಚ್ಚದು.

**ಕಟ್ಟಿದ ಬುತ್ತಿ—** ನಿಂತ ನೀರು; ಕಲಿತ ಬುದ್ಧಿ.

**ಕತ್ತುರಿ ಬಿಟ್ಟು ಕೆಸರು ಕೊಳ್ಳು-** ಆನೆಯ ಜರಿದು ಕೋಣವನೇರು, ಹಾಲು ಬಿಟ್ಟು ಹೆಂಡ ಬೇಡು.

**ಕೊಟ್ಟುದನೆ ಕೊಂಡಿರು-** ಕೊಟ್ಟುದನೆ ಪ್ರಸಾದವೆಂದಿರು, ಹಾಕಿದಷ್ಟು ತಿಂದಿರು, ಹೇಳಿದ್ದಕ್ಕೆ ಅಹುದೆನ್ನು, ಎಂದುದನ್ನೆ ಎಂದು ಬಾಳು, ಇತ್ತುಂ ತೆತ್ತುಂ ಬಾಳು.

**ಕೊರಡು ಕೊನರು—** ಒನಕೆ ಕೊನರು; ಅತ್ತಿಯ ಹೂ, ಬರಡು ಹಯನಾಗು, ಬಂಜೆಯ ಬಸಿರು.

**ತೊರೆಗೆ ನೀರೆರೆ—** ಗುಡ್ಡಕ್ಕೆ ಕಲ್ಲು ಹೊರು, ಸೂರ್ಯನಿಗೆ ಸೊಡರಿಡು, ಕೆರೆಯ ಮುಂದಣ ಅರವಟ್ಟಿಗೆ.

**ನಾಯಿ ಬಾಲ—** ಗಾಳಿ ಮೊಟ್ಟೆ, ನೆಲ್ಲಿಯ ಮೂಟೆ, ಸೀರಸೋಲಣ ಬರಹ, ನೀರ ಮೇಲಣ ಗುಳ್ಳೆ.

**ನೆಲವೆದ್ದು ಬಡಿ—** ಬೇಲಿಯೆದ್ದು ಮೇಯು, ಕಡಲು ಕರೆ ಮೀರು, ಹಗ್ಗವೆ ಹಾವಾಗು, ಹೊನ್ನು ಮಣ್ಣಾಗು.

**ಬಳ್ಳಿಗುರುಡರು ಹಳ್ಳಕ್ಕೆ ಬಿದ್ದಂತೆ.**

**ಬಿಸಿಲು ಬೆಳದಿಂಗಳಾಗು—** ಬೆಳದಿಂಗಳು ಬಿಸಿಲಾಗು.

**ಮನೆಯೇನು ಮಠವೇನು ?—** ಮನೆಯೇನು ವನವೇನು ? ಪಾಲೇಂ ಕಪನ್ನಪಾಣಿಸೇಂ ? ಪಟ್ಟೆಯೇನು ಪಟ್ಟಣವೇನು ?

**ಮಾತಿನ ಮಂಡಿಗೆ—** ತಿರುಕನ ಕನಸು, ಮಾತಿನ ಮಾಲೆ, ಗಾಳಿಗೋಪುರ, ಚಿನ್ನದ ಚೂರಿ, ಬಕಧ್ಯಾನ, ಕತ್ತಿಗೆ ಮೆತ್ತಿದ ಜೇನು, ನಂಜಿನ ಸವಿ.

**ಮೂಕನಿಗೆ ರಾಗ—** ಕುರುಡನಿಗೆ ಕನ್ನಡಿ, ಕತ್ತೆಗೆ ಹೂರಣ, ಕತ್ತೆಗೆ ಕತ್ತುರಿ.

**ಹಂದಿಗೆ ಚಂದನ—** ನಾಯಿಗೆ ಕಜ್ಜಾಯ, ಬೂದಿಯಲ್ಲಿ ಯಾಗ, ನೀರಿನಲ್ಲಿ ಹೋಮ, ಮಳಲಲ್ಲಿ ಹಾಲು ಹೊಯ್ಯು, ಮಂಗನ ಕೈ ಮಾಣಿಕ, ಬೋರ್ಗಲ್ಲ ಮೇಲೆ ಮಳೆ, ಕೋಣನ ಮುಂದೆ ಕೊಳಲು-ಕಿನ್ನರಿ.

**ಹಾಲು ನೋಡಿ ಹೊಡೆತವ ಮರೆತ ಬೆಕ್ಕು—**ತುಪ್ಪದಸನಿಗೆ ಅಲಗನ್ನು ನೆಕ್ಕುವ ಸೊಣಗ.

**ಹಾವಿನ ಹೆಡೆಯಿಂದ ಕೆನ್ನೆ ತುರಿಸು—**ಸುಣ್ಣದ ಕಲ್ಲು ಮಡಲಲ್ಲಿ ಕಟ್ಟು.

---

# ಅನುಬಂಧ ೩

## ಪಡೆನುಡಿಗಳು

### (ಅ) ಕೈನ್ಮೆಗಳಿಂದ ಬಂದವು!

**ಕೈಯೆತ್ತಿ ಕೊಡು**— (ಮನಸ್ಸಿನಿಂದ ಕೊಡು)– ಕೈಯೆತ್ತಿ ಕೊಡಲಿಲ್ಲ. —ಸರ್ವಜ್ಞ.

**ಕೈಯಾಸೆ**— (ಲಂಚದ ಆಸೆ)- ಕೈಯಾಶೆಯುಂ ಮಾಡದ ಮಂತ್ರೀಶ್ವರರ್ —ಸೋಮೇಶ್ವರ

**ಕೈಮಿಗೆ**— ಕೈಗಳ್-(ಕೈಮೀರು)- ಕಾಯ್ಪು ಕೈಮಿಗೆ- ಪಂಪ. ಕೈಗಳೆದ ಮನೆವಾಳ್ತೆ- ಸರ್ವಜ್ಞ. ನಿಮಗೆ ನಾವು ಕೈಮೀರಿ ನಡೆಯುವೆವು. —ಕು. ವ್ಯಾಸ.

**ಕೈಗನ್ನಡಿ**— (ಸರಿಯಾಗಿ ತೋರಿಸುವಂತಹ ಮಾತು):—ಮೂರು ಲೋಕದ ಕೈಗನ್ನಡಿ –ಜನ್ನ.

**ಕೈವಾರ**—(ಹೊಗಳಿಕೆ, ಪಕ್ಷಪಾತ, ಸಹಾಯ)— ಆರವನು? ಓರಿವಾಗಿ ನೀ ಕೈವಾರಿಸುವೆ? —ಕು. ವ್ಯಾಸ.

**ಕೈತೋರಿಸು**— (ಶಾಸನಮಾಡು) ಕೈತೋರಿಸದು ನಿನ್ನಯ ರಾಯರೈವರು. —ಕು. ವ್ಯಾಸ.

**ಕೈವಿಡಿ**— ೧ (ಮದುವೆಯಾಗು) ಕೈವಿಡಿದ ರಾಣಿಯರ ಸೊಬಗು. ೨ (ನೆರವಾಗು)— ಕೃಷ್ಣ ಕೈಹಿಡಿದವನು...ಭಕ್ತಿಯಿಂ ಭಜಿಸಿದರೆ. ೩ (ತಡೆ-ನಿರೋಧಿಸು). ಅವನ ಕೈಹಿಡಿಯುವವರಾರು?

**ಕೈಕಾಯು**— ೧ (ಕಾಪಾಡು) ಕರುಣಾಜಲ ನಿಧಿಯೆ ಕೈಗಾಯಬೇಕೆಂದು ಒರಲಿದಳು ತರಳೆ.—ಕು. ವ್ಯಾಸ. ೨ (ತಡೆದು, ಬಿಗಿಹಿಡಿದು)— ಅಂ ಇನ್ನೆವರಂ ಕೈಗಾಯ್ದು ಯುದ್ಧಮಂ ರಚಿಸಿದೆ. —ಕೆ. ನೃ. ವಿ.

**ಕೈಗೆಬರು**: (ಪೂರ್ಣವಾಗು, -ಪಕ್ವವಾಗು) ಕೋಗಿಲೆ ಕೈಗೆವಂದ ಮಾವಂ ಸಾರ್ವಂತೆ. —ಆಂಡಯ್ಯ

**ಕಾಲ್ವಿಡಿ**: (ನಮಸ್ಕರಿಸು): ಲೋಕವಿಖ್ಯಾತರಾಗಿ ಕೈಮುಗಿದಿಪಲ್ಲಿಯೇ ಕಾಲ್ವಿಡಿಯಲ್ಕೆ ತಕ್ಕುದೇ? —ಪಂಪ

**ಕಾಲೇಳದಿರು**:(ಹೋಗಲು ಇಚ್ಛೆ ಆಗದಿರು): ನಿನ್ನ ಬಿಟ್ಟು ಕಾಲೆದ್ದು ಪೋಪವೇ? —ಕನಕ

**ಮೈಗಲಿ**: (ಶೂರ).

**ಮೈಗೊಳ್ಳು**: (ಅವತರಿಸು) ಧರಣಿಯಲಿ ಮೈಗೊಂಡು ದೈತ್ಯರನು ಒರಸಿದನು. —ಕು. ವ್ಯಾಸ

**ಮೈಮರೆ**: (ತಲ್ಲೀನವಾಗು): ಭಾಗ್ಯ ಯೌವನಗಳ ಮಬ್ಬಿನಲಿ ಮೈಮರೆತರೆ ಲಭ್ಯವಾಗದು ಹರಿಪದಾಬ್ಜ. —ದಾಸರು

**ತಲೆಗೆ ಏರು**: ೧ (ಸಿಟ್ಟಿನಲ್ಲಿ) ಇದುವೆ ಪಿತ್ತದ ವಿಕಳತೆಯೋ ಭಂಗಿ ತಲೆಗೇರಿದುದೋ?

೨ (ಹಿಗ್ಗಿನಲ್ಲಿ): ಸಂಗೀತದಾ ಲಹರಿ ತಲೆಗೇರಿ ನಲಿದು.

**ತಲೆದೂಗು**: ೧ (ಹಿಗ್ಗಿನಿಂದ): ತಾನದನುಂಡು ತಲೆದೂಗಿದನು, ತೇಗಿದನು.

೨ (ಒಪ್ಪಿ): ಚಿತ್ತಕೆ ಸೊಗಸಿ ತಲೆದೂಗಿದನು. —ಕು. ವ್ಯಾಸ

೩ (ಮೆಚ್ಚುದಿಂದ): ಕೇಳಿ ತಲೆದೂಗಿದನು ನುಡಿದ ಭಾವದೆ ಲಾಲಿಸಿದನಸುರಾರಿ. —ಕು. ವ್ಯಾಸ

**ಬಾಯಿತೆರೆ:** ೧ ನಾವು (ತುಟಿ) ಪವಳದ ಬಾಯ್ದೆರೆಯುಂ —ಪಂಪ

೨ ಧಾತು (ಸೋಜಿಗಗೊಳ್ಳು): ಮೇನಕೆ ಸರಸ್ವತಿ ಬಾಯ್ದೆರೆವಂತೆ ಪಾಡಿದಳ್. —ಪಂಪ

೩ (ಬೇಡು): ಕಂಡಕಂಡವರಿಗೆ ಬಾಯ್ದೆರೆಯದಿರು.

**ಬಾಯಿಬಿಡು:** ೧ (ಗಳಹು): ಮತಿಗೆಟ್ಟು ಬಾಯಿ ಬಿಡದಿರು. -ಪುರಂದರ

೨ (ತಿರಿ, ಯಾಚಿಸು) ಭ್ರಷ್ಟದೈವಕೆ ಬಾಯಿ ಬಿಟ್ಟಲ್ಲಿ ಫಲವಿಲ್ಲ.

೩ (ಕಾಮಿಸು): ಮುಂಡೆಯರ ಕಂಡು ಬಾಯ್ಬಿಡುವವ. —ಸರ್ವಜ್ಞ

೪ (ಬಳಲು): ಕೆಸರಿನಲ್ಲಿ ಬಿದ್ದ ಪಶುವಿನಂತೆ ನಾನು ದೆಸೆದೆಸೆಗೆ ಬಾಯ್ಬಿಡುತಿರ್ದೆನಯ್ಯ. —ಬಸವಣ್ಣ

೫ (ಬೆರಗು): ಒಟ್ಟಿರ್ದಪೊನ್ನ ಬೆಟ್ಟಂಗಳ ಇತ್ತುಪರ್ಕೆ ಬಾಯ್ಬಿಡೆ ವಿಪ್ರಕೋಟಿ. —ಪಂಪ

**ಕಣ್ಸೋಲು:** (ಮೋಹಿಸು): ಅಂದು ಅರ್ಜುನನ ಕಣ್ಸೋಲ್ತು ಕಂಡಳ್. —ಪಂಪ

**ಮೂಗು:** (ಇಕ್ಕಟ್ಟಿನ ಮಹತ್ವದ ಸ್ಥಾನ): ಮೂಗು ಹಿಡಿದರೆ ಬಾಯಿತೆರೆವುದು.

**ಕಿವಿಹಿಡಿ:** (ತಿದ್ದು, ಒತ್ತಾಯಪಡಿಸು): ಆಶೆಯೆಂಬ ಶ್ರೀ ಶರಣರಲ್ಲದವರ ಕಿವಿಯ ಹಿಡಿದು ಕುಣಿಸಿದಳು —ವಚನ

**ಹಲ್ಲುಮುರಿ:** (ಫಜೀತಿ ಮಾಡು): ಪಾತಾಳಂ ಪೊಕ್ಕೊಡೆ ಶೇಷಾಹಿಯ ಪಲ್ಗಳಂ ಮುರಿದಪೆಂ. —ರನ್ನ

**ಎದೆ:** (ಅಂತಃಕರಣ): ಎದೆಯಿತ್ತು ಕೂಡಿದಳು. —ರತ್ನಾಕರ

**ಅಳ್ಳೆದೆ:** (ಪುಕ್ಕ ಮನಸ್ಸು): ಅರಿಗಂಡರ ಅಳ್ಳೆರ್ದೆಗಳಂ ತುಳಿವವೋಲ್. —ಪಂಪ

**ಎಂಟೆರ್ದೆ:** (ಅತುಲ ಧೈರ್ಯ) ರನ್ನ ಕೃತಿರತ್ನಮುಮಂ ಪೇಳ್ ಪರೀಕ್ಷಿಪಂಗೆ ಎಂಟೆರ್ದೆಯೆ ? —ರನ್ನ

**ಹೊಟ್ಟೆನೋವು:** (ಅಸೂಯೆ): ೧ ಕೌರವ ಕುಲವ ಕೆಟ್ಟಿದರೇನು ಜಠರದ ಶೂಲ ನಿನಗೆಂದ. —ಕು. ವ್ಯಾಸ

೨ (ಮಾನಸಿಕ ವ್ಯಥೆ): ಅತ್ತೆ ಸುಭದ್ರೆಗೆ ಒಡಲುನೋವ.

**ನೆತ್ತರಕುದಿ:** (ಅತ್ಯಂತ ಕೇಡು ಉಂಟಾಗು): ನಿನ್ನ ಮೈಯ್ಯ ನೆತ್ತರ್ ಕುದಿಸುವೆ. —ಪಂಪ

## (ಆ) ಬೇರೆಬಗೆಯಿಂದ ಬಂದವು

**ಬೆಲ್ಲವಾಗಿರು:** (ಪ್ರಿಯವಾಗಿರು) ಬೆಲ್ಲವಾಗಿರಬೇಕು ಸಕಲ ಸಜ್ಜನರೊಳಗೆ ---ದಾಸರು

**ಉಗುಳು ದಾಟು:** (ಮಾತು ಮೀರು): ಕೆಲರು ಮಾತೆಯರಿಕ್ಕಿದ ಉಗುಳ ದಾಟದಿಹರು. —ಕನಕ

**ಔಷಧಕ್ಕೆ ಇಲ್ಲ:** (ಬೇಕಿದ್ದರೂ ಇಲ್ಲದಾಗಿರು): ತಲೆಯಲ್ಲಿ ಕರಿದು ಕೂದಲುಗಳೌಷಧಿಗಿಲ್ಲ.

**ಬಣ್ಣವೇರು:** (ಹೆಚ್ಚಾಗು) ಸತಿಯರು ಈ ಕೃತಿಯನಾಲಿಸಿದರೆ ಪತಿಭಕ್ತಿ ಬಣ್ಣವೇರುವದು. —ಹೊನ್ನಮ್ಮ

**ಬದನೆಕಾಯಿ ಆಗು:** (ಹಾಳಾಗು) ಸಕಲ ಲಕ್ಷಣಕಾಗಿ ಬಿರುಸು ಮಾಡಿದರೆ, ಪುಸ್ತಕದ ಬದನೆಕಾಯಿಯಹುದು. —ರತ್ನಾಕರ

ಗಂಡುಗೆಡಿಸು : (ನಿರ್ವೀರ್ಯ ಮಾಡು): ಗಂಡುಗೆಡಿಸದೇ ವಿಧಿ ?
ಕು. ವ್ಯಾಸ

ಪಾತ್ರವಾಡಿಸು : (ಕುಣಿಸು) ಪಾತ್ರಮನಾಡಿಸದೆ ಮಾಣಂ ಅನಂಗಂ
—ಜನ್ನ

ಎರಡು :(ಭೇದ): ಉಂಡ ಮನೆಗೆ ಎರಡು ಬಗೆಯಬಾರದು. —ಗಾದೆ

ಗುಡಿಕಟ್ಟು : (ಹಿಗ್ಗು): ಬಗೆ ಯೊಳೆ ಗುಡಿಗಟ್ಟಿ ಇಂತೆಂದಳ್. .
—ಪಂಪ

# ಅನುಬಂಧ ೪.

## ನಾಣ್ಣುಡಿಗಳು.

೧ ದುಡ್ಡೇ ದೊಡ್ಡಪ್ಪ.
೨ ಮರದ ಲಕ್ಷಣ ಮೊಳಕೆಯಲ್ಲಿ ತಿಳಿಯುವದು. ಬೆಳೆಯುವ ಪೈರು ಮೊಳಕೆಯಲ್ಲಿ.
೩ ಕುಲಕ್ಕೆ ಕುಲ ವೈರಿ.
೪ ಸತ್ತ ಎಮ್ಮೆಗೆ ಹತ್ತು ಸೇರು ಹಾಲು.
೫ ಅಜ್ಜ ನೆಟ್ಟದು ಆಲದ ಮರ.
೬ ಬಿತ್ತಿದ್ದನ್ನು ಬೆಳೆದುಕೊ.
೭ ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೇ !
೮ ಹಾಯ್ದಾಡದೆ ಹಾದಿಯಿಲ್ಲ.
೯ ಭಾವಿ ತೋಡಲು ಹೊರಟರೆ ಬೇತಾಳ ಹೊರಟಿತು.
೧೦ ಎಲ್ಲಿ ದೇವತೆಗಳು ಹೆಜ್ಜೆಯಿಡಲು ಹೆದರುತ್ತಾರೋ ಅಲ್ಲಿ ಹುಚ್ಚರು ನುಗ್ಗುತ್ತಾರೆ.
೧೧ ವನ ಹಣ್ಣಾಯಿತು, ಗಿಣಿಯ ಬಾಯಿಗೆ ಹುಣ್ಣಾಯಿತು.
೧೨ ಉರಿಯುವ ಗಾಯದ ಮೇಲೆ ಉಪ್ಪು ನೀರೆರೆದಂತೆ.
೧೩ ತುಂಬಿದ ಬಂಡಿಗೆ ಮೊರವು ಭಾರವೇ ?
೧೪ ಬೇರನ್ನು ಬಲ್ಲವನಿಗೆ ಎಲೆಯನ್ನು ಹೇಳುವದೇಕೆ ?
೧೫ ಹಸಿದ ಹುಲಿಯು ಮೊಸೆಯನ್ನು ಹಿಡಿದು ಅಲ್ಲಾಡಿಸುತ್ತಿರುವ.
೧೬ ಮೂಗನ್ನು ಕೊಯಿದು ಕನ್ನಡಿಯನ್ನು ತೋರಿಸುವಂತೆ.
೧೭ ಆಕಾಶ ಹರಿದು ಬೀಳುವಾಗ ಅಂಗೈ ಒಡ್ಡಿದರೆ ನಿಂತೀತೇ ?
೧೮ ಹಿಗ್ಗಿದವನು ಮುಗ್ಗ್ಯಾನು, ತಗ್ಗಿದವನು ಜಯಿಸ್ಯಾನು.

೧೯ ಬಂಗಾರದ ಸೂಜಿಯೆಂದು ಹಿಂಗದೆ ಕಣ್ಣು ಕುಕ್ಕಿಕೊಳ್ಳಬಹುದೇ ?
೨೦ ಬಂಗು ಕುಡಿಯುವವನಿಗೆ ಹಂಗು ಯಾರದು ?
೨೧ ಹಗ್ಗ ಸುಟ್ಟರೆ ಹುರಿ ಹೋದೀತೇ ?
೨೨ ನೆಚ್ಚಿದ ಎಮ್ಮೆ ಕೋಣನನೀಯಿತು.
೨೩ ನಕ್ಕರೂ ತಕ್ಕರನ್ನು ನಂಬಬಾರದು.
೨೪ ನಡೆಯೋದು ಕಾಲ್ನಡೆ, ಮಾತು ಪಲ್ಲಕ್ಕಿಯ ಮೇಲೆ.
೨೫ ನಂಬಿದವಗೆ ಇಂಬು, ನಂಬದವಗೆ ಅಂಬು.
೨೬ ಇತ್ತ ಬಾ ! ಎಂದರೆ ಇದ್ದ ಮನೆಯ ಕಿತ್ತುಕೊಂಡ.
೨೭ ಇದ್ದ ಮಕ್ಕಳಿಗೆ ಕೂಳಿಲ್ಲ ! ಮತ್ತೊಂದು ಕೊಡೋ ಶಿವರಾಯಾ !
೨೮ ಚಿಂತೆಯೇ ಮುಪ್ಪು, ಸಂತೋಷವೇ ಯೌವನ.
೨೯ ಸುಖದ ಬಾಳು ಬಾಳು, ದುಃಖದ ಬಾಳು ಹಾಳು.
೩೦ ಅರಿಯೆನೆಂಬುದು ಅರಸುಗುಣ.
೩೧ ಆಳಾಗಬಲ್ಲವ ಅರಸಾಗಬಲ್ಲ.
೩೨ ಒಲಿದರೆ ನಾರಿ, ಮುನಿದರೆ ಮಾರಿ.
೩೩ ಇಬ್ಬರ ನ್ಯಾಯ ಒಬ್ಬರಿಗೆ ಆಯ.
ಇಬ್ಬರ ಜಗಳ ಮೂರನೆಯವನಿಗೆ ಲಾಭ.
೩೪ ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ.
೩೫ ತುಂಬಿದ ಕೊಡ ತುಳುಕುವದಿಲ್ಲ.
೩೬ ಸಾದು ಎತ್ತಿಗೆ ಜೋಡು ಮುಟ್ಟು.
೩೭ ವಿಷಯಾತುರತೆಗೆ ವಿವೇಕವಿಲ್ಲ.
೩೮ ಕಂಡದ್ದನ್ನಾಡಿದರೆ ಕೆಂಡದಂತಹ ಕೋಪ.
೩೯ ಕತ್ತೆಯೇನು ಬಲ್ಲದು ಕತ್ತೂರಿಯ ಪರಿಮಳ?
೪೦ ಕತ್ತೆಯ ಸಂಟಸ್ತನಕ್ಕೆ ಲತ್ತೆಯೇ ಫಲ.
೪೧ ಗುಣ ತಿಳಿದು ಗೆಳೆತನ ಮಾಡು.
೪೨ ಗೋಡೆ ಕಟ್ಟಿ ತಟ್ಟಿ ಒದೆ.
೪೩ ಹೊತ್ತಿರುವಾಗ ಗೊತ್ತು ಸೇರು.
೪೪ ಹೊತ್ತು ಬಂದತ್ತ ಕೊಡೆ ಹಿಡಿ.
೪೫ ಅಂತೂ ಇಂತೂ ಕುಂತಿಮಕ್ಕಳಿಗೆ ರಾಜ್ಯವಿಲ್ಲ.

೪೬ ಜಾಣನ ಗೋಣಿ ಬರಿದು.
೪೭ ತಾನೊಲಿದ ಮಂಕೆ ಮಾಣಿಕ.
೪೮ ಆಡದೇ ಮಾಡುವನು ರೂಢಿಯೊಳಗುತ್ತಮನು.
೪೯ ಬಲಹೋದ ಕಾಲಕ್ಕೆ ನೆಲವೆದ್ದು ಬಡಿಯುವದು.
೫೦ ಅಪಮಾನದೂಟದಿಂದುಪವಾಸವಿರಲೇಸು.
೫೧ ಅಡಿಯ ಮುಂದಿಡೆ ಸ್ವರ್ಗ, ಅಡಿಯ ಹಿಂದಿಡೆ ನರಕ.
೫೨ ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಣವಕ್ಕು.
೫೩ ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬಕ್ಕು.
೫೪ ಉಡಿಯಲ್ಲಿ ಕೆಂಡ ಕಟ್ಟಿಕೊಂಡರೆ ಸುಡದೆ ಬಿಡುವದೇ?
೫೫ ಆದರಿಲ್ಲದ ಅಮೃತಾನ್ನವೇಕೆ ?
೫೬ ಕಬ್ಬು ಡೊಂಕಾದರೆ ಸಿಹಿ ಡೊಂಕೇ ?
೫೭ ಅಗುಳಿನ ಮೇಲೆ ಅನ್ನದ ಪರೀಕ್ಷೆ.
೫೮ ಹುಣಸೆ ಮುಪ್ಪಾದರೂ ಹುಳಿ ಮುಪ್ಪಾಗುವದೇ ?
೫೯ ಕಳ್ಳನ ಹೆಜ್ಜೆ ಕಳ್ಳನೇ ಬಲ್ಲ.
೬೦ ಹಾಸಿಗಿದ್ದಷ್ಟು ಕಾಲು ಚಾಚು.
೬೧ ಮುನ್ನೋಡಿ ಉಣ್ಣೋ ಮೂಳಾ ಎಂದರೆ ಯಾವ ಹೊಲದ ಜೋಳಾ ಎಂದ.
೬೨ ಪರಮೇಶನ ಹೆಸರು ಹೇಳಿ ಪಾಯಸ ಉಂಡರು.
೬೩ ಮನಸಿನಲ್ಲಿ ಮಂಡಿಗೆಯ ಮಾಡಿದರೆ, ಗೋದಿಯ ಲೆಕ್ಕ ಕೊಡುವವರಾರು ?
೬೪ ಹಂಗಿನ ಹಾಲಿಂದ ಅಂಬಲಿಯ ತಿಳಿ ಲೇಸು.
೬೫ ಕಿಚ್ಚು ನುಂಗುವವ ನುಚ್ಚು ಬಿಟ್ಟಾನೆ?
೬೬ ಗಾಣಿಗನ ಮೇಲೆ ಸಿಟ್ಟು ಮಾಡಿ ಒಣ ರೊಟ್ಟಿ ತಿಂದರು.
೬೭ ಅಜ್ಜಿ ನೂತದ್ದೆಲ್ಲ ಮೊಮ್ಮಗನ ಉಡುದಾರಕ್ಕೆ.
೬೮ ಹಳ್ಳಿಯ ದೇವರ ತಲೆ ಹೊಡೆದು ಡಿಳ್ಳಿಯ ದೇವರ ಡೊಳ್ಳ ಬೆಳೆಸಿದರು.
೬೯ ಸಾವಿರ ಕುದುರೆಯ ಸರದಾರ ಮನೆ ಹೆಂಡತಿಯ ಕಾಸ್ತಾರ.
೭೦ ಬುಕ್ಕರಾಯ ಮೆಚ್ಚಿ ಬೆಕ್ಕಿನ ಮರಿ ಕೊಟ್ಟ.

೭೧ ಸಮಗಾರ ದೇವರಿಗೆ ಮೊಚ್ಚೆಯ ಪೆಟ್ಟು.

೭೨ ಅಕ್ಕಿಯವನ ಹಿಂದೆ ಕೋಳಿ.

೭೩ ನಾಲಗೆಯು ಕುಲವನರುಹುವುದು. (ಕುಲವ ನಾಲಿಗೆಯರುಹಿತು.)

೭೪ ಜಾತಿಹೀನರ ಮನೆಯ ಜ್ಯೋತಿ ತಾ ಹೀನವೇ ?

೭೫ ಆಳಾಗಿ ದುಡಿಯಬೇಕು, ಅರಸಾಗಿ ಉಣ್ಣಬೇಕು.

೭೬ ತಾಯಿಗಿಂತ ಬಂಧು ಇಲ್ಲ, ಉಪ್ಪಿಗಿಂತ ರುಚಿ ಇಲ್ಲ.

೭೭ ಊರಿಗೆ ಅರಸನಾದರೂ ತಂದೆಗೆ ಮಗ.

೭೮ ಧರ್ಮಹೀನರು ಚರ್ಮಕ್ಕಿಂತಲೂ ಕಡೆ.

೭೯ ಬೇಡಿಕೊಂಡು ತಿನ್ನಬಹುದು, ಕದ್ದುಕೊಂಡು ತಿನ್ನಬಾರದು.

೮೦ ಕೋಟಿ ವಿದ್ಯೆಗಿಂತ ಮೇಟಿವಿದ್ಯೆಯೇ ಮೇಲು.

೮೧ ಹೆಣ್ಣುಮಕ್ಕಳಿಗೆ ಗಂಡನೇ ದೇವರು.

೮೨ ಮನೆ ಮನೆ ತಿರುಗುವವಳಿಗೆ ಮಾತು ಬಾರದೇ ಬಿಟ್ಟೀತೆ?

೮೩ ಮಾತುಬಲ್ಲವ ಮಾಣಿಕ ತಂದ, ಮಾತನರಿಯದವ ಜಗಳ ತಂದ.

೮೪ ಸತ್ಯಕ್ಕೆ ಸಾವಿಲ್ಲ, ಸುಳ್ಳಿಗೆ ಸುಖವಿಲ್ಲ.

೮೫ ಕೋಳಿ ಕುಯ್ಯುವದಕ್ಕಿಂತ ಮರಿಗಳನ್ನು ಎಣಿಸಬಾರದೆ?

೮೬ ಧೈರ್ಯದಿಂದಿರುವವರಿಗೆ ದೈವದ ಸಹಾಯ.

೮೭ ಒಮ್ಮೆ ಮಾತನಾಡಿದರೆ ಹೋಯಿತು, ಒಮ್ಮೆ ಮುತ್ತು ಒಡೆದರೆ ಹೋಯಿತು.

೮೮ ಹನಿ ಹನಿ ಕೂಡಿದರೆ ಹಳ್ಳ, ತೆನಿ ತೆನಿ ಕೂಡಿದರೆ ರಾಶಿ.

೮೯ ಬೇಕಾದ ಮಾತು ಬೆಲ್ಲಕ್ಕಿಂತ ಸಿಹಿ, ಬೇಡಾದ ಮಾತು ಬೇವಿನಕಾಯಿಗಿಂತಲೂ ಕಹಿ.

೯೦ ಅಂಬಲಿ ಕುಡಿಯುವವನಿಗೆ, ಮೀಸೆ ಹಿಡಿಯುವವನೊಬ್ಬ.

೯೧ ಹರಹರ ಎನ್ನುವವರು ಹನ್ನೆರಡು ಮಂದಿ, ಕಿಚ್ಚಾಹಾಯುವವನು ಒಬ್ಬನೆ.

೯೨ ಅಂಗೀ ತೊಡಿಸಿದರೆ, ಮಂಗ ಮೆಚ್ಚೀತೆ ?

೯೩ ಅಂಗೈ ನೋಡುವದಕ್ಕೆ ಕನ್ನಡಿಯೇತಕ್ಕೆ ?

೯೪ ಜಗ ಅಗಳಾಡಿಸುವರ ಮುಂದೆ, ತಿಗ ಅಗಳಾಡಿಸಿದಂತೆ.

೯೫ ಬೆಕ್ಕಿಗೆ ಆಟವು, ಇಲಿಗೆ ಪ್ರಾಣಸಂಕಟವು.

೯೬ ಮುತ್ತಿಗಿಂತ ಹೊತ್ತು ಉತ್ತಮ.

೯೭ ಊಟಬಲ್ಲವನಿಗೆ ರೋಗವಿಲ್ಲ. ಮಾತು ಬಲ್ಲವನಿಗೆ ಜಗಳವಿಲ್ಲ.

೯೮ ಕಸ ತಿನ್ನುವದಕ್ಕಿಂತ, ತುಸು ತಿನ್ನುವದೇ ಲೇಸು.

೯೯ ಹಣ್ಣೆಲೆ ಉದುರುವಾಗ ಹಸರೆಲೆ ನಗುತ್ತಿತ್ತು.

೧೦೦ ಹೊತ್ತು ಬಂದಾಗ ನಡಕೊಳ್ಳುವವನೇ ಜಾಣನು.

೧೦೧ ಸತ್ತ ಎಮ್ಮೆಗೆ ಸೇರು ತುಪ್ಪ.

೧೦೨ ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿಯಿಸಿಸಿದೆ.

೧೦೩ ತೋಯಿಸಿಕೊಂಡ ಮೇಲೆ ಮಳೆಯ ಅಂಜಿಕೆ ಏತಕ್ಕೆ ?

೧೦೪ ಅಡಿಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು.

೧೦೫ ಜತೆಯಂತೆ ಮತಿ.

೧೦೬ ಮಳೆ ನಿಂತರೂ ಗಿಡದ ಹನಿ ನಿಲ್ಲಲಿಲ್ಲ.

೧೦೭ ಕತ್ತೆಯ ಹೊತ್ತುಕೊಂಡು ಡೊಂಬರವನ್ನು ನೋಡಲಿಕ್ಕೆ ಹೋದ ಹಾಗೆ.

೧೦೮ ಅಂಗಾಲಿಗೆ ಹೇಸಿಕೆಯಿಲ್ಲ, ಅಂತಃಕರಕ್ಕೆ ನಾಚಿಕೆ ಇಲ್ಲ.

೧೦೯ ಅಂಜಬೇಡವೆಂದರೆ ಆನೆಯಷ್ಟು ಕಸುವು.

## ಅನುಬಂಧ ೫

### ಜಾಣ್ನುಡಿಗಳು.

೧ ತನ್ನ ತಾನರಿದರೆ ತನ್ನರಿವೆ ಗುರು.

೨ ಹೆಂಗಸರ ಮಾನಕ್ಕೆ ಅವರ ಮೈಯಲ್ಲಿಯ ಕಸುವೂ ಕೈಯಲ್ಲಿಯ ಕಠಾರಿಯೂ ರಕ್ಷಾಯಂತ್ರಗಳಾಗಲಿ.

೩ ಉತ್ಸಾಹದ ಬೀಜವನ್ನು ಪ್ರೋತ್ಸಾಹದ ನೀರುಣಿಸಿ-ಸ್ವಪ್ರಯಾಸದ ಆಹಾರದಿಂದ ಅಂಕುರಿಸುವಂತೆ ಮಾಡಬೇಕು.

೪ ತಾತ್ವಿಕ ಧರ್ಮದ ಅಭಾವವೇ ನಮ್ಮ ಅಧೋಗತಿಗೆ ಕಾರಣ.

೫ ಸದ್ಗುಣಗಳೇ ಸಾಯುಜ್ಯದ ಸೋಪಾನಗಳು.

೬ ನಿನ್ನ ಕೋಮಲ ಅಂತಃಕರಣದ ಸೂಕ್ಷ್ಮ ಕೋಶದಿಂದ ಹೊರ ಹೊರಟ ಕೊನೆಯ ಕೂಗು ನನ್ನ ಅಂತಃಕರಣವನ್ನು ಕರಗಿಸಿ ಕದಲಿಸಿ ಬಿಟ್ಟಿದೆ.

೭ ತಿಳಿವಳಿಕೆಯು ತಪ್ಪನ್ನು ಕಂಡರೆ ತಿದ್ದಲೆತ್ನಿಸುತ್ತದೆ. ಬುದ್ಧಿಯ ಬೆಳಕಿಗೆ ಅಜ್ಞಾನದ ಅಂಧಕಾರವು ಸೇರುವದಿಲ್ಲ.

೮ ದುರ್ವರ್ತನದಿಂದ ದೊರಕಿಸಿದ ನಮ್ಮ ಅನುಭವವು ಸುತ್ತು ಮುತ್ತಲಿರುವ ನಾವಿರಾರು ಜನರ ಸೇವೆಯಲ್ಲಿ ಸಮರ್ಪಿತವಾಗ ಬೇಕು.

೯ ಸ್ಥಾನಕ್ಕೆ ತಕ್ಕ ಸಾಮರ್ಥ್ಯವು ಬೇಕು. ಇಲ್ಲವಾದರೆ ಮಂಗನ ಕೈಯಲ್ಲಿ ಮಾಣಿಕವಿತ್ತಂತೆ; ಅಥವಾ ಕಾಗೆಗೆ ಕಚೇರಿಯ ಅಧಿಕಾರ ಕೊಟ್ಟಂತೆ ಆಗುತ್ತದೆ.

೧೦ ತನ್ನ ರೂಪ ಲಾವಣ್ಯ ರಕ್ಷಣೆಗಾಗಿ ಕೂಸುಗಳನ್ನು ಕಾಪಾಡಲು ಹೇಸುವ ಹೆಣ್ಣಿನ ಸೌಂದರ್ಯವನ್ನು ತೆಗೆದುಕೊಂಡು ಮಾಡುವ ದೇನು? ಪ್ರೀತಿಯ ಪೀಠವೇ ಸೌಂದರ್ಯದ ಸಿಂಹಾಸನವಾಗ ಬೇಕು. ಇಲ್ಲವಾದರೆ ಸೌಂದರ್ಯವೊಂದು ಬೇವು, ಸಾವು.

೧೧ ಹುಳಿತುದರ ಅಳಿಯುವಿಕೆಗೂ, ಒಳಿತಾದುದರ ಬೆಳೆಯುವಿಕೆಗೂ, **ಜೀವನ**ವೆಂಬ ಹೆಸರು.

೧೨ ನಮ್ಮಲ್ಲಿಯ ದಾಸ್ಯವನ್ನು ದಬ್ಬಿ, ಮಾನವ್ಯವನ್ನು ಎಬ್ಬಿಸುವದೇ ನಿಜವಾದ **ಧರ್ಮಜೀವನ.**

೧೩ ಪರಾವಲಂಬನ ಬುದ್ಧಿಯಿದ್ದವರಿಗೆ ಪ್ರಗತಿಯೆಲ್ಲಿಂದ?

೧೪ ಓದು ಕಲಿ, ಕಲಿಯಲಿಕ್ಕೆ ಓದು, ಓದು ಕಲಿತು ಕಲಿಸು.

೧೫ ಕೋಪ ಬಂದಾಗ ಮನುಷ್ಯನು ಬಾಯಿ ಬಿಚ್ಚುತ್ತಾನೆ; ಕಣ್ಣು ಮುಚ್ಚು ತ್ತಾನೆ.

೧೬ ಸುಖಕ್ಕೆ ಸರಳತೆಯೇ ಸುಲಭ ಮಾರ್ಗ.

೧೭ ಈ ಜಗತ್ತಿನಲ್ಲಿ ಮಾತಿನ ಮಲ್ಲರಾದ ಮಿಥ್ಯಾಚಾರಿಗಳೂ ಮಹಾತ್ಮರೆನಿಸಿ ಕೊಳ್ಳುತ್ತಾರೆ.

೧೮ ತನು-ಮನಗಳ ಆರೋಗ್ಯಭರದಿಂದ ಅಂಗಾಂಗಗಳಿಂದಲೂ ಹೊಳೆ ಯುವ ಅನಿರ್ವಾಚ್ಯ ಚೇತನ ಸ್ವರೂಪಕ್ಕೇ **ಸೌಂದರ್ಯ**ವೆನ್ನಬೇಕು.

೧೯ ಪ್ರಜಾಸುಖದಲ್ಲಿಯೇ ವ್ಯಕ್ತಿಯ ಹಿತವಿದೆ ಎಂಬುದನ್ನು ಮರೆಯ ಬೇಡಿರಿ.

೨೦ ಮೂಢಭಕ್ತಿಯ ಪೊರೆಯನ್ನು ಒಡೆದು ಅದರೊಳಗಣ ಶಕ್ತಿಯನ್ನು

ಹೊರಪಡಿಸಿ ತಮಸ್ಸನ್ನು ನಾಶಪಡಿಸಲಿಕ್ಕೆ ಯೋಗ್ಯವಾದ ಗುಡುಗಿನಂತಹ ಗಂಭೀರವಾದ ವಾಗ್ಘೋರಣೆಯಲ್ಲಿ ಈತನಿಗೆ ಸರಿಯಾದವನ್ಯಾರೂ ಎಲ್ಲಿಯೂ ಇರಲಿಲ್ಲ.

೨೧ ನಮ್ಮ ದುಸ್ಥಿತಿಯು ನಮ್ಮ ಬುದ್ಧಿಯ ದೌರ್ಬಲ್ಯ, ದುರುಪಯೋಗಗಳಿಂದಲೇ ಬಂದಿದೆ.

೨೨ ಮೋಹನಿರೋಧಕ್ಕೆ ಬ್ರಹ್ಮಚರ್ಯವೇ ಸಾಧನ, ಹೊರತು ಮೋಹಿಸುವ ಪದಾರ್ಥದ ಪಾರತಂತ್ರ್ಯವಲ್ಲ.

೨೩ ತ್ಯಾಗದಲ್ಲಿಯೆ ಆಗಲಿ, ಭೋಗದಲ್ಲಿಯೆ ಆಗಲಿ, ತನಗಿಂತಲೂ ಸಂಘದ ಹಿತವನ್ನು ಪ್ರಧಾನವಾಗಿ ಇಟ್ಟುಕೊಳ್ಳತಕ್ಕದ್ದು.

೨೪ ವಿಧೇಯತೆ ಇಲ್ಲದವನು ವಿಭುವಾಗುವದು ಒಳಿತಲ್ಲ.

೨೫ ಉದ್ದೇಶವಿಲ್ಲದ ಜೀವನ ಚುಕ್ಕಾಣಿಯಿಲ್ಲದ ಹಡಗು.

೨೬ ಬುದ್ಧಿವಿಕಾಸವೇ ಮಾನವನ ಆದರ್ಶ; ಅದಕ್ಕಾಗಿ ನಿಗ್ರಹವೇ ಸಾಧನ.

೨೭ ಜೀವಿತದ ಲಕ್ಷಣ ಅಭಿವೃದ್ಧಿ—ಬೆಳವಣಿಗೆ. ಸೃಷ್ಟಿಯಲ್ಲೆಲ್ಲಿಯೂ ಪ್ರಗತಿರಹಿತವಾದ ಜೀವನವೇ ಇಲ್ಲ.

೨೮ ತತ್ವವು ಮಾಯವಾಗುತ್ತಲೇ ಹೆಣ ಪೂಜೆಯೂ ಹಣ ಪೂಜೆಯೂ ಪ್ರಬಲವಾಗುತ್ತದೆ.

೨೯ ಸಂಸ್ಕೃತಿಯ ಮುಖ್ಯ ಲಕ್ಷಣ ಪ್ರಗತಿ, ಹಿರಿಯರ ಪ್ರತಿಭೆಯನ್ನು ಕಿರಿಯರ ನಡೆ–ನುಡಿಗಳಲ್ಲಿ ಸೇರುವಂತೆ ಮಾಡುವದು ಸಂಸ್ಕೃತಿಯ ಧರ್ಮ.

೩೦ ಜನತೆಯ ಘನತೆಗೆ ಸಂಸ್ಕೃತಿಯ ವ್ಯಾಪಕತ್ವವೇ ಸಾಕ್ಷಿ.

೩೧ ಕಟ್ಟಿದ ಬುತ್ತಿ ಬಹುಕಾಲ ಬಾಳದು.

೩೨ ಕೆಲವರನ್ನು ಚಿರಕಾಲ ಮೋಸಗೊಳಿಸಬಹುದು; ಎಲ್ಲರನ್ನು ಕೆಲಕಾಲ ಮೋಸಗೊಳಿಸಬಹುದು; ಆದರೆ ಎಲ್ಲರನ್ನೂ ನಿರಂತರವಾಗಿಯೂ ಮೋಸಗೊಳಿಸುವದು ಸಾಧ್ಯವಿಲ್ಲ. —ಲಿಂಕನ್

೩೩ ಪುರುಷನ ಸಹಕಾರದಿಂದ ಪ್ರಕೃತಿಯನ್ನಾಳುವದೇ ಮಾನವನ ಗುರಿ—ಅದೆ ಪೌರುಷ.

೩೪ ಸಮಾಜವನ್ನು ವಂಚಿಸುವದರಿಂದ ವ್ಯಕ್ತಿಯೂ, ವ್ಯಕ್ತಿಯನ್ನು ದುರ್ಲಕ್ಷಿಸುವದರಿಂದ ಸಮಾಜವೂ ಹಾಳಾಗುತ್ತದೆ.

೩೫ ಸಾಹಿತ್ಯವು ಕಣ್ಣು ಕೊಟ್ಟಿದ್ದೂ ಉಂಟು; ಕಿತ್ತಿದ್ದೂ ಉಂಟು.

೩೬ ಜನ ಜಂಗುಳಿಯು ಒಮ್ಮೊಮ್ಮೆ ದನದ ಹಿಂಡಿಯಿದ್ದಂತೆ.

೩೭ ‘ಬೇಸಾಯವನ ಬೇಗ ತಾ ಸಾಯ.’

೩೮ ಹುತ್ತ ಬಡಿದರೆ ಹಾವು ಸಾಯಬಲ್ಲುದೇನಯ್ಯಾ? ಅಘೋರ ತಪವ ಮಾಡಿದರೇನು ಆತ್ಮ ಶುದ್ಧವಿಲ್ಲದನಕ ?

೩೯ ಹುಟ್ಟಿಸಿದ ದೇವ ತಾನೂಟ ಇಕ್ಕುವ ಎನುತ, ಕಷ್ಟ ಮಾಡದೆ ಬಾಯ ಬಿಟ್ಟರೇನಹುದು ?

೪೦ ಜ್ಞಾನೇಂದ್ರಿಯಗಳಿಂದ ಭುಕ್ತಿ ಬೆಳೆಯುವವರು ಜಾಣರು. ಕರ್ಮೇಂದ್ರಿಯಗಳಿಂದ ಮುಕ್ತಿ ಕೊಳ್ಳುವವರು ಕೋಣರು. ಮುಚ್ಚುವ ಇಚ್ಛೆಯಿಲ್ಲದೆ, ಬಿಚ್ಚುವ ಧೈರ್ಯವಿಲ್ಲದೆ ಪೆಚ್ಚಾಗಿ ಉಳಿಯುವವರು ಮೋಣರು. —ಆರ್. ವ್ಹಿ. ...

೪೧ ಚೆಲುವ ಬಲ್ಲುದು ಮನವ ಗೆಲುವುದನು. ಬಹಳ ವೇಳೆ ಎದೆಯ ತುಂಬುವದು ಭಕ್ತಿ ಭಾವದಿಂದ. —ಶ್ರೀನಿವಾಸ.

೪೨ ದಿಟದ ನುಡಿವುದು, ನುಡಿದಂತೆ ನಡೆಯುವುದು, ಇದುವೆ ಶೀಲ.
—ವಚನ.

೪೩ ಮತದ ಜಾಳಿಗೆಯಲ್ಲಿ ಬೀಳದೆ ಮತಿಯ ಏಳಿಗೆಯಲ್ಲಿ ಮೆರೆಯಿರಿ.
—ಮಂ. ಹರ್ಡೇಕರ.

೪೪ ಕಾಲೋಚಿತಕೆ ಐದಿದ ತೃಣವೇ ಪರ್ವತವಲ್ಲವೇ ? —ಸೋಮೇಶ್ವರ.

೪೫ ಸರಿಯೇ ಸೂರ್ಯಗೆ ಕೋಟಿ ಮಿಂಚುಪುಳುಗಳ್ ?

೪೬ ಬಲುಗರ್ವಂ ಕೊಲದಿರ್ಪುದೇ ?

೪೭ ಮುಡಿಯೇ ನಿರ್ಮಲಚಿತ್ತವೃತ್ತಿ !

೪೮ ಇರಿಯಲ್ಬಲ್ಲೊಡೆ ವೀರನಾಗು ! —ಸೋಮೇಶ್ವರ.

೪೯ ಕುಲಂ ಕುಲಮಲ್ತು, ಚಲಂ ಕುಲಂ ! —ಪಂಪ.

೫೦ ಮಾಡಿ ಅಭ್ಯಾಸವನು ಮೂಡುವದು ಜಗದಲ್ಲಿ. —ರಾಮದಾಸ

೫೧ ಕಮಲಿನಿಯು ಅರಿಯುವಳೆ ವಿಮಲ ಪರಿಮಳವನ್ನು ? —ತುಕಾರಾಮ.

೫೨ ಚೋರಗೆ ಚಂದ್ರೋದಯ ಸೊಗಸುವದೇ ?

೫೩ ಅಳಿಯುವುದು ಕಾಯವು ಉಳಿಯುವುದೊಂದೇ ಕೀರ್ತಿ.

೫೪ ಕೇಸರಿಗಂಜದ ಮೃಗ ಉಂಟೇ ?

೫೫ ಗಾಳಿಗೆ ಗಿರಿಯು ಅಲ್ಲಾಡಬಹುದೇ ?
೫೬ ಮಾನಹೀನನಿಗೆ ಅಭಿಮಾನವೇಕೆ ?
೫೭ ಕೆಚ್ಚೆದೆಯ ವೀರನಿಗೆ ನೆಚ್ಚು ತೊತ್ತಾಗುವಳು.
೫೮ ಕಣ್ಣಿಲ್ಲದಿಪ್ಪರಾ ಕಲ್ಪನೆಯು ಕುರುಪಹುದೆ ?
೫೯ ರೋಗಿಗಳಿಗಾವಗಂ ಸಿಹಿಸಿಹಿ ಕಹಿಯಂ ?.
೬೦ ಸುಲಭದಲಿ ದೊರೆತುದಕೆ ಬೆಲೆಯಿರದು ಎಂಬುವರು.
೬೧ ಬೆಂಕಿಗಲ್ಲದೆ ಲೋಹ ತಂಪಿಗದು ಮಣಿಯುವುದೇ ?
೬೨ ಇಂದ್ರಿಯಗಳನಿತುಮುಂ ಕಿವಿಯಾಗಲೆಳಸುವವು. —ಪುಟ್ಟಪ್ಪ.

## ಅನುಬಂಧ ೬.

## **ಕನ್ನಡ ಛಂದಸ್ಸು.**

### ೧. ಪೀಠಿಕೆ.

೧. **ಚರಿತ್ರೆ :**—ನಮ್ಮ ಕನ್ನಡ ಸಾಹಿತ್ಯದಂತೆ, ಛಂದಸ್ಸಿಗೂ ಒಂದು ಪ್ರಾಚೀನ ಪರಂಪರೆಯಿದೆ. ಕನ್ನಡ ಜನಾಂಗದ ಜೀವನದಲ್ಲಿ ಆಗಾಗ ಬದಲಾವಣೆಗಳಾದುದರಿಂದ ಅವರ ಪರಿಣಾಮವು ಅದರ ಸಾಹಿತ್ಯದ ಮೇಲೆ ಆದಂತೆ, ಛಂದಸ್ಸಿನ ಮೇಲೂ ಆಗದೆ ಇರಲಿಲ್ಲ. ಆ ವ್ಯತ್ಯಾಸವನ್ನನುಸರಿಸಿ, ನಮ್ಮ ಛಂದಸ್ಸಿನ ಈ ಸಂಕ್ಷಿಪ್ತ ಚರಿತ್ರೆಯಲ್ಲಿ ನಾಲ್ಕು ಕಾಲವಿಭಾಗಗಳನ್ನು ಕಲ್ಪಿಸಬಹುದು. ೧. ಪೂರ್ವಕಾಲ. ೨. ಸಂಸ್ಕೃತಕಾಲ. ೩. ಕ್ರಾಂತಿಕಾಲ ೪. ಹೊಸಕಾಲ. ಈ ಕಾಲಗಳಲ್ಲಿ ನಮ್ಮ ಛಂದಸ್ಸಿನ ಮೇಲೆ ಯಾವ ಯಾವ ಪರಿಣಾಮಗಳಾದವು ? ಅದರಲ್ಲಿ ಯಾವ ಬದಲುಗಳಾದವು ? ಸ್ವಲ್ಪದರಲ್ಲಿ ನೋಡುವ.

೨. **ಪೂರ್ವಕಾಲ:**— ಈ ಕಾಲದ ಆದಿಯು ಗೊತ್ತಿಲ್ಲ. ಅಂತವು ೮ನೆಯ ಶತಮಾನ. ಈ ಕಾಲದಲ್ಲಿ ಕನ್ನಡ ಛಂದಸ್ಸು ಪ್ರಚಾರದಲ್ಲಿತ್ತು. ಅದರ ಸ್ವರೂಪ ತಿಳಿಯುವಂತಿಲ್ಲ. ಅವು ಹೆಚ್ಚಾಗಿ ಜನಸಾಮಾನ್ಯರಲ್ಲಿ ಬಳಕೆಯಲ್ಲಿದ್ದ ಹಾಡಿನ ಸ್ವರೂಪವನ್ನು ತಾಳಿದ್ದವು. **ಬೀಸುವ ಹಾಡು, ಒನಕೆ ಹಾಡು, ಸುಗ್ಗಿಯ ಹಾಡು,** ಇತ್ಯಾದಿಗಳಲ್ಲಿ ಕಂಡುಬರುವ ರೀತಿಯು ಆಗ ಪ್ರಚಲಿತವಿರಬಹುದು; ಇತ್ತು ಎಂಬುದು ನಿಜ. ಯಾಕಂದರೆ ೭ನೆಯ ಶತಮಾನದ ಒಂದು ಶಾಸನವು ತ್ರಿಪದಿಯ ಪದ್ಯಗಳಿಂದ ಕೂಡಿದೆ. ಆದರೆ

ಅದು ಸಂಪೂರ್ಣವಾಗಿ ಗೊತ್ತಾಗಿಲ್ಲ. ಹೆಚ್ಚಾಗಿ ಈ ಕಾಲದ ಶಾಸನಗಳಲ್ಲಿ ಸಂಸ್ಕೃತ ವೃತ್ತಗಳು ಬಂದಿವೆ. ಆದರಿಂದ ಸಂಸ್ಕೃತ ಸಂಬಂಧದ ವರ್ಚಸ್ಸು ಈ ಕಾಲದಲ್ಲಿಯೇ ಪ್ರಾರಂಭವಾಗಿತ್ತೆನ್ನಬಹುದು.

೩. **ಸಂಸ್ಕೃತಕಾಲ:**—ಮುಂದೆ ಸಂಸ್ಕೃತ ಭಾಷೆಯ ಸಂಬಂಧವು ಹೆಚ್ಚು ನಿಕಟವಾದ ಮೂಲಕ ಕನ್ನಡದಲ್ಲಿ ಆ ವೃತ್ತಗಳು ಪ್ರಚಲಿತವಾದವು. ಸಂಸ್ಕೃತದ ಪರಿಣಾಮವು ಅತಿ ಪ್ರಬಲವಾಗಿ, ಬಳಕೆಯಲ್ಲಿರಬಹುದಾದ ಕನ್ನಡ ವೃತ್ತಗಳು ಮೂಲೆಗುಂಪಾದವು. ಮತ್ತು ಅಂದಿನ ಪಂಡಿತರ ಕಾವ್ಯಗಳಲ್ಲಿ ಸಂಸ್ಕೃತ ವೃತ್ತಗಳು ಮೆರೆಯತೊಡಗಿದವು. ಆಗಾಗ ಕನ್ನಡ ವೃತ್ತಗಳು ಬಂದರೂ ಅವು ವಿರಲ. ಇದು ೧೨ನೆಯ ಶತಮಾನದ ವರೆಗೆ ಸಾಗಿತು.

೪. **ಕ್ರಾಂತಿಕಾಲ:**—೧೨ನೆಯ ಶತಮಾನದಿಂದ ನಮ್ಮ ಛಂದಸ್ಸಿನಲ್ಲಿ ಮತ್ತೆ ಕ್ರಾಂತಿಯಾಯಿತು. ಸಂಸ್ಕೃತ ವೃತ್ತಗಳು ಕನ್ನಡ ಸೊಲ್ಲಿಗೆ ಸರಿಹೋಗುವದಿಲ್ಲ. ಆದುದರಿಂದ ಪೂರ್ವಪರಂಪರೆಯನ್ನು ಕಂಡು ಕಾಲಕ್ಕೆ ತಕ್ಕ ಮಾರ್ಪಾಟುಗಳನ್ನು ಮಾಡಿ, ನಮ್ಮ ಕನ್ನಡ ವೃತ್ತಗಳನ್ನೇ ಬಳಕೆಯಲ್ಲಿ ತರಬೇಕೆಂಬ ಬುದ್ಧಿಯು ಬಲಿಯಿತು. ಅದರ ಫಲವಾಗಿ **೧. ದ್ವಿಪದಿ ೨. ತ್ರಿಪದಿ ೩. ಷಟ್‌ಪದಿ ೪. ರಗಳೆ ೫. ಸಾಂಗತ್ಯ** ಇತ್ಯಾದಿ **ಅಚ್ಚಗನ್ನಡ** ವೃತ್ತಗಳು ಬಳಕೆಯಲ್ಲಿ ಬಂದವು.

೫. **ಹೊಸಕಾಲ:**— ಇಂದು ಮರಳಿ ಹೊಸಕಾಲ ಬಂದಿದೆ. ಅಂದು ಸಂಸ್ಕೃತ ಭಾಷೆಯ ಸಂಬಂಧವು ಬಂದಂತೆ, ಇಂದು ಇಂಗ್ಲಿಷ್ ಭಾಷೆಯ ಸಂಬಂಧವು ಬಂದಿದೆ. 'ಇಂಗ್ಲೀಷ್ ಛಂದಸ್ಸಿನ ಸ್ವಾತಂತ್ರ್ಯ -ವೈವಿಧ್ಯ-ಸೌಂದರ್ಯಗಳು' ನಮ್ಮಲ್ಲಿ ಹೊಸ ಪ್ರೇರಣೆಗಳನ್ನು ಹುಟ್ಟಿಸಿವೆ. ಹಳೆಯದರ ತಳಹದಿಯನ್ನು ಗಟ್ಟಿ ಮಾಡಿ ಅದರ ಮೇಲೆ ಹಳೆಯ ಸಾಧನಗಳನ್ನು ಉಪಯೋಗಿಸಿಯೇ ಇಂದು ಹೊಸ ಛಂದೋರಚನೆಯು ಮೈದಾಳಲಿದೆ. ಅದು ಹೇಗೆಂಬುವದನ್ನು ಮುಂದಿನ ವಿವರಣದಿಂದ ಕಾಣಬಹುದು. **ಮಾತ್ರೆ–ಗಣ–ಪ್ರಾಸ** ಎಲ್ಲವೂ ಅವೆ. ಆದರೆ ಅವುಗಳ **ಸಂಯೋಗದಲ್ಲಿ** ಭೇದ. **ಪದ್ಯಗಳು** ಅವೇ. ಆದರೆ ಅವುಗಳ **ರಚನೆಯಲ್ಲಿಯೂ, ಉದ್ದಳತೆಯಲ್ಲಿಯೂ** ಭೇದ; ಇಷ್ಟೇ.

೬. **ಪರಿಭಾಷೆ:**— ಪ್ರತಿಯೊಂದು ಶಾಸ್ತ್ರದಲ್ಲಿ ಅದಕ್ಕೇ ವಿಶೇಷವಾದ ಕೆಲ ಮಾತುಗಳು ಇರುವವು. ಅವನ್ನು ಹೇಳಲು ಒಂದು ಭಾಷೆಯಿರುವದು.

ಅವಕ್ಕೆ '**ಪರಿಭಾಷೆ**' ಎನ್ನುವರು. ಈ 'ಪರಿಭಾಷೆ'ಯನ್ನರಿಯದೆ ಆ ಶಾಸ್ತ್ರದ ಪರಿಚಯವಾಗುವಂತಿಲ್ಲ. ಆದುದರಿಂದ **ಛಂದಃಶಾಸ್ತ್ರದಲ್ಲಿ** ಕೆಲ ಮಹತ್ವದ '**ಪಾರಿಭಾಷಿಕ**' ಶಬ್ದಗಳ ಅರ್ಥವನ್ನು ಮುಂದೆ ಕಾಣಿಸಿರುವದು.

(i) **ಪದ್ಯ:**— ಕವಿತೆಯಲ್ಲಿಯ ನಾಲುಗಳ ಗುಂಪು.

(ii) **ಪಾದ:**— ಪದ್ಯಗಳಲ್ಲಿಯ ನಾಲುಗಳೇ **ಪಾದಗಳು** ಇಲ್ಲವೆ **ಚರಣಗಳು.**

(iii) **ಗಣ:**— ಪ್ರತಿಪಾದದಲ್ಲಿಯ **ವರ್ಣಗಳ** ಇಲ್ಲವೆ ಮಾತ್ರೆಗಳ ಗುಂಪು.

(iv) **ವರ್ಣ:**— ಅಂದರೆ ಅಕ್ಷರ–ಅದು **ಗುರು** (ದೀರ್ಘ) ಇರಬಹುದು; **ಲಘು** (ಹ್ರಸ್ವ) ಇರಬಹುದು.

(v) **ಗುರು:**— ದೀರ್ಘಸ್ವರ –ದೀರ್ಘಸ್ವರದಿಂದ ಕೂಡಿದ ವ್ಯಂಜನ, ಒತ್ತಕ್ಷರದ ಹಿಂದಿನ ಹ್ರಸ್ವ ಅಕ್ಷರ –ಅನುಸ್ವಾರ ಅಥವಾ ವಿಸರ್ಗಗಳಿಂದ ಕೂಡಿದ ಅಕ್ಷರ. ಇದರ ಸಂಕೇತ(—)

(vi) **ಲಘು:**— ಉಳಿದ ಹ್ರಸ್ವ ಅಕ್ಷರಗಳು; ಇದರ ಸಂಕೇತ(ᴗ)

(vii) **ಮಾತ್ರೆ:**— ಒಂದು **ಹ್ರಸ್ವ** ಅಕ್ಷರವನ್ನು ಉಚ್ಚರಿಸಲಿಕ್ಕೆ ಬೇಕಾಗುವ ಕಾಲಕ್ಕೆ '**ಮಾತ್ರೆ**' ಎನ್ನುವರು. **ದೀರ್ಘಕ್ಕೆ** ಎರಡು ಮಾತ್ರೆಗಳು. **ಪ್ಲುತಕ್ಕೆ**– (ದೀರ್ಘವನ್ನೇ ಸ್ವಲ್ಪ ಎಳೆದರೆ) ಮೂರು ಮಾತ್ರೆಗಳು.

(viii) **ಪ್ರಾಸ:**— ಇದು ಎರಡು ವಿಧ.

೧. **ಆದಿಪ್ರಾಸ:**—ಪದ್ಯದ ಪ್ರತಿಪಾದದಲ್ಲಿ ಮೊದಲನೆಯ, ಎರಡನೆಯ, ಸ್ವರಗಳ ನಡುವೆ ಒಂದೇ ಬಗೆಯ ವ್ಯಂಜನವು ಬಂದರೆ ಅದಕ್ಕೆ ಈ ಹೆಸರು.

೨. **ಅಂತ್ಯಪ್ರಾಸ:**—ಅದು ಪ್ರತಿಪಾದದ ಕೊನೆಗೆ ಬಂದರೆ ಅದಕ್ಕೆ **ಅಂತ್ಯಪ್ರಾಸ**ವೆಂಬ ಅಭಿಧಾನವು.

(ix) **ಪ್ರಸ್ತಾರ:**—ಪ್ರತಿಯೊಂದು ಪದದಲ್ಲಿಯ ಗಣಗಳನ್ನು ಅವುಗಳಲ್ಲಿಯ **ಗುರು–ಲಘು**ಗಳನ್ನು ಇಲ್ಲವೆ **ಮಾತ್ರೆ**ಗಳನ್ನು ಕಂಡುಹಿಡಿಯುವ ರೀತಿಗೆ ಈ ಹೆಸರು ಬಂದಿರುವದು. ಹಿಂದೆ ಅವಕ್ಕೆ ಬೇರೆ ಅರ್ಥವಿತ್ತು.

(x) **ವೃತ್ತ:**— ಗಣಗಳಿಂದ ಕೂಡಿದ **ಪದಪದ್ಯಗಳಿಗೆ** ಈ ಸಂಜ್ಞೆ.

## ೨. ಸಂಸ್ಕೃತ ವೃತ್ತಗಳು.

**೧ ಮೊದಲು ಮಾತು:**— ನಾವಿಲ್ಲಿ ಎಲ್ಲ ಸಂಸ್ಕೃತ ವೃತ್ತಗಳ ಪರಿಚಯವನ್ನು ಮಾಡಿಕೊಡಲು ಬರುವುದಿಲ್ಲ. ಅವುಗಳ ಅವಶ್ಯಕತೆಯೂ ಇಲ್ಲ. ಕನ್ನಡದಲ್ಲಿ ವಿಶೇಷವಾಗಿ ಬಳಕೆಯಲ್ಲಿರುವ ನಾಲ್ಕಾರು ವೃತ್ತಗಳನ್ನಷ್ಟೆ ವಿಚಾರಿಸುವೆವು. **ಶಾರ್ದೂಲ-ಮತ್ತೇಭ ವಿಕ್ರೀಡಿತಗಳೂ, ಉತ್ಪಲ-ಚಂಪಕಮಾಲೆಗಳೂ ಸ್ರಗ್ಧರೆ-ಮಹಾಸ್ರಗ್ಧರೆಗಳೂ, 'ಖ್ಯಾತ ಕರ್ಣಾಟಕಂ'** ಅಂದರೆ ಕನ್ನಡದಲ್ಲಿ ಪ್ರಸಿದ್ಧವಾದವುಗಳು ಎಂದು **ನಾಗವರ್ಮನು** ಹೇಳಿರುವನು. ಆದುದರಿಂದ ಅವುಗಳ ರಚನೆಯನ್ನಷ್ಟು ಅರಿತುಕೊಂಡರೆ ಸಾಕು.

**೨ ಸಾಮಾನ್ಯ ಪರಿಚಯ:**— ಇವೆಲ್ಲ ನಾಲ್ಕು ಸಾಲುಗಳಿಂದ ಕೂಡಿದ ವೃತ್ತಗಳು. ಪ್ರತಿಪಾದದಲ್ಲಿ **ಮೂರು ಮೂರು** ಅಕ್ಷರಗಳ **ಗಣ**ಗಳನ್ನು ಮಾಡಿ, ಆ ಗಣಗಳಿಂದ ಆ ಪಾದಗಳನ್ನು ಅಳೆಯುವರು. ಇಲ್ಲಿ ಬರುವ ಗಣಗಳು **ಅಕ್ಷರಗಣಗಳು.** ಪ್ರತಿ**ಗಣದಲ್ಲಿಯ ಗುರು-ಲಘು**ಗಳನ್ನು ಕ್ರಮದಿಂದ ಬದಲಿಸಿದರೆ **ಗಣಗಳಲ್ಲಿ** ಎಂಟು ಪ್ರಕಾರಗಳು ಆಗುವದುಂಟು. ಈ ಪ್ರಕಾರಗಳನ್ನು ಕಂಡುಹಿಡಿಯುವ ರೀತಿಗೆ ಇಂದಿನವರು **'ಪ್ರಸ್ತಾರ ಹಾಕುವದು'** ಎಂದೆನ್ನುವರು. ಪ್ರತಿ ಒಂದು ಪ್ರಕಾರಕ್ಕೆ ಒಂದು **ಸಂಕೇತವನ್ನೂ** ಒಂದು **ಹೆಸರನ್ನೂ** ಕೊಟ್ಟು ಅವುಗಳನ್ನು ಗುರುತಿಸಲು ಕೆಲ ನಿಯಮಗಳನ್ನು ಮಾಡಿರುವರು. ಮೊದಲು ಒಂದು ಪದ್ಯದ ಪ್ರತಿಪಾದದಲ್ಲಿಯ ಗಣಗಳ ಪ್ರಕಾರಗಳನ್ನು, ಸಂಖ್ಯೆಯನ್ನು ನಿಶ್ಚೈಸಿರುವರು. ಅವನ್ನು ಕಂಡು ಆಯಾ ಪದ್ಯದ ವೃತ್ತವನ್ನು ಅರಿಯತಕ್ಕದ್ದು.

**೩ ಗಣಗಳ ಪ್ರಕಾರ:**— ಮೂರು ಅಕ್ಷರಗಳ ಗಣಗಳಲ್ಲಿ **ಗುರು-ಲಘುಗಳ** ವಿಧವಿಧದ ಸಂಯೋಗದಿಂದ ಬೇರೆ ಬೇರೆ ಪ್ರಕಾರಗಳು ಉಂಟಾಗುವವು ಎಂಬುದನ್ನು ಮೇಲೆ ಹೇಳಿದೆ. ಗುರು-ಲಘುಗಳ ಚಿಹ್ನೆಗಳನ್ನು ಉಪಯೋಗಿಸಿ ಈ ಪ್ರಕಾರಗಳನ್ನೂ, ಅವುಗಳ ಹೆಸರುಗಳನ್ನೂ ಕೆಳಗೆ ಕಾಣಿಸಿರುವೆವು.

| ಕ್ರ. | ವಿವರಣೆ | ಉದಾಹರಣೆ | ಪ್ರಸ್ತಾರ | ಸಂಕೇತ | ಹೆಸರು |
|---|---|---|---|---|---|
| ೧ | ಮೂರು ಗುರು | ಭೂಪಾಲಾ | — — — | ಮ | ಪೃಥಿವಿ |
| ೨ | ಆದಿ ಲಘು | ನೃಪಾಲಾ | ∪ — — | ಯ | ಅಪ |
| ೩ | ಮಧ್ಯ ಲಘು | ಬಾಲಿಕಾ | — ∪ — | ರ | ತೇಜ |
| ೪ | ಅಂತ್ಯ ಗುರು | ಕಮಲಾ | ∪ ∪ — | ಸ | ವಾಯು |
| ೫ | ಅಂತ್ಯ ಲಘು | ಭೂಪಾಲ | — — ∪ | ತ | ಆಕಾಶ |
| ೬ | ಮಧ್ಯ ಗುರು | ಕಪೋಲ | ∪ — ∪ | ಜ | ಸೂರ್ಯ |
| ೭ | ಆದಿ ಗುರು | ಪಾಲಕ | — ∪ ∪ | ಭ | ಚಂದ್ರ |
| ೮ | ಮೂರು ಲಘು | ಕಮಲ | ∪ ∪ ∪ | ನ | ಸ್ವರ್ಗ |

೪ **ಗುರುತಿಸುವ ಯುಕ್ತಿ :—** ಈ '**ಮ ಯ ರ ಸ ತ ಜ ಭ ನ**' ಗಳನ್ನು ಗುರುತಿಸಿ ಅವನ್ನು ಜ್ಞಾಪಕದಲ್ಲಿಡಲು ಬೇರೆ ಬೇರೆ ಹಂಚಿಕೆಗಳನ್ನು ಮಾಡಿರುವರು. ಅವುಗಳಲ್ಲಿ ಅತಿ ಸುಲಭವಾದುದನ್ನು ಮುಂದೆ ಕಾಣಿಸಿರುವೆವು. '**ಯ ಮಾ ತಾ ರಾ ಜ ಭಾ ನ ಸ ಲ ಗಂ**' ಎಂಬುದೊಂದು ಸೂತ್ರ. ಅದರ ಸಂಕೇತಗಳ ಪರಿಚಯವನ್ನು ಮಾಡಿಕೊಂಡು, ಅವನ್ನಷ್ಟು ಲಕ್ಷ್ಯದಲ್ಲಿಟ್ಟರೆ '**ಮಯರಸತಜಭನ**' ಗಳಿಂದ ಸೂಚಿತವಾದ ಗಣದ ಪ್ರಕಾರವು ಸಹಜವಾಗಿ ತಿಳಿಯುವದು. ಇದರಲ್ಲಿಯ ಯಾವವೇ ಮೂರು ಅಕ್ಷರಗಳನ್ನು ತೆಗೆದುಕೊಂಡರೆ ಅವು ಅವುಗಳಲ್ಲಿಯ ಮೊದಲನೆಯ ಅಕ್ಷರ ಸಂಕೇತದ ಗಣದಲ್ಲಿಯ **ಗುರು-ಲಘು**ಗಳನ್ನು ಹೇಳುವವು; ನೋಡಿ.

**ಯ**ಮಾತಾ = (∪ — —) = **ಯ** ಜ ಭಾನ=(∪ — ∪) = **ಜ**

**ಮಾ**ತಾರಾ = (— — —) = **ಮ** ಭಾ ನಸ = (— ∪ ∪ = **ಭ**

**ತಾ**ರಾಜ = (— — ∪) = **ತ** **ನ**ಸಲ = (∪ ∪ ∪) = **ನ**

**ರಾ**ಜಭಾ = (— ∪ —) = **ರ** **ಸ**ಲಗಂ = (∪ ∪ —) = **ಸ**

ಮುಂದಿನ ಸಂಸ್ಕೃತ ವೃತ್ತಗಳ ಪರಿಚಯವನ್ನು ಈ ಸಂಕೇತ ಚಿಹ್ನೆ

ಗಳನ್ನುಪಯೋಗಿಸಿದ ಕೆಲ ಸೂತ್ರಗಳಿಂದ ಮಾಡಿಕೊಟ್ಟಿರುವರು. ಅದೇ ವೃತ್ತದಲ್ಲಿರುವ ಅವನ್ನು ಮುಂದೆ ಕೊಟ್ಟಿರುವೆ.

**೫ ಶಾರ್ದೂಲ ವಿಕ್ರೀಡಿತ:—೧೯ ಅಕ್ಷರಗಳು.**

**ಸೂತ್ರ:—** ಕಣ್ಗೊಪ್ಪಲ್ **ಮ-ಸ-ಜಂ-ಸ-ತಂ-ತ-ಗ**-ಮುಮಾ **ಶಾರ್ದೂಲ** ವಿಕ್ರೀಡಿತಂ.

ಇವರಲ್ಲಿ **ಮ-ಸ-ಜ-ಸ-ತ-ತ-ಗ** (ಗುರು)

| — — — | ∪ ∪ — | ∪ — ∪ | ∪ ∪ — | — — ∪ | — — ∪ | — ||

(ಈ ಕ್ರಮದಿಂದ ಇವರಲ್ಲಿ ಗಣಗಳು ಬರುವವು. ∴ ಈ ಬಗೆಯ ಗಣಗಳಿಂದ ಕೂಡಿದ ವೃತ್ತವು **ಶಾರ್ದೂಲ**ವಿಕ್ರೀಡಿತ.)

**೬ ಮತ್ತೇಭವಿಕ್ರೀಡಿತ :— ೨೦ ಅಕ್ಷರಗಳು.**

**ಸೂತ್ರ :— ಸ-ಭ-ರಂ-ನಂ-ಮ-ಯ-ಲಂ-ಗ-** ಮಂ ಬಗೆಗೊಳಲ್ **ಮತ್ತೇಭ**ವಿಕ್ರೀಡಿತಂ.

| ∪ ∪ — | — ∪ ∪ | — ∪ — | ∪ ∪ ∪ | — — — | ∪ — — | ∪ | — |

**೭ ಉತ್ಪಲಮಾಲೆ :— ೨೦ ಅಕ್ಷರಗಳು.**

**ಸೂತ್ರ:— ಉತ್ಪಲಮಾಲೆ**ಯುಪ್ಪುದು **ಭ ರಂ ನ ಭ ಭಂ ರ ಲಗಂ** ನೆಗಳ್ದಿರಲ್.

| — ∪ ∪ | — ∪ — | ∪ ∪ ∪ | — ∪ ∪ | — ∪ ∪ | — ∪ — | ∪ — |

**೮ ಚಂಪಕಮಾಲೆ :—೨೧ ಅಕ್ಷರಗಳು.**

**ಸೂತ್ರ —ನ-ಜ-ಭ-ಜ-ಜಂ-ಜ-ರಂ** ಬಗೆಗೊಳುತ್ತಿರೆ **ಚಂಪಕಮಾಲೆ**ಯೆಂದಪರ್.

| ∪ ∪ ∪ | ∪ — ∪ | — ∪ ∪ | ∪ — ∪ | ∪ — ∪ | ∪ — ∪ | — ∪ — |

**೯ ಸ್ರಗ್ಧರಾ :—೨೧ ಅಕ್ಷರಗಳು.**

**ಸೂತ್ರ:—**ತೋರಲ್ **ಮಂ-ರಂ-ಭ-ನಂ-ಮೂಯಗಣ**-ಮುಮದೆ ತಾಂ **ಸ್ರಗ್ಧರಾ**ವೃತ್ತಮಕ್ಕುಂ.

| — — — | — ∪ — | — ∪ ∪ | ∪ ∪ ∪ | ∪ — — | ∪ — — | ∪ — — |

**೧೦ ಮಹಾಸ್ರಗ್ಧರಾ:—೨೨ ಅಕ್ಷರಗಳು.**

**ಸೂತ್ರ:** —**ಸ-ತ-ತಂ-ನಂ-ಸಂ-ರ-ರಂ-ಗಂ**-ನೆರೆದೆಸೆಯೆ **ಮಹಾಸ್ರಗ್ಧರಾ** ವೃತ್ತಮಕ್ಕುಂ.

। ∪ ∪ – । – – ∪ । – – ∪ । ∪ ∪ ∪ । ∪ ∪ – । – ∪ – । – ∪ – । –

ಈ ಗಣಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಲು **ಶಾರ್ದೂಲ, ಉತ್ಪಲ, ಸ್ರಗ್ಧರೆ,** ಇವುಗಳಲ್ಲಿಯ ಮೊದಲನೆಯ **ಗುರುವಿನ** ಸ್ಥಲದಲ್ಲಿ ಎರಡು **ಲಘು** ಗಳನ್ನಿಟ್ಟರೆ ಅನುಕ್ರಮವಾಗಿ **ಮತ್ತೇಭ, ಚಂಪಕ, ಮಹಾಸ್ರಗ್ಧರೆ** ಇವುಗಳ ಗಣಗಳು ಸಿದ್ಧವಾಗುವೆಂಬುದು ಗೊತ್ತಾಗುವದು.

## ೩ ಕನ್ನಡ ಹಳೆಯ ವೃತ್ತಗಳು.

೧ **ಮೊದಲು ಮಾತು**—ಸಂಸ್ಕೃತ ವೃತ್ತಗಳು **ಅಕ್ಷರಗಣವನ್ನು** ಆಶ್ರಯಿಸಿದಂತೆ ಕನ್ನಡ ವೃತ್ತಗಳು **ಮಾತ್ರಾಗಣವನ್ನು** ಆಶ್ರಯಿಸಿವೆ. ಇವುಗಳಲ್ಲಿ **೩–೪–೫ ಮಾತ್ರೆಗಳ** ಗಣಗಳಿರುವವು. ಪದ್ಯಗಳು ೨–೩–೪–೬ ಸಾಲುಗಳಿಂದ ಕೂಡಿದವುಗಳು. ಪ್ರತಿನಾಲಿನಲ್ಲಿಯ **ಗಣಸಂಖ್ಯೆಯಲ್ಲಿಯೂ, ಮಾತ್ರಾಸಂಖ್ಯೆಯಲ್ಲಿಯೂ** ಒಂದು ಬಗೆಯ ನಿಯಮಬದ್ಧತೆಯಿರುವದು. ಪ್ರತಿಪದ್ಯದಲ್ಲಿಯ ಸಾಲುಗಳನ್ನು ಅನುಲಕ್ಷಿಸಿ ನಾವು ಮುಂದಿನ ಲಕ್ಷಣಗಳನ್ನು ಹೇಳಿರುವೆವು.

೨ **ದ್ವಿಪದಿ:**—ಇದು **ಎರಡು** ಸಾಲುಗಳಿಂದ ಕೂಡಿದ ಪದ್ಯ.

(i) ಪ್ರತಿಪಾದದಲ್ಲಿ ೫ ಮಾತ್ರೆಗಳ ೩ ಗಣಗಳು + ೪ ಮಾತ್ರೆಯ ೧ ಗಣವು ಇರುವವು. ಇದರ ಇನ್ನೊಂದು ಬಗೆಯಿದೆ.

(ii) ಅದರ ಪ್ರತಿಪಾದದಲ್ಲಿ ೩ । ೪ । ೩ । ೪ । ೩ । ೪ । ೩ + ೧ ಗುರು ಈ ಬಗೆಯ ೭ ಗಣಗಳು ಇರುವವು. ೩ । ೪ ಇವು ಮಾತ್ರೆಗಳು.

(iii) ಆದಿ–ಅಂತ್ಯಗಳಲ್ಲಿ ಪ್ರಾಸವಿರುವದು.

೩ **ತ್ರಿಪದಿ**–ಇದು **ಮೂರು** ಪಾದಗಳ ಪದ್ಯ. ಇದರಲ್ಲಿಯ ಮಾತ್ರೆಗಳು ಕೆಳಗಿನಂತೆ.

**೧ನೆಯ ಸಾಲು:**— ೫ । ೫ । * (ಇಲ್ಲಿ ಒಳಪ್ರಾಸ) ೫ । ೫ ।

**೨ನೆಯ ,,** :— ೫ । ೩ । ೪ +೧ । ೫ ।

**೩ನೆಯ ,,** :— ೫ । ೩ । ೪+೧ ।

೪ **ಚೌಪದಿ:**— ಇದರಲ್ಲಿ ನಾಲ್ಕು ಸಮನಾದ ಪಾದಗಳಿರುವವು.

(i) ಪ್ರತಿಪಾದದಲ್ಲಿ ೫ ಮಾತ್ರೆಯ ೩ ಗಣ+೪ ಮಾತ್ರೆಯ ೧ ಗಣ. ಅಥವಾ (ii) ಮೊದಲಿನ ಮೂರು ಪಾದಗಳಲ್ಲಿ ೩ । ೪ । ೩ । ೪ ಮತ್ತು ಕೊನೆಯ ಪಾದದಲ್ಲಿ ೩ । ೪ । ೩ । ೧ ಗುರು ।

(iii) ಆದಿಪ್ರಾಸ.

೫ **ಕಂದ** :—ಇದೊಂದು **ನಾಲ್ಕು** ಸಾಲಿನ ಪದ್ಯ. ೧-೩ ಮತ್ತು ೨-೪ ಈ ಸಾಲುಗಳು ಸಮಾನವಾದವುಗಳು. ಅವುಗಳಲ್ಲಿ ಕೆಳಗಿನಂತೆ ಗಣಗಳಿರುವವು.

**೧ನೆಯ ಪಾದದಲ್ಲಿ** ೪ ಮಾತ್ರೆಯ ೩ ಗಣಗಳು.

**೨ " "** ೪ " ೫ ಗಣಗಳು.

ವಿಷಮ ಸ್ಥಾನದಲ್ಲಿ 'ಜ' ಗಣ (ᑌ-ᑌ) ಬರಬಾರದು. **೬ನೆಯ** ಸ್ಥಾನದಲ್ಲಿ (ᑌ- ᑌ) (ᑌᑌᑌᑌ) ಈ ಎರಡರಲ್ಲಿ ಒಂದು ಗಣವು ಬರಲೇಬೇಕು. **೮ನೆಯ** ಸ್ಥಾನದ ಕೊನೆಗೆ ಗುರುವಿರಬೇಕು. ಇದೇ ರೀತಿ ೩-೪ ಪಾದಗಳಲ್ಲಿಯ ಗಣಗಳದು. **ಆದಿಪ್ರಾಸವು** ಅವಶ್ಯ.

೬ **ಸಾಂಗತ್ಯ** :— ಇದರಲ್ಲಿಯೂ **ನಾಲ್ಕು** ಪಾದಗಳು.

**೧ನೆಯ—೩ನೆಯ ಪಾದಗಳಲ್ಲಿ** ೫ ಮಾತ್ರೆಯ ೪ ಗಣಗಳು.

**೨ " —೪ "** " ೫ ಮಾತ್ರೆಯ ೨ ಗಣಗಳು + ೪ ಮಾತ್ರೆಯ ಒಂದು ಗಣ.

**ಆದಿಪ್ರಾಸವು** ಇರತಕ್ಕದ್ದು.

೭ **ಷಟ್ಪದಿ** :— **ಷಟ್‌ಪದಿ** ಅಂದರೆ **ಆರು** ಪಾದಗಳುಳ್ಳ ವೃತ್ತ. (**ಷಟ್=ಆರು**). ಇವುಗಳಲ್ಲಿಯ ೧-೨-೪-೫ ಈ ಪಾದಗಳ ಗಣಗಳು ಸಮಾನವಾದವುಗಳು. (**ಕಿರಿಯ ಪಾದಗಳು**). ೩-೬ನೆಯ ಪಾದಗಳಲ್ಲಿ (**ಹಿರಿಯಪಾದಗಳು**) ಕಿರಿಯ ಪಾದಗಳ ಒಂದೂವರೆಯಷ್ಟು ಗಣಗಳೂ ಕೊನೆಗೊಂದು ಗುರುವೂ ಇರುವದು. ಇವು **೧. ಶರ, ೨. ಕುಸುಮ, ೩. ಭೋಗ, ೪. ಭಾಮಿನಿ, ೫. ಪರಿವರ್ಧಿನಿ, ೬. ವಾರ್ಧಕ** ಎಂದು **ಆರು ತೆರ.**

೧ **ಶರ** :— **ಕಿರಿಯ** ಪಾದ—೪ ಮಾತ್ರೆಯ ೨ ಗಣಗಳು.
**ಹಿರಿಯ** ಪಾದ—೪ ಮಾತ್ರೆಯ ೩ ಗಣಗಳು + ೧ ಗುರು

೨ **ಕುಸುಮ** :— **ಕಿರಿಯ** ಪಾದ—೫ ಮಾತ್ರೆಯ ೨ ಗಣ.
**ಹಿರಿಯ** ಪಾದ—೫ ಮಾತ್ರೆಯ ೩ ಗಣ + ೧ ಗುರು.

೩ **ಭೋಗ** :— **ಕಿರಿಯ** ಪಾದ—೩ ಮಾತ್ರೆಯ ೪ ಗಣಗಳು.
**ಹಿರಿಯ** ಪಾದ—೩ ಮಾತ್ರೆಯ ೬ ಗಣಗಳು + ೧ ಗುರು

೪ ಭಾಮಿನಿ :— ಕಿ. ಪಾದ—೩ | ೪ | ೩ | ೪
ಹಿ. ಪಾದ—೩ | ೪ | ೩ | ೪ | ೩ | ೪ | ಗು.

೫ ಪರಿವರ್ಧಿನಿ :— ಕಿ. ಪಾದ—೪ ಮಾತ್ರೆಯ ೪ ಗಣಗಳು.
ಹಿ. ಪಾದ—೪ ಮಾತ್ರೆಯ ೬ ಗಣಗಳು + ಗುರು.

೬ ವಾರ್ಧಕ :— ಕಿ. ಪಾದ—೫ ಮಾತ್ರೆಯ ೪ ಗಣಗಳು.
ಹಿ. ಪಾದ—೫ ಮಾತ್ರೆಯ ೬ ಗಣಗಳು + ಗುರು.

ಇವೆಲ್ಲವುಗಳಲ್ಲಿ ಆದಿಪ್ರಾಸ ಬೇಕು.

**೮ ರಗಳೆ:**— ಇದು ಅನೇಕ ಸಾಲುಗಳ ವೃತ್ತ. ಇಷ್ಟೇ ಸಾಲುಗಳೆಂಬ ನಿಯಮವಿಲ್ಲ. ಆದರೆ ಸಾಲುಗಳ ಸಂಖ್ಯೆ ಸಮ ಇರಬೇಕು. ಪ್ರತಿ ಪಾದದಲ್ಲಿ ಮಾತ್ರಾಗಣಗಳು ಸಮಾನಸಮಾನವಾಗಿರುವುವು. **ಆದಿಪ್ರಾಸವಿಲ್ಲ, ಅಂತ್ಯಪ್ರಾಸಬೇಕು.** ಅದು ಎರಡೆರಡು ಸಾಲುಗಳಲ್ಲಿರುವದು. ಇವುಗಳಲ್ಲಿ ಮೂರು ಬಗೆಗಳು ಮುಖ್ಯ. **೧. ಉತ್ಸಾಹ, ೨. ಮಂದಾನಿಲ, ೩. ಲಲಿತ.**

**೧ ಉತ್ಸಾಹ :**— ಪ್ರತಿಪಾದಕ್ಕೆ ೨ ಮಾತ್ರೆಯ ೪ ಗಣಗಳು ಅಥವಾ
,, ೩ ,, ೩ ಗಣ + ೧ ಗುರು.

**೨ ಮಂದಾನಿಲ :**— ಪ್ರತಿಪಾದಕ್ಕೆ ೪ ,, ೪ ಗಣಗಳು ಅಥವಾ
,, ೩ | ೫ | ೩ | ೫

**೩ ಲಲಿತ :**— ಪ್ರತಿಪಾದಕ್ಕೆ ೫ ಮಾತ್ರೆಯ ೪ ಗಣಗಳು.

**೯. ಹಾಡುಗಳು :** — ಇವುಗಳಲ್ಲಿ **ದಾಸರ** ಮತ್ತು **ಶರಣರ** ಪದಗಳು ಬರುವವು. ಈ ಪದಗಳಲ್ಲಿ ಸಾಮಾನ್ಯವಾಗಿ (i) **ಒಂದು ಪಲ್ಲವಿ** (ಒಂದು ಸಾಲು), (ii) **ಅನುಪಲ್ಲವಿ** (ಒಂದು ಅಥವಾ ಎರಡು ಸಾಲು), (iii) **ಕೆಲನುಡಿಗಳು** (ನಾಲ್ಕು ನಾಲಿನವು) ಇರುವವು. ಇವುಗಳಲ್ಲಿಯೂ ೩–೪–೫ ಮಾತ್ರೆಗಳ ಕೆಲ ಗಣಗಳು ಬರುವವು. ಅವನ್ನು ಆಯಾ ಕೀರ್ತನೆಗಳನ್ನು ಕಂಡೇ ತಿಳಿದುಕೊಳ್ಳಬೇಕು.

**ಸೂಚನೆ :** — ಮೇಲಿನ ವೃತ್ತಗಳಲ್ಲಿ ಹಾಡುವಾಗ (ವಿಶೇಷತಃ ಸಾಂಗತ್ಯದಲ್ಲಿ) ಅಕ್ಷರಗಳನ್ನು **ಹಿಗ್ಗಿಸಿ** ಹೆಚ್ಚು ಮಾತ್ರೆಗಳನ್ನು, **ಕುಗ್ಗಿಸಿ** ಕಡಿಮೆ ಮಾತ್ರೆಗಳನ್ನು ಮಾಡಿಕೊಳ್ಳುವ ರೂಢಿಯುಂಟು.

## ೪ ಕನ್ನಡ ಹೊಸ ವೃತ್ತಗಳು.

**೧) ಮೊದಲು ಮಾತು :—** **'ಹೊಸ ವೃತ್ತ'** ಎಂದೊಡನೆ ಬೆದರುವ ಕಾರಣವಿಲ್ಲ. ಅದೇನು ಮುಗಿಲಿನಿಂದ ಕೆಳಗಿಳಿದುದಲ್ಲ. ಇಲ್ಲಿಂದಲೇ ಬೆಳೆದು ಬಂದುದು. ಇಂದು ಹಳೆಯವಾದ ಷಟ್ಪದಿ-ಸಾಂಗತ್ಯಗಳು ಅಂದು ಹೊಸವೇ ಆಗಿದ್ದವು. ಆದರೆ ಅವುಗಳ ರಚನೆಯು ಹೊಸದಿದ್ದರೂ, ಅವುಗಳ ಮೂಲವು ಹಳೆಯದೇ. ಅದೇ ಮೇರೆಗೆ ಇಂದು ಹೊಸವು ಎಂದು ಕಾಣುವ ವೃತ್ತಗಳು ಹಿಂದಿನ ವೃತ್ತಗಳ ರೀತಿಯನ್ನಾಶ್ರಯಿಸಿಯೆ ಮುಂದುವರಿದಿವೆ. ಮೂಲದ್ರವ್ಯಗಳು ಅವೆ. ಅವುಗಳ **ಜೋಡಣೆಯಲ್ಲಿಯೂ ರಚನೆಯಲ್ಲಿಯೂ** ಹೊಸಕಾಲಕ್ಕೆ ಅನುಗುಣವಾದ ಬದಲು ಆಗಿದೆ ಇಷ್ಟೇ. ಇದನ್ನಿಷ್ಟು ಅರಿತುಕೊಂಡರೆ ಯಾವ ಬಗೆಯ ತೊಂದರೆಯೂ ಆಗಲರಿಯದು. ಈ ಹೊಸ ರಚನೆಯು ಆದುದು ಏತಕ್ಕೆ?

**೨ ಭಾವಗೀತೆಗಳು :—** ನಾವಿರುವ ಕಾಲದಲ್ಲಿ, ನಮ್ಮ ಸಾಹಿತ್ಯವು ಆಂಗ್ಲ ಸಾಹಿತ್ಯದ ಸಂಸ್ಕಾರಗಳನ್ನು ಬಲವಾಗಿ ಪಡೆದಿದೆ; ಅದರಿಂದ ಅನೇಕ ಸಂಗತಿಗಳನ್ನು ಕಲಿತಿದೆ; ಅನೇಕ ರೀತಿಗಳನ್ನು ಸ್ವೀಕರಿಸಿದೆ; ವಿಧವಿಧದ ಸಾಹಿತ್ಯ ಪ್ರಭೇದಗಳನ್ನು ತನ್ನಲ್ಲಿ ಬಳಸಲಿದೆ. ಅಂಥವುಗಳಲ್ಲಿ **'ಭಾವಗೀತೆ'** ಗಳು ಪ್ರಧಾನವಾದವುಗಳು. ಆಂಗ್ಲ ಕವಿಗಳು ತಮ್ಮ ಉನ್ನತ ಭಾವಗಳನ್ನು ಚಿಕ್ಕ ಚಿಕ್ಕ ಕವನಗಳಲ್ಲಿ ತೋಡಿಕೊಂಡರು. ಅವಕ್ಕೆ ಅವರು **'ಭಾವಗೀತೆ'** ಯೆಂಬ ಹೆಸರನ್ನು ಕೊಟ್ಟರು. ಅವನ್ನೋದಿ ಅವರ ಸಾವಿರಾರು ಬಾಂಧವರು ಹೊಸ ಸಂಸ್ಕಾರಗಳನ್ನು ಪಡೆದರು; ಹೊಸ ಸ್ಫೂರ್ತಿಯನ್ನು ಹೊಂದಿದರು. ಇದನ್ನು ಕಂಡು ನಮ್ಮಲ್ಲಿಯ ಕವಿಗಳಿಗೂ ಅವರಂತೆ ಹಾಡುವ ಸ್ಫೂರ್ತಿ ಬಂತು, ಅವರೂ ಹಾಡಿದರು. ಅದರ ಫಲವೇ ಇಂದಿನ **ಭಾವಗೀತೆಗಳು.**

ಈ ಭಾವಗೀತೆಗಳಲ್ಲಿ ಒಂದೇ ಒಂದು ಪ್ರಬಲವಾದ ಭಾವವು ಮೂಡಿರುವದು. ಅದು ಅಲ್ಲಿ ಪೂರ್ಣವಾಗಿ ಅರಳಬೇಕಾಗುವದು. ಭಾವವು ಚೆನ್ನಾಗಿ ಮೈದಾಳಬೇಕಾದರೆ ಅದಕ್ಕೆ ಸರಿಯಾದ ಭಾಷೆಯು ಬೇಕು; ಅದೇ ಮೇರೆಗೆ ಅದಕ್ಕೆ ತಕ್ಕ ವೃತ್ತವೂ ಬೇಕು. ಅದು ತನ್ನದೇ ಆದ **ತಾಳ-ಲಯದಿಂದ** ಹೊರಬೀಳುವದು—ಬೀಳಬೇಕು. ಅದನ್ನು ಹೊರಗಣ ಕೃತ್ರಿಮ ಬಂಧನಗಳು ತಡೆಯಕೂಡದು. ಆದುದರಿಂದಲೇ ಕವಿಗಳು ಬಾಹ್ಯ ಬಂಧನಗಳನ್ನು ತೊರೆದು ಆಂತರಿಕ ಬಂಧನಗಳನ್ನು ಅನುಸರಿಸಿ ತಮ್ಮ ಕಿರಿದಾದ ಕವಿತೆಗಳನ್ನು

ಬರೆದರು. **ತಾಳ-ಲಯ** ಇಷ್ಟು ಕವಿತೆಯ ಪ್ರಾಣ. ತಮ್ಮ ಆಂತರಿಕ ಪ್ರೇರಣೆಯಂತೆ ಅವುಗಳ ರೀತಿಯನ್ನು ನಿಶ್ಚಯಿಸಿ ಇಂದಿನ ಕವಿಗಳು ತಮ್ಮ ಭಾವಗೀತೆಗಳನ್ನು ಬರೆಯುತ್ತಿರುವರು. ಆದುದರಿಂದ ಅವರ ವೃತ್ತ-ರಚನೆಯಲ್ಲಿ ಸಾಕಷ್ಟು ವೈವಿಧ್ಯವೂ ಸ್ವಾತಂತ್ರ್ಯವೂ ಕಂಡುಬರುವದು.

**೩ ಸಾಮಾನ್ಯ ಸ್ವರೂಪ** :— ಇನ್ನು ಈ ಹೊಸ ಛಂದಸ್ಸಿನ ಸಾಮಾನ್ಯ ಸ್ವರೂಪವೇನು ? ಅದರಲ್ಲಿ ಹಳೆ ಹೊಸ ಸಂಗತಿಗಳ ಸಮ್ಮೇಲನವು ಹೇಗಾಗುವದು ? ನೋಡಿ. ಅಂದಿನಂತೆ ಇಂದಿನ ಕವಿತೆಗಳಲ್ಲಿಯೂ **ಮಾತ್ರೆ**ಗಳಿವೆ-**ಗಣ**ಗಳಿವೆ. ಗಣಗಳು ೩—೪—೫ **ಮಾತ್ರೆ**ಗಳಿಂದಲೇ ಕೂಡಿರುವವು. ಕೆಲವು ಕಡೆಗಂತೂ ಒಂದು ಪಾದದಲ್ಲಿಯ ಗಣಗಳ ಕ್ರಮವೂ ಸಂಖ್ಯೆಯೂ ಹಿಂದಿನಂತೆಯೆ ಇಡಲಾಗಿರುವದು. ಆದರೆ ಕೆಲವೆಡೆಗಳಲ್ಲಿ ಅದರಲ್ಲಿ ಬದಲಾವಣೆಯೂ ಮಾಡಲಾಗಿದೆ.

ಮೈಸೂರ ಕನ್ನಡ ೫ **ನೆಯ** ಪುಸ್ತಕದಲ್ಲಿಯ **೨ ನೆಯ** ಕವಿತೆಯನ್ನು ನೋಡಿ. ಅದು **ನಾಲ್ಕು ನಾಲ್ಕು** ಸಾಲಿನಿಂದ ಕೂಡಿದ ಪದ್ಯಗಳನ್ನೊಳಗೊಂಡಿದೆ. ಪ್ರತಿಪಾದದಲ್ಲಿಯೂ ನಾಲ್ಕು ಮಾತ್ರೆಗಳ ಎರಡು ಗಣಗಳು ಬಂದಿರುವವು. ಇದು ನಮ್ಮ ಹಳೆಯ **ಶರಷಟ್ಪದಿ**ಯ ಕಿರಿಯ ಸಾಲನ್ನು ಹೋಲುವದಿಲ್ಲವೆ? ಕವಿಯು ಇಂಥ ನಾಲ್ಕು ಸಾಲುಗಳಿಂದ ತನ್ನ ಹೊಸ **ಚೌಪದಿ**ಯನ್ನು ರಚಿಸಿರುವ. ಇಲ್ಲಿ ಹಿಂದಿನದೇ ಸಾಲು. ಅದನ್ನು ಬಳಸುವ ರೀತಿಯಲ್ಲಿ ಸ್ವಾತಂತ್ರ್ಯ. ಅದೇ ರೀತಿ ಇಂದಿನ ಕವಿಗಳು, i) **ಗಣಗಳನ್ನು ಹೊಂದಿಸುವಲ್ಲಿಯೂ** ಸ್ವಾತಂತ್ರ್ಯವನ್ನು ವಹಿಸಿರುವರು; ii) **ಪ್ರಾಸವನ್ನಿಡುವದರಲ್ಲಿಯೂ** ಹೊಸಹಾದಿಯನ್ನು ನಿರ್ಮಿಸಿರುವರು; iii) **ಪದ್ಯ**ಗಳಲ್ಲಿಯ **ಸಾಲುಗಳ ಸಂಖ್ಯೆ**ಯ ವಿಚಾರವಾಗಿಯೂ ನವನೀತಿಯನ್ನು ಅನುಸರಿಸಿರುವರು. ಇದೇ ಹೊಸಬರು ತಂದಿರುವ **ಹೊಸತನ**. ಅವರ ಈ ಹೊಸ ಸಂಯೋಜನೆಗೆ ಹೊಸ **ಹೆಸರು**ಗಳನ್ನಿಡಬೇಕಾಗಿದೆ. ಅವನ್ನು **ಹೇಳುವ ರೀತಿಯು**-**ಧಾಟಿಯು** ನಿಶ್ಚಿತವಾಗಬೇಕಾಗಿದೆ.

ಆಧುನಿಕ ಕವಿಗಳು ಈ ಸಂದರ್ಭದಲ್ಲಿ ವಹಿಸಿದ ಸ್ವಾತಂತ್ರ್ಯದ ಮೂಲಕ ವೃತ್ತಗಳಲ್ಲಿ ಬಗೆಬಗೆಯ ರೀತಿಗಳು ಮೈದಾಳಿವೆ; ಮೈದಾಳಲಿವೆ. ಅವುಗಳಲ್ಲಿಯ ಕೆಲವನ್ನು ಮುಂದೆ ಕಾಣಬಹುದು. ಇಲ್ಲಿ **ದ್ವಿಪದಿಯಿಂದ** ಮೊದಲು ಮಾಡಿಕೊಂಡು, **ಷಟ್ಪದಿಯ** ವರೆಗೂ ಪದ್ಯಗಳಿವೆ. ಮುಂದೆ ಗಳ

ಸಾಲಿನ **ಅಷ್ಟಷಟ್ಪದಿಯಿದೆ.** ತರುವಾಯ ಸಾಲುಗಳ ಬಂಧನವಿಲ್ಲದ **ಸರಳರಗಳೆಯಿದೆ.** ಇವುಗಳಲ್ಲಿಯೂ ವಿವಿಧತೆಯಿದೆ. ಎಲ್ಲವನ್ನು ವಿವರಿಸುವದು ಸಾಧ್ಯವಿಲ್ಲ. ಕೆಲವನ್ನು ನೋಡಿ.

(i) **ದ್ವಿಪದಿ** :—ಇದು ಎರಡು ಸಾಲಿನ ಪದ್ಯ. **ಶ್ರೀ. ಗೋವಿಂದ ಪೈಯವರ 'ಪರಮಾತ್ಮನೆಲ್ಲಿರುವನು ?'** ( ೬ನೆಯ ಪುಸ್ತಕ ಪು. ೧೬೨ ) ಈ ಕವಿತೆಯನ್ನು ನೋಡಿ. ಅದು ದ್ವಿಪದಿಗಳಿಂದ ಕೂಡಿರುವದು. ಅದರ ಪ್ರತಿಸಾಲಿನಲ್ಲಿ ೫ ಮಾತ್ರೆಯ ೩ ಗಣಗಳೂ—೪ ಮಾತ್ರೆಯ ೧ ಗಣವೂ ಇರುವವು. ಪದ್ಯದ ಎರಡು ಸಾಲುಗಳಲ್ಲಿ ಆದಿಪ್ರಾಸವೂ, ಅಂತ್ಯಪ್ರಾಸವೂ ಉಂಟು. ೨ನೆಯ ಪದ್ಯದಿಂದ ಮುಂದೆ ಕೊನೆಯ ಗಣವು ೪ ಮಾತ್ರೆಯದಿರದೆ ೩ ಮಾತ್ರೆಯದಿರುವದು. ಇದು ನಮ್ಮ ಹಳೆಯ ದ್ವಿಪದಿಯಂತೆಯೇ ಇರುವದಿಲ್ಲವೆ? ಷಟ್ಪದಿಗಳ ಹಿರಿಯ ಅಥವಾ ಕಿರಿಯ ಸಾಲುಗಳನ್ನು ಎರಡಾಗಿ ಇಟ್ಟು ಸಹ ದ್ವಿಪದಿಗಳನ್ನು ಮಾಡಿದ್ದಾರೆ.

(ii) **ತ್ರಿಪದಿ**:— ಇದು ಮೂರು ಸಾಲಿನ ಪದ್ಯ. **ಶ್ರೀ. ಪುಟ್ಟಾರಾಮರ 'ಕೇಳಿಕೆ'** ಯನ್ನು ( ೪ನೆಯ ಪುಸ್ತಕ—ಪು. ೧೪೭ ) ನೋಡಿ. ಅದರಲ್ಲಿಯ ರಚನೆಯನ್ನು ಪರಿಶೀಲಿಸಿದರೆ ನಮಗೆ ಅದರ ಸ್ವರೂಪವು ತಿಳಿಯುವದು.

| | | |
|---|---|---|
| ೧ ನೆಯ ಸಾಲು | — | ೩ + ೪ + ೩ |
| ,, ,, | — | ೩ + ೪ + ೩ |
| ,, ,, | — | ೩ + ೪ + ೪ |

ಅದೇ ಮೇರೆಗೆ **ಶ್ರೀ. ಪಂಜೆಯವರ** 'ಹುತ್ತರಿಯ ಹಾಡಿ'ನಲ್ಲಿಯೂ (೬—೧೭೪) **ತ್ರಿಪದಿಗಳು** ಬಂದಿರುವವು. ಅವುಗಳ ಪ್ರತಿಸಾಲಿನಲ್ಲಿ(೩+೪+೫) ಈ ಗಣಗಳಿವೆ.

ಈ ಬಗೆಯಾಗಿ ಇಂದಿನ ತ್ರಿಪದಿಗಳಲ್ಲಿ ವಿವಿಧತೆಯು ಬಂದಿರುವದು. ಇವನ್ನು ಹಿಂದಿನ **ತ್ರಿಪದಿಯೊಡನೆ** ಸರಿಹೋಲಿಸಿ ನೋಡಿರಿ.

(iii) **ಚೌಪದಿ** :— ಇದು ನಾಲ್ಕು ಸಾಲಿನ ಪದ್ಯ. ಇಂಥ ಪದ್ಯಗಳು ಹೇರಳವಾಗಿ ಬಳಕೆಯಲ್ಲಿ ಬಂದಿವೆ. ವಿವಿಧತೆಯೂ ವಿಪುಲವಾಗಿದೆ. ಹಳೆಯ ಷಟ್ಪದಿಗಳ ಕಿರಿಯ ಇಲ್ಲವೆ ಹಿರಿಯ ಸಾಲುಗಳನ್ನು ಒತ್ತಟ್ಟಿಗೆ ತಂದು ಇಂಥ ಚೌಪದಿಯನ್ನು ತಯಾರಿಸುವರು.

(ಅ) **ಶರ ಕಿರಿಯ ಸಾಲು** :—೪×೨–ಶ್ರೀರಘು । ಕುಲಮಣಿ । (೫–೧೩೬) ವೀರತಿ । ರೋಮಣಿ ।

**ಹಿರಿಯ ಸಾಲು** :—೪×೩+ಗ–ಜಯಜಯ । ಭಾರತ । ಜಗದಂ। ಬಾ । ನಮಿಪೆವು । ಕುವರರು । ಹರಸ । ವ್ವಾ । ( ೫–೧೬೬ )

(ಆ) **ಕುಸುಮ–ಕಿ. ಸಾಲು**:—೫×೨ ಹತ್ತಡಿಯ । ಹದ್ದಿನಲಿ । (೬–೧೬೪) ಸುತ್ತಲಿನ । ಸೆರೆಯಲ್ಲಿ ।

**ಹಿ. ಸಾಲು** :–೫×೩+ಗ

(ಇ) **ಭೋಗ-ಕಿ. ಸಾಲು** :— ೩×೪– ಕುರುಡ । ನೊಣ । ಕೋಲ । ನೂರಿ । ( ೪–೧೫೬ ) ಇವರಲ್ಲಿಯ ಎರಡು ಪದ್ಯಗಳನ್ನು ಕೂಡಿಸಿದರೆ ಇದು **ಭೋಗಷಟ್ಪದಿ**ಯಾಗುವದು.

ಇದೇ ಮೇರೆಗೆ **ಭಾಮಿನಿ, ಪರಿವರ್ಧಿನಿ, ವಾರ್ಧಕಗಳ** ಸಾಲುಗಳಿಂದ ಈ **ಚೌಪದಿಗಳನ್ನು** ತಯಾರಿಸುವರು. ಕೆಲವರಲ್ಲಿ ಬೇರೆ ವ್ಯತ್ಯಾಸಗಳೂ ಉಂಟು. **ಆದಿ–ಅಂತ್ಯ** ಪ್ರಾಸಗಳು ಕೆಲವರಲ್ಲಿ ಇವೆ–ಕೆಲವರಲ್ಲಿ ಇಲ್ಲ.

(iv) **ಪಂಚಪದಿ** : —ಇದು ೫ ಸಾಲಿನ ಪದ್ಯ. **ಶ್ರೀ. ಮಾಸ್ತಿಯವರ '** **ಹೊಲೆಯ** ' (೫ -೧೪೨) ಇದು ಇಂಥ ಪದ್ಯಗಳಿಂದ ಕೂಡಿದೆ.

೧ ಹೊಲೆಯನೆ । ನ್ನುತ ದೂರ । ಹಾರಬೇ । ಡ ೫×೩+ಗ
೨ ಹೊಲೆ ಬರದು । ಹೊರಗಿಂದೆ । ೫×೨
೩ ಒಳಗಡೆಯೆ । ಇಹುದೆಂದು । ೫×೨
೪ ತಿಳಿದ ದಾ । ಸರು ಎಲ್ಲ । ಸಾರಿರುವ । ರು ೫×೩+ಗ
೫ ಹೊಲೆಯನನು । ದೊಲಿಯೆಂದು । ದೂರಬೇ । ಡ ೫×೩+ಗ

೧—೪ —೫ ಇವು '**ಕುಸುಮ**'ದ ಹಿರಿಯ ಸಾಲುಗಳು.

೨ —೩ ಇವು ಕಿರಿಯ ಸಾಲುಗಳು. ಆದಿಪ್ರಾಸ ಉಂಟು.

ಅದೇ ಮೇರೆಗೆ '**ಕುಮಾರ-ವ್ಯಾಸದ**' ಮೊದಲನೆ ಪದ್ಯವೂ **ಪಂಚಪದಿಯು.** ಅದರಲ್ಲಿ ೧ —೩ ಸಾಲುಗಳಲ್ಲಿ ೪×೪ ಗಣಗಳೂ ೨—೪—೫ ಸಾಲುಗಳಲ್ಲಿ ೪×೩+ಗ ಈ ಗಣಗಳೂ.

ಬೇಂದ್ರೆಯವರ '**ಹಕ್ಕಿ ಹಾರುತಿದೆ**' ಇದರಲ್ಲಿ **ಪಂಚಪದಿಯ** ಇನ್ನೊಂದು ಬಗೆಯನ್ನೂ ಕಾಣಬಹುದು.

(v) **ಷಟ್ಪದಿಗಳು** :— ಶ್ರೀ. ಡಿ. ವ್ಹಿ. ಜಿ. ಯವರ '**ನಿವೇದನ**' ವನ್ನು ನೋಡಿ. (೬—೧೦೬) ಇದರಲ್ಲಿಯ ಪದ್ಯಗಳಲ್ಲಿ ಗಣಗಳ ರಚನೆಯು ಕೆಳಗಿನಂತಿರುವದು. ೧—೩—೪—೫ ಸಾಲುಗಳಲ್ಲಿ ೩×೪ ಗಣಗಳು ೪—೬ ರಲ್ಲಿ ೩×೩+೧ ಈ ಗಣಗಳು.

ಅದೇ ಮೇರೆಗೆ ಶ್ರೀ. ಪುಟ್ಟಪ್ಪನವರ '**ನೇಗಿಲಯೋಗಿ**' ಯನ್ನು ನೋಡಿರಿ. (೪—೧೫೦) ೧—೩ ರಲ್ಲಿ ೪×೪ ಗಣಗಳು. ೨—೪ರಲ್ಲಿ ೪×೩ ಗಣಗಳು; ೫—೬ ರಲ್ಲಿ ೪×೩+೩+೧ **ಗಣಗಳು**. ಈ ಬಗೆಯಾಗಿ ಷಟ್ಪದಿಗಳಲ್ಲಿಯೂ ವಿವಿಧತೆಯಿರುವದು.

(vi) **ಅಷ್ಟ ಷಟ್ಪದಿ** :—ಇದೊಂದು ಇಂಗ್ಲಿಷಿನಿಂದ ಬಂದ ವೃತ್ತ. ಇದಕ್ಕೆ ಆ ನುಡಿಯಲ್ಲಿ **ಸಾನೆಟ್** ಎನ್ನುವರು. ಇದರಲ್ಲಿ ೧೪ ಸಾಲುಗಳಿರುವವು. ಮೊದಲಿನ ಎಂಟು ಸಾಲುಗಳದು ಒಂದು ಗುಂಪು— ಮುಂದಿನ ೬ ಸಾಲುಗಳದು ಇನ್ನೊಂದು ಗುಂಪು. ಮೊದಲನೆಯ ಗುಂಪಿನಲ್ಲಿ ಒಂದು ಭಾವವು ಏರುತ್ತ ಹೋಗುವದು. ಮುಂದಿನ ಗುಂಪಿನಲ್ಲಿ ಅದಕ್ಕೆ ಇನ್ನೊಂದು ವಲನವು ದೊರೆಯುವದು. ಶ್ರೀಮಾನ್ ಮಾಸ್ತಿಯವರ '**ಮಲಾರ**' ದಲ್ಲಿಯೂ, ಶ್ರೀಮಾನ್ ಬೇಂದ್ರೆಯವರ '**ಉಯ್ಯಾಲೆ**' ಯಲ್ಲಿಯೂ ಇದು ಬಳಸಲಾಗಿದೆ. ಕೆಲವೆಡೆಯಲ್ಲಿ ಮೇಲೆ ಕಾಣಿಸಿದ ಗುಂಪುಗಳ ನಿರ್ಬಂಧವೂ ಬಿಡಲಾಗಿರುವದು.

ಶ್ರೀಮಾನ್ ಮಾಸ್ತಿಯವರ '**ಕನ್ನಡನಾಡಿನ ಸ್ಥಿತಿ**' ಯು ಈ ವೃತ್ತದಲ್ಲಿ ಬರೆಯಲಾಗಿದೆ. (೫—೧೬೩) **ಪ್ರತಿಸಾಲಿನಲ್ಲಿ ೫ ಮಾತ್ರೆಯ ೪ ಗಣಗಳು ಇರುವವು**. ಸಾಲುಗಳಲ್ಲಿ ವಾಕ್ಯಗಳು ನಿಲ್ಲದೆ ನಿದಾನವಾಗಿ ಮುಂದೆ ಸಾಗಿವೆ. ಕೆಲವೆಡೆಯಲ್ಲಿ ನಡುವೆಯೇ ಒಂದು ವಾಕ್ಯವು ಮುಗಿಯುವದು, ಇನ್ನೊಂದು ಪ್ರಾರಂಭವಾಗುವದು.

(vii) **ಸರಳ-ರಗಳೆ** :—ಕನ್ನಡದಲ್ಲಿ ಭರದಿಂದ ಉಪಯೋಗಿಸಲಾದ ಹೊಸ ವೃತ್ತಗಳಲ್ಲಿ ಇದೊಂದು. ಇದು ಆಂಗ್ಲ ಭಾಷೆಯಲ್ಲಿಯ Blank verse (ಬ್ಲಾಂಕ ವ್ಹರ್ಸ) ಎಂಬ ವೃತ್ತದ ಅಪರಾವತಾರ. ಇದರಲ್ಲಿಯೂ **೫ ಮಾತ್ರೆಯ ೪ ಗಣಗಳಿರುವವು**. ಇದರಲ್ಲಿ ಸಾಲುಗಳ ನಿರ್ಬಂಧವಿಲ್ಲ; ಪ್ರಾಸಗಳಿಲ್ಲ. ಭಾವವು ಧಾರಾಳವಾಗಿ ಅನೇಕ ಸಾಲುಗಳಲ್ಲಿ ಮುಂದು

ಹರಿಯುವದು. ಇದೊಂದು ಹೊಸ **ಲಲಿತ** ರಗಳೆಯ ಪ್ರಭೇದವೆನ್ನಲು ಅಡ್ಡಿಯಿಲ್ಲ.

ಆಂಗ್ಲ ಕವಿಗಳಂತೆ ನಮ್ಮವರೂ ಇದನ್ನು ನಾಟಕಗಳಲ್ಲಿಯೂ, ಬೇರೆಡೆಯಲ್ಲಿಯೂ ಬಳಸಲಿರುವರು. ಈಗ ಇದೊಂದು ಕನ್ನಡ ಕಾವ್ಯದ ವಿಶೇಷವಾಗಲಿದೆ.

(viii) **ಹಾಡುಗಳು :** — ಹಿಂದಿನಂತೆ ಇಂದು ಬೇರೆ ಬೇರೆ ತರದ ಹಾಡುಗಳು ಪ್ರಚಾರದಲ್ಲಿ ಬರಲಿವೆ. ಅವುಗಳಲ್ಲಿಯೂ ಮಾತ್ರಾಗಣಗಳೇ ಇರುವವು. **ಪಲ್ಲವಿ, ಅನುಪಲ್ಲವಿ, ನುಡಿ** ಈ ಅಂಗಗಳು ಹಿಂದಿನಂತೆಯೇ ಇರುವವು.

೪. **ಹೇಳುವ ರೀತಿ:**-ಇನ್ನು ಈ ಪದ್ಯಗಳನ್ನು ಹೇಳುವದೆಂತು? ಇದೊಂದು ದೊಡ್ಡ ತೊಂದರೆ. ಸರಿ. ಆದರೆ ಹಿಂದಿನ ಪದ್ಯಗಳನ್ನು ಹೇಳುವ ರೀತಿಯಾದರೂ ಹೇಗೆ ಬಳಕೆಯಲ್ಲಿ ಬಂದಿತು? ಪರಂಪರೆಯಿಂದಲೇ ಅಲ್ಲವೆ? ಮೊದಲು ಕೆಲವರು ಒಂದು ರೀತಿಯನ್ನು ಕಂಡುಹಿಡಿದರು. ಮುಂದೆ ಅದನ್ನೇ ಬೇರೆಯವರು ಅನುಸರಿಸಿದರು. ಈಗಲೂ ಹೀಗೆಯೇ ಮಾಡಬೇಕಲ್ಲವೆ? ಇಂದಿನ ಪದ್ಯಗಳನ್ನು ಚೆನ್ನಾಗಿ ಹೇಳುವ ಕವಿಗಳೂ ಇದ್ದಾರೆ; ಗಮಕಿಗಳೂ ಇದ್ದಾರೆ. ಅವರ ಪದ್ಧತಿಯನ್ನು ಅರಿತುಕೊಂಡು ಅದನ್ನು ಅನುಸರಿಸುವದು ಒಂದೇ ಒಂದಾದ ಹಾದಿ. ಅಂದಿನಂತೆ ಇಂದೂ ಅದೇ ನಮಗೆ ನೆರವಾಗಬೇಕು. ಒಮ್ಮೆ ಕೆಲ ಪದ್ಯಗಳನ್ನು ಹೇಳಲು ಬಂದಿತೆಂದರೆ ನಮಗೆ, ಹೊಸ ರೀತಿಗಳೂ ಹೊಳೆಯುವವು. ನಾವವನ್ನು ಪ್ರಚಾರಗೊಳಿಸಬಹುದು. ಒಟ್ಟು ಬೇಕಾದುದು **ಇಂಪು, ಆಕರ್ಷಕತೆ.** ಅವೆರಡನ್ನು ಉಂಟುಮಾಡುವ ರೀತಿಗಳು ಸಾವಿರವಾದರೂ ಅದರಿಂದ ಕೊರತೆಯೇನು? ಒಂದೇ ರೀತಿಯಿರಬೇಕೆಂಬ ಆಗ್ರಹವಾದರೂ ಏತಕ್ಕೆ? **ಸೌಂದರ್ಯದಂತೆ ಸಂಗೀತವೂ ವಿವಿಧತೆಯಿಂದಲೇ ಮೋಹಕವಾಗುವದಿಲ್ಲವೇ?**

೫ **ಕೊನೆಯ ಮಾತು :**—ಆದುದರಿಂದ ಹೊಸದೆಂದೊಡನೆ ಬರೀ ಮೂಗು ಮುರಿಯದೆ ಅದರಲ್ಲಿಯ **ಇಂಪು-ಪೆಂಪುಗಳನ್ನು** ಸವಿದು, ಅದನ್ನು ಸರಿಯಾಗಿ ಬಳಸಲೆತ್ನಿಸಿದರೆ, ಅದು ಅನೇಕರಿಗೆ ಸಂತೋಷವನ್ನು ದಯಪಾಲಿಸದೆ ಇರದು. ನಾವೆಲ್ಲ ಈ ಮಹತ್ವದ ಕಾರ್ಯವನ್ನು ಮಾಡಿ ಮಕ್ಕಳಲ್ಲಿ ಹೊಸ ಹುರುಪನ್ನು ಹುಟ್ಟಿಸಬೇಕಲ್ಲವೇ?

## ಅನುಬಂಧ ೭

## ಅಲಂಕಾರಗಳು.

**೧ ಉಪಕ್ರಮ**:-ನಮ್ಮ ಸೌಂದರ್ಯವನ್ನು ಹೆಚ್ಚಿಸುವ ವಸ್ತುಗಳಿಗೆ ನಾವು ಏನೆಂದು ಕರೆಯುವೆವು? **ಅಲಂಕಾರಗಳೆಂದಲ್ಲವೆ**? ಅದೇ ಮೇರೆಗೆ ಸಾಹಿತ್ಯದ, ಕಾವ್ಯದ, ಅಂದವನ್ನು ಬೆಳೆಯಿಸುವ ಮಾತುಗಳಿಗೆ **ಅಲಂಕಾರ** ಎಂದು ಕರೆಯುವರು. ಕಾವ್ಯದ ಸೌಂದರ್ಯವು ಯಾವಾಗಲೂ ಎರಡು ಸಂಗತಿಗಳನ್ನವಲಂಬಿಸಿದೆ. ಒಂದು ಅದರಲ್ಲಿಯ **ಶಬ್ದ**, ಇನ್ನೊಂದು ಅದರಲ್ಲಿಯ **ಅರ್ಥ**. ಶಬ್ದ-ಸೌಂದರ್ಯವನ್ನು ಉಂಟುಮಾಡುವವು **ಶಬ್ದಾಲಂಕಾರಗಳು**; ಅರ್ಥದ ಅಂದವನ್ನು ಬೆಳೆಯಿಸುವವು **ಅರ್ಥಾಲಂಕಾರ**ಗಳು. ಇವುಗಳಲ್ಲಿಯ ಕೆಲವು **ಪ್ರಧಾನ ಅಲಂಕಾರಗಳ** ಪರಿಚಯವನ್ನು ಮಾಡಿಕೊಳ್ಳುವಾ.

**೨ ಶಬ್ದಾಲಂಕಾರಗಳು**:— ಇವುಗಳಲ್ಲಿ ಎರಡು ಅಲಂಕಾರಗಳು ಪ್ರಧಾನವಾದವುಗಳು. ಒಂದು **ಅನುಪ್ರಾಸ**, ಇನ್ನೊಂದು **ಯಮಕ**.

(ಅ) **ಅನುಪ್ರಾಸ**:—ಒಂದು ಇಲ್ಲವೆ ಹೆಚ್ಚು ಅಕ್ಷರಗಳು ಬೇಕಾದ ಕಡೆಯಲ್ಲಿ ಮತ್ತೆ ಮತ್ತೆ ಬಂದರೆ ಅದಕ್ಕೆ **ಅನುಪ್ರಾಸ**ವೆನ್ನುವರು. ನೋಡಿ.

**ಒಂದರೊಲು ಒಂದಿಲ್ಲ**
**ಒಂದರೊಳು ಕುಂದಿಲ್ಲ**
**ಒಂದೊಂದು ಅಂದವು** ತನತನಗೆ **ಚೆಂದ** !
**ಚೆಂದಕ್ಕೆ ಒಂದೆ ನ್ಮೆ**
ಸಾಲದೆಂಬಂತೆ ನೂ-
**ರೊಂದು** ವೈದಾಳಿ ಕುಣಿಯುವದು ಸ್ವ**ಚ್ಛಂದ** !

ಇಲ್ಲಿ (ಂದ) ಎಂಬ ವರ್ಣವೂ '**ಒಂದು**' ಎಂಬುದೂ ಮೇಲಿಂದ ಮೇಲೆ ಬಂದು ಕವಿತೆಯಲ್ಲಿ ಒಂದು **ಇಂಪನ್ನು-ನಾದಮಾಧುರ್ಯ**ವನ್ನುಂಟು ಮಾಡಿವೆ! ಇಂಥ **ಅನುಪ್ರಾಸವು** ಕವಿತೆಗೆ ಒಂದು ಬಗೆಯ ಮೋಹಕತೆಯನ್ನು ದಯಪಾಲಿಸುವದಿಲ್ಲವೆ? ಅದಕ್ಕಾಗಿಯೇ ಅದು '**ಅಲಂಕಾರವು**.'

**(ಆ) ಯಮಕ**:—ಮೂರು ಇಲ್ಲವೆ ಅದಕ್ಕೂ ಹೆಚ್ಚು ಅಕ್ಷರಗಳ ಗುಂಪು, ಒಂದು ಪದ್ಯದ **ಆದಿ-ಮಧ್ಯ-ಅಂತ್ಯ** ಸ್ಥಾನಗಳಲ್ಲಿ ಮತ್ತೆ ಮತ್ತೆ ಬಂದರೆ ಅದು **ಯಮಕ**ವೆನಿಸುವದು. **ನೋಡಿ.**

**ತಲೆತಲೆಗೆ** ಹೊಸಗುರಿಯು ಹೊಸತು ಆಸೆ
**ತಲೆತಲೆಗೆ** ಹೊಸದುಃಖ ಹೊಸನಿರಾಶೆ.

ಇಲ್ಲಿ '**ತಲೆತಲೆಗೆ**' ಈ ಅಕ್ಷರಗಳ ಗುಂಪು ಪ್ರತಿಪಾದದ ಆದಿಯಲ್ಲಿ ಬಂದಿದೆ. ಆದಕ್ಕಾಗಿ ಇದು '**ಯಮಕ**'. ಇದು ಕೂಡ ಕವಿತೆಯ ನಾದದಲ್ಲಿ ಒಂದು ಬಗೆಯ ಇಂಪನ್ನು ಹುಟ್ಟಿಸುತ್ತದೆ. ಮೇಲಿನ ಉದಾಹರಣೆಯಲ್ಲಿಯ **ಒಂದ ರೊಲು** ಇದು '**ಯಮಕ**'**ವೇ !**

**೩ ಅರ್ಥಾಲಂಕಾರಗಳು :—** ಅರ್ಥಾಲಂಕಾರಗಳ ಸಂಖ್ಯೆಯು ಬಲು ದೊಡ್ಡದು. ಸುಮಾರು ೧೨೦ ಅಲಂಕಾರಗಳನ್ನು ಹಿಂದಿನವರು ಕಲ್ಪಿಸಿರುವರು. ಅವುಗಳ ಸಂಖ್ಯೆಯು ಇನ್ನೂ ಬೆಳೆಯುತ್ತಲೇ ಇದೆ. ಅವನ್ನೆಲ್ಲ ಇಲ್ಲಿ ವಿವರಿಸದೆ, ಕೆಲ ಮಹತ್ವದ ಅಲಂಕಾರಗಳನ್ನಷ್ಟೇ ಇಲ್ಲಿ ಹೇಳಬಯಸುವೆವು.

**ಶಬ್ದಾಲಂಕಾರಗಳು ನಾದ-ಮಾಧುರ್ಯವನ್ನು** ಉಂಟುಮಾಡುವಂತೆ, **ಅರ್ಥಾಲಂಕಾರಗಳು ಅರ್ಥ-ಚಮತ್ಕೃತಿಯನ್ನು** ಹುಟ್ಟಿಸುವವು. **ರವಿ ಕಾಣದುದನ್ನು ಕವಿ ಕಾಣುವನು** ಎಂಬಂತೆ ಕವಿಯು ಬೇರೆ ಬೇರೆ ವಸ್ತುಗಳಲ್ಲಿ ಸಾಮ್ಯವನ್ನು ಕಂಡು ಹಿಡಿಯುವನು. ಅವನಿಗೆ ಮುಖವು ತಾವರೆಯಂತೆ ಕಾಣುವದು ; ತರುಣನು ಹುಲಿಯಂತೆ ತೋರುವನು ; ಜೋಳವು ಮುತ್ತಾಗುವದು, ಚಿಕ್ಕೆಗಳು ಆಕಾಶದಲ್ಲಿ ಅರಳಿದ ಹೂಗಳಾಗುವವು; ತಾವರೆಯು ನವತರುಣಿಯಂತೆ ತಲೆದೂಗುವದು; ಕಾಂಚಾಣವು ಕುರುಡನಂತೆ ಕುಣಿಯುವದು. ಈ ರೀತಿ ವಿವಿಧ ಚಿತ್ರಗಳನ್ನು ಕಂಡು ಕವಿಯು ಅವನ್ನೆಲ್ಲ ಅಂದವಾಗಿ ಬರೆಯುವನು. ಅವೇ **ಅಲಂಕಾರಗಳಾಗುವವು.**

**೪ ಉಪಮೆ :** — ಅರ್ಥಾಲಂಕಾರಗಳಲ್ಲಿ '**ಉಪಮೆ**'ಗೆ ಅಗ್ರಸ್ಥಾನ. **ಉಪಮೆಯು** ಎರಡು ವಸ್ತುಗಳಲ್ಲಿಯ **ಹೋಲಿಕೆಯನ್ನು ಅಂದವಾಗಿ** ಹೇಳುವದು. ಅಥವಾ **ಅಂದವಾದ ಹೋಲಿಕೆಯನ್ನು** ಹೇಳುವದು. ಸಾಮಾನ್ಯ ಹೋಲಿಕೆಯನ್ನು ಹೇಳಿದರೆ ಅದು ಉಪಮೆಯಾಗಲಾರದು. '**ಆ ಪುಸ್ತಕವು ಪೆಟ್ಟಿಗೆಯ ಹಾಗಿದೆ**' ಎಂದು ಹೇಳುವಲ್ಲಿ ಅದಾವ ಸೌಂದರ್ಯ? ಅದೇ '**ಆ ಹಾಲಿಗೆ ಅಮೃತದ ರುಚಿಯಿದೆ**' ಎಂಬಲ್ಲಿ ಒಂದು ಬಗೆಯ ಸೋಜಿಗವು ವ್ಯಕ್ತವಾಗುವದು.

**ಮುಖವು ಕಮಲದಂತೆ ಸುಂದರವು.**
**ಪುಲಕೇಶಿಯು ಹುಲಿಯಂತೆ ಶೂರನು.**

ಇವು ಉಪಮೆಯ ಉದಾಹರಣೆಗಳು. ಇಲ್ಲಿ '**ಮುಖವು-ಪುಲಿಕೇಶಿಯು**' ಇವುಗಳಿಗೆ (i) '**ಉಪಮೇಯ**' ಎಂಬ ಹೆಸರು; 'ಕಮಲ-ಹುಲಿಗಳು.' (ii) '**ಉಪಮಾನಗಳು**'; '**ಸುಂದರ-ಶೂರ**' ಇವು (iii) **ಸಾಮಾನ್ಯ ಧರ್ಮಗಳು**; ಮತ್ತು 'ಅಂತೆ' ಇದು ಆ ಧರ್ಮಗಳನ್ನು (vi) **ಸೂಚಿಸುವ ಶಬ್ದ**. ಈ ರೀತಿ ಉಪಮೆಯಲ್ಲಿ ನಾಲ್ಕು ಅಂಶಗಳಿರುವವು. ಒಮ್ಮೊಮ್ಮೆ ಇವುಗಳಲ್ಲಿಯ ಕೆಲವು ಅಂಶಗಳು ಗುಪ್ತವಾಗಿಯೂ ಇರಬಹುದು.

**೫ ಉತ್ಪ್ರೇಕ್ಷೆ:**—ಒಂದು ವಸ್ತು (**ಉಪಮೇಯವು**) ಹೋಲಿಕೆಯ ಮೂಲಕ ಇನ್ನೊಂದು ವಸ್ತು (**ಉಪಮಾನ**) ವೇ **ಇರುವುದೊ ಏನೋ** ಎಂಬಂತೆ ಊಹಿಸಿ ಬಣ್ಣಿಸಲಾಗಿದ್ದರೆ ಅದಕ್ಕೆ '**ಉತ್ಪ್ರೇಕ್ಷೆ**' ಎಂದು ಕರೆಯುವರು.

**ಮುಖವು ತಾವರೆಯೋ ಏನೋ ಎಂಬಂತೆ ಕಂಡಿತು.**
**ಕಂಬನಿಗಳು ಮುತ್ತುಗಳೋ ಏನೋ ಎಂಬಂತೆ ಉದುರಿದವು.**

ಇಲ್ಲಿ **ಮುಖ-ಕಂಬನಿಗಳು** '**ತಾವರೆ-ಮುತ್ತುಗಳೆಂದೇ**' ಕವಿಗೆ ಅನಿಸಿತು. ಆದರೆ ಈ ಅನಿಸಿಕೆಯು **ನಿಶ್ಚಯದ** ಸ್ವರೂಪವನ್ನು ಇನ್ನೂ ತಾಳಿಲ್ಲ. ಆದರೆ ಅದು **ಸಂಶಯದ** ಸ್ವರೂಪದ್ದೂ ಇಲ್ಲ. ಸಂಶಯಕ್ಕಿಂತ ಮೇಲು-ಮತ್ತು ನಿಶ್ಚಯಕ್ಕಿಂತ ಕಡಿಮೆಯಿದ್ದ ಇಂಥ ಅನಿಸಿಕೆಗೆ—'**ಊಹೆಗೆ**' '**ಸಂಭಾವನೆ**' ಎಂಬ ಹೆಸರು. '**ಸಂಭಾವನೆ**'ಯಿರುವ ಅಲಂಕಾರವೇ **ಉತ್ಪ್ರೇಕ್ಷೆಯಾಗುವದು. ಸಂಭಾವನೆಯನ್ನು** ಸೂಚಿಸಲು ಕೆಳಗಿನ ಕೆಲ ಶಬ್ದಗಳನ್ನು ಉಪಯೋಗಿಸುವರು.

**ಎಂಬಂತೆ—ಎನೆ—ವೊಲ್.**

**೬ ರೂಪಕ:**—**ಉಪಮೇಯ ಉಪಮಾನ**ಗಳಲ್ಲಿಯ ಹೋಲಿಕೆಯನ್ನು ಸೂಚಿಸುವಾಗ **ಉಪಮೇಯವೇ ಉಪಮಾನವು** ಎಂದು ವರ್ಣಿಸಿದರೆ ಅದು '**ರೂಪಕ**' ವಾಗುವದು. '**ರೂಪಕ**' ವು ಮುಂದಿರುವದು ನೋಡಿ.

**ಸಾಧುಗಳಿಗೆ ಧೈರ್ಯವೇ ಧನವು**
**ಅವನು ಕಾಳಗದಲ್ಲಿ ಹಿರಿ ಹುಲಿಯು**

ಇಲ್ಲಿ '**ಧೈರ್ಯವೇ ಧನವು**' '**ಅವನು ಹಿರಿಹುಲಿಯು**' ಎಂಬ ಅಭೇದವು ಸೂಚಿತವಾಗಿದೆ.

೭ **ಅಪಹ್ನುತಿ**:— ಒಂದು ವಸ್ತುವಿನ ನಿಜಸ್ವರೂಪವನ್ನು ಮರೆ ಮಾಡಿ, ಅದು ಬೇರೊಂದು ವಸ್ತುವೇ ಇರುವದೆಂದು ಕಲ್ಪಿಸುವದು '**ಅಪಹ್ನುತಿ**' ಯು. '**ಇದು ಮುಖವಲ್ಲ, ಕಮಲ**' ಎಂಬಲ್ಲಿ ಇದು ಬಂದಿರುವದು.

**ಇದು ಕತ್ತಿಯಲ್ಲ, ಹಗೆಗಳ ಉಸಿರನ್ನು ನೆಕ್ಕುವ ಹಾವಿನ ನಾಲಿಗೆಯು.**

ಇಲ್ಲಿ '**ಕತ್ತಿಯನ್ನು**' '**ಹಾವಿನ ನಾಲಿಗೆಯನ್ನಾಗಿ**' ಕಲ್ಪಿಸಲಾಗಿದೆ. ಅದರಲ್ಲಿಯ ನಿಜಧರ್ಮಗಳನ್ನು ಅಲ್ಲಗಳೆದು ಅದಕ್ಕೆ '**ಹಾವಿನ ನಾಲಿಗೆಯ ಧರ್ಮ**' ಗಳನ್ನು ಅಂಟಿಸಲಾಗಿದೆ.

೮ **ಪ್ರತೀಪ**:— ಇದರಲ್ಲಿ **ಉಪಮೇಯವೇ ಉಪಮಾನ**ವಾಗುವದು. ಅಂದರೆ ಉಪಮೇಯದಲ್ಲಿ ಉಪಮಾನಕ್ಕಿಂತ ಹೆಚ್ಚು ಗುಣಗಳಿವೆ ಎಂದು ತೋರಿಸುವದು '**ಪ್ರತೀಪ**' ಅಲಂಕಾರವು. ಸಾಮಾನ್ಯವಾಗಿ '**ಮುಖವು ಕಮಲದಂತಿದೆ**' ಎಂದು ಹೇಳುವಾಗ '**ಕಮಲವು**' '**ಮುಖಕ್ಕಿಂತ**' ಹೆಚ್ಚು ಸುಂದರವಿರುವದೆಂಬ ತಿಳಿವಳಿಕೆಯು ಇರುವದು. ಆದರೆ '**ಪ್ರತೀಪ**' ದಲ್ಲಿ '**ಕಮಲವೇ ಮುಖದಂತಿರುವದು**' ಅಂದರೆ '**ಮುಖದಲ್ಲಿಯೆ**' ಕಮಲಕ್ಕಿಂತ ಹೆಚ್ಚಿನ ಸೌಂದರ್ಯವಿರುವುದೆಂದು ಕವಿಯ ಭಾವನೆ. ಆದುದರಿಂದ '**ಪ್ರತೀಪ**' ವನ್ನು '**ವಿಪರ್ಯಾಸೋಪಮೆ**' ಎಂದೂ ಕರೆಯುವರು.

೯ **ದೀಪಕ**:— ಎರಡು ವಸ್ತುಗಳಲ್ಲಿ ಒಂದನ್ನು ಕುರಿತು ನಾವು ಬರೆಯಲಿರುವಾಗ, ಅಂಥ ಇನ್ನೊಂದು ವಸ್ತುವಿನ ನೆನಪಾಗುವದು. ಮೊದಲನೆಯದು '**ಪ್ರಸ್ತುತ**'; ಎರಡನೆಯದು '**ಅಪ್ರಸ್ತುತ**'. ಅವೆರಡರಲ್ಲಿ ಒಂದೇ ಧರ್ಮವಿದೆ ಎಂದು ಹೇಳುವ ಅಲಂಕಾರವು '**ದೀಪಕ.**' ಹೊಸ್ತಿಲಲ್ಲಿ ಇರುವ ದೀಪವು ಒಳಗಿನವನ್ನೂ, ಹೊರಗಿನದನ್ನೂ ಕೂಡಿಯೇ ಬೆಳಗುವಂತೆ, ಈ ಅಲಂಕಾರವು '**ಪ್ರಸ್ತುತ**' '**ಅಪ್ರಸ್ತುತ**' ಇವೆರಡನ್ನೂ ಉಲ್ಲೇಖಿಸಿ ಅವುಗಳಲ್ಲಿಯ ಧರ್ಮದ ಐಕ್ಯವನ್ನು ಸೂಚಿಸುವದು.

**ನಗೆಯಿಂದ ಮುಖವೂ ಬೆಳದಿಂಗಳಿಂದ ನೈದಿಲೆಯೂ ಶೋಭಿಸಿದವು.**

ಇಲ್ಲಿ ಮೊದಲನೆಯದು **ಪ್ರಸ್ತುತ.** ಎರಡನೆಯದು **ಅಪ್ರಸ್ತುತ.**

**೧೦ ದೃಷ್ಟಾಂತ:**— ಒಂದು **ಪ್ರಸ್ತುತ** ಮಾತಿನ ಅರ್ಥವು ಮನಸ್ಸಿನಲ್ಲಿ ಚೆನ್ನಾಗಿ ಮೂಡಲು ಇನ್ನೊಂದು **ಅಪ್ರಸ್ತುತವಾದ** ಉದಾಹರಣೆಯನ್ನು ಕೊಡುವದಕ್ಕೆ **'ದೃಷ್ಟಾಂತ'** ವೆನ್ನುವರು. ಇದರಲ್ಲಿಯ ಉದಾಹರಣೆಯು **ಪ್ರಸ್ತುತದ ಪ್ರತಿಬಿಂಬದಂತೆ** ತೋರುವದು.

**ಜಗತ್ತಿನಲ್ಲಿ ನೀನೇ ಶಾಂತಿಯುತನು,**
**ಚಂದಿರನೇ ಕಾಂತಿಯುತನು.**

ಇಲ್ಲಿ ಬಂದ ಎರಡೂ ವಾಕ್ಯಗಳಲ್ಲಿ **ಬಿಂಬಪ್ರತಿಬಿಂಬ** ಭಾವವಿರುವ ಮೂಲಕ ಇದು **'ದೃಷ್ಟಾಂತ'** ಅಲಂಕಾರವು.

**೧೧ ಅರ್ಥಾಂತರನ್ಯಾಸ:— ಪ್ರಸ್ತುತವಾದ** ಸಾಮಾನ್ಯ ಸಿದ್ಧಾಂತವನ್ನು ಸಮರ್ಥಿಸಲು **ಅಪ್ರಸ್ತುತವಾದ** ವಿಶೇಷ ಸಂಗತಿಯು ಬಂದಿರಲು, ಅಥವಾ **ಪ್ರಸ್ತುತ** ವಿಶೇಷವನ್ನು ಸಮರ್ಥಿಸಲು **ಅಪ್ರಸ್ತುತ** ಸಾಮಾನ್ಯವು ಬಂದಿರಲು ಅದಕ್ಕೆ **'ಅರ್ಥಾಂತರನ್ಯಾಸ'** ವೆನ್ನುವರು.

(i) ಸಜ್ಜನರು ಸಂಕಟದಲ್ಲಿಯೂ ಧೈರ್ಯವನ್ನು ಬಿಡುವುದಿಲ್ಲ. } **ಸಾಮಾನ್ಯ**

ತುಂಬಿದ ಚಂಡನ್ನು ಕೆಳಕ್ಕೆ ಎಸೆದರೂ ಅದು ಮರಳಿ ಮೇಲಕ್ಕೆ ಪುಟಿಯುವದಿಲ್ಲವೇ ? } **ವಿಶೇಷ**

(ii) ಸೂರ್ಯನ ರಥಕ್ಕೆ ಒಂದೇ ಗಾಲಿ, ಕುದುರೆಗಳು ಏಳು, ಕಾಲಿಲ್ಲದ ಸಾರಥಿ, ನೆಲೆಯಿಲ್ಲದ ದಾರಿ, ಆದರೂ ಅವನ ಕೆಲಸವು ನಡೆದೇ ಇದೆ, ಸಂತತವಾಗಿ ತಡೆಯಿಲ್ಲದೆ. } **ವಿಶೇಷ**

ಹಿರಿಯರ ಕಾರ್ಯಸಿದ್ಧಿಯು ಸತ್ವಬಲದಿಂದ, ಸಾಧನ ಬಲದಿಂದಲ್ಲ. } **ಸಾಮಾನ್ಯ**

**೧೨ ಸಮಾಸೋಕ್ತಿ:—ಪ್ರಸ್ತುತದ** ವರ್ಣನೆಯಿಂದ **ಅಪ್ರಸ್ತುತ**ವಾದ ಬೇರೊಂದು ವೃತ್ತಾಂತವು ಸೂಚಿತವಾದರೆ ಅದು **'ಸಮಾಸೋಕ್ತಿ'** ಯಾಗಬಹುದು. ನೋಡಿ.

**ಚಿಕ್ಕೆಗಳು ಎಷ್ಟಿದ್ದರೇನು ? ಚಂದಿರನೊಬ್ಬನಿಂದಲೇ ಎಲ್ಲವು ಬೆಳಗುವದು.**

ಇಲ್ಲಿಯ ವರ್ಣನೆಯಿಂದ ಸೂಚಿತವಾಗುವದೇನು? ಸಾಮಾನ್ಯ ಗುಣಗಳುಳ್ಳ ಸಾವಿರ ಮಕ್ಕಳಿಗಿಂತ ವಿಶೇಷವಾದ ಪ್ರಭೆಯುಳ್ಳ ಒಬ್ಬನೇ ಲೇಸು. ಇಂಥ ಸೂಚಕತೆಯುಳ್ಳ ಅಲಂಕಾರವು **ಸಮಾಸೋಕ್ತಿಯು.**

**ನಾಯಿಯನ್ನು ಬಡಿಯಲು ಬಣ್ಣದ ಕೋಲೇ?**

**೧೩ ಅಪ್ರಸ್ತುತ ಪ್ರಶಂಸಾ** :— ಇಲ್ಲಿ ಅಪ್ರಸ್ತುತವಾದ ವೃತ್ತಾಂತದ ವರ್ಣನೆಯಿಂದ **ಪ್ರಸ್ತುತ** ಮಾತು ಸೂಚಿಸಲಾಗಿರುವದು. ಇದು ಸಮಾಸೋಕ್ತಿಯ ವಿರುದ್ಧವಾದ ಅಲಂಕಾರವು.

**ಗಾಳಿಯುಂಡು ತೇಗಿ ತೂಗಿ .**
**ಬಾಳುತಿರುವ ಬಳ್ಳಿ ನೋಡು.**

**೧೪ ವ್ಯಾಜಸ್ತುತಿ** :— ಸ್ತುತಿಯು—ಹೊಗಳಿಕೆಯು—ನಿಂದೆಯನ್ನು ನಿಂದೆಯು ಹೊಗಳಿಕೆಯನ್ನು ಸೂಚಿಸುತ್ತಿದ್ದರೆ ಅದು **'ವ್ಯಾಜಸ್ತುತಿ'** ಯಾಗುವದು.

**ರಾಯರಿಗೆ ಎಳ್ಳಷ್ಟೂ ಸಿಟ್ಟಿಲ್ಲ. ಅದರಂತೆ ಬುದ್ಧಿ, ಅದರಂತೆ ದುಡ್ಡು. ಗಂಗೆ! ಎಂಥ ಹುಚ್ಚಿ ನೀನು? ಪಾಪಿಗಳನ್ನೂ ಸ್ವರ್ಗಕ್ಕೆ ಕರೆದೊಯ್ಯಬೇಕೆ?**

**೧೫ ವಿರೋಧಾಭಾಸ** :— ತೋರಿಕೆಯ ವಿರೋಧದಿಂದ ನಿಜವಾದ ಅವಿರೋಧವು ಸೂಚಿತವಾದರೆ, ಅದು **'ವಿರೋಧಾಭಾಸ'** ವಾಗುವದು.

**ಸಜ್ಜನರ ಹೃದಯಗಳು ವಜ್ರಕ್ಕಿಂತ ಬಿರುಸಾದವುಗಳೂ**
**ಹೂವಿಗಿಂತ ಮಿದುವಾದವುಗಳೂ ಇರುವವು.**

ಇಲ್ಲಿ ಒಂದೇ ವಸ್ತು ಬಿರುಸಾದುದೂ—ಮಿದುವಾದುದೂ ಇರುವದು ಎಂದು ಹೇಳಿದೆ. ಅಂದರೆ ಅವರಲ್ಲಿ ಪರಸ್ಪರ ವಿರುದ್ಧ ಧರ್ಮಗಳಿರುವಂತೆ ಬಣ್ಣಿಸಲಾಗಿದೆ. ಆದರೆ ಅದು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಧರ್ಮಗಳನ್ನು ತಾಳುವದು ಅಸಾಧ್ಯವಿಲ್ಲದುದರಿಂದ ಇಲ್ಲಿ ಹೇಳಿದ ವಿರೋಧವು ತೋರಿಕೆಯ **ವಿರೋಧವು**— ವಿರೋಧದ **ಆಭಾಸವು.** ಆದುದರಿಂದ ಇದು **'ವಿರೋಧಾಭಾಸವು'.**

**೧೬ ಶ್ಲೇಷೆ** :— ಒಂದೇ ಶಬ್ದ ಇಲ್ಲವೆ ಶಬ್ದ ಸಮೂಹದಿಂದ ಅನೇಕಾರ್ಥಗಳನ್ನು ಸೂಚಿಸುವದಕ್ಕೆ **'ಶ್ಲೇಷೆ'** ಎನ್ನುವರು.

**ವಿಮಲ ಮಾನಸವನ್ನು ಪ್ರೀತಿಸುವ ಮರಾಳನಯ್ಯ ನೀನು !**
**ಸತ್ಯವನು ಅರಿದಿಹನು ಸತ್ತ ಹಾಗಿರಬೇಕು.**

**೧೭ ಅತ್ಯುಕ್ತಿ :—** ಮನುಷ್ಯನಲ್ಲಿಯ ಶೌರ್ಯ, ಔದಾರ್ಯ ಇತ್ಯಾದಿ ಗುಣಗಳನ್ನು ಅದ್ಭುತವಾಗಿಯೂ, ಅಸಂಭವ ತೋರುವಂತೆಯೂ ವರ್ಣಿಸಿದರೆ ಅದು '**ಅತ್ಯುಕ್ತಿ**'ಯಾಗುವದು.

**ಈ ಚರ್ಮವನ್ನು ಸುಲಿದು ಪಾದರಕ್ಷೆ ಮಾಡಿ, ತಮ್ಮ ಕಾಲಲ್ಲಿ ಹಾಕಿದರೂ, ತಾವು ಮಾಡಿದ ಉಪಕಾರವು ತೀರದು.**

**೧೮ ಪೌರುಷ :—** ಇದೊಂದು '**ರೂಪಕ**' ದ **ಪ್ರಭೇದ.** ನಿರ್ಜೀವ ವಸ್ತುಗಳನ್ನು ಸಜೀವ ಪುರುಷರೆಂದು ಕಲ್ಪಿಸಿ ಅವುಗಳ ವರ್ಣನೆಯನ್ನು ಮಾಡುವ ರೂಢಿಯು ಇತ್ತಿತ್ತ ಬೆಳೆಯುತಿದೆ. ಆಂಗ್ಲ ಸಾಹಿತ್ಯದ ಸಂಸ್ಕಾರದಿಂದ ಈ ಬಗೆಯ ರೂಢಿಯು ಉಂಟಾಗಿದೆ. ಇದಕ್ಕೆ ಆಂಗ್ಲ ಭಾಷೆಯಲ್ಲಿ Personification ('**ಪುರುಷೀಕರಣ**') ಎಂಬ ಹೆಸರಿದೆ. ಅದನ್ನು ಲಕ್ಷಿಸಿ ಈ ಅಲಂಕಾರಕ್ಕೆ ಮೇಲಿನ ಹೆಸರನ್ನು ಕೊಟ್ಟಿದೆ. ನೋಡಿ.

**ಕುರುಡು ಕಾಂಚಾಣ ಕುಣಿಯುತಲಿತ್ತು**
**ಕಾಲಿಗೆ ಬಿದ್ದವರ ತುಳಿಯುತಲಿತ್ತು.**

ಇಲ್ಲಿ '**ಕಾಂಚಾಣ**' ಅಂದರೆ '**ಬಂಗಾರ**'ವನ್ನು ಒಬ್ಬ ಕುರುಡ ಕ್ರೂರ ಮನುಷ್ಯನೆಂದು ಕಲ್ಪಿಸಿ ಕವಿಯು ಅದರ ಸರಸವಾದ ವರ್ಣನೆಯನ್ನು ಮಾಡಿರುವ. ಇದು '**ಪರಿಣಾಮ**' ವೆಂಬ ಅಲಂಕಾರವನ್ನೂ ಹೋಲುವದು.

## ಅನುಬಂಧ ೮.

### ಸಹಾಯ ವಾಙ್ಮಯ.

| | | | |
|---|---|---|---|
| ೧ | ಈಗಿನ ಕವಿಕಾವ್ಯಸೃಷ್ಟಿ | — | ಪ್ರೊ. ವಿ. ಸೀ. |
| ೨ | ಉಪಾಯ ವೇದಾಂತ | — | ,, ನಾ. ಕಸ್ತೂರಿ |
| ೩ | ಒಡೆದ ಕನ್ನಡಿ | — | ,, ಎನ್. ಎಸ್. ಗದಗಕರ |
| ೪ | ಕನ್ನಡ ಕೈಪಿಡಿ ಸಂ. ೧ (ತಿದ್ದಿದ ಪ್ರತಿ ೧೯೩೬) | .... | ಮೈಸೂರು ವಿಶ್ವವಿದ್ಯಾನಿಲಯ |
| ೫ | ಕನ್ನಡ ಕಿಡಿಗಳು | — | ,, ಸಿ. ಕೃಷ್ಣಶರ್ಮ |
| ೬ | ಕನ್ನಡದ ಸೇವೆ | — | ,, ಶ್ರೀನಿವಾಸರು |
| ೭ | ಕನ್ನಡ ನುಡಿಯ ಹುಟ್ಟು | — | ,, ಶಂ. ಬಾ. ಜೋಶಿ |
| ೮ | ಕರ್ನಾಟಕ ಗತವೈಭವ | — | ,, ಆಲೂರ ವೆಂಕಟರಾಯರು |
| ೯ | ಕರ್ನಾಟಕದ ದರ್ಶನ | — | ವಿವಿಧ ಲೇಖಕರಿಂದ |
| ೧೦ | ಕವಿಕಾವ್ಯ ಮಹೋನ್ನತಿ | — | ಗೋಕಾಕ ವಿನಾಯಕರಾಯರು |
| ೧೧ | ಗದ್ಯ—ಮಾಲೆ | — | ,, ಮಾಳವಾಡ |
| ೧೨ | ,, | — | ,, ಪೂಜಾರ |
| ೧೩ | ಗಾಳಿಗುದುರೆ | — | ,, ಬಿ. ಆರ್. ವಾಡಪ್ಪಿ |
| ೧೪ | ಗ್ನಾನ | — | ,, ಕೋ. ಶಿ. ಕಾರಂತ |
| ೧೫ | ಜನತೆಯ ಸಂಸ್ಕೃತಿ | — | ,, ಶ್ರೀನಿವಾಸರು |
| ೧೬ | ಜೀವನ ಸೌಂದರ್ಯ ಮತ್ತು ಸಾಹಿತ್ಯ | — | ,, ಡಿ. ವ್ಹಿ. ಗುಂಡಪ್ಪನವರು |
| ೧೭ | ತರಂಗ | — | ವಿವಿಧ ಲೇಖಕರಿಂದ |
| ೧೮ | ದೇವದೂತರು | — | ,, ಕಾರಂತ |
| ೧೯ | ಧರ್ಮಸಂಭವ | — | ,, ತಾರಾನಾಥರು |
| ೨೦ | ನಮ್ಮೂರಿನ ರಸಿಕರು | — | ,, ಗೊರೂರ ರಾಮಸ್ವಾಮಿ ಅಯಂಗಾರ |
| ೨೧ | ಪಂಚಾಮೃತ | — | ,, ಕೃಷ್ಣಭಟ್ಟರು |
| ೨೨ | ಬಾಲಪ್ರಪಂಚ | — | ,, ಕಾರಂತರು |
| ೨೩ | ಬೈಲಹಳ್ಳಿಯ ಸರ್ವೆ | — | ,, ಗೊರೂರ ರಾಮಸ್ವಾಮಿ ಅಯಂಗಾರ |

| | | | | |
|---|---|---|---|---|
| ೨೪ | ಮಿಂಚಿದ ಮುಖಿಯೊಂದು | — | ,, | ಪಿ. ಬಿ. ದೇಸಾಯಿ |
| ೨೫ | ಮುಂಗಾಲಪುಟಿಗೆ | — | ,, | ಎಸ್. ಕೆ. ಕುಲಕರ್ಣಿ |
| ೨೬ | ರಾಮಾಚಾರಿಯ ನೆನಪು | — | ,, | ಪಿ. ಟಿ. ನರಸಿಂಹಾಚಾರ್ಯ |
| ೨೭ | ವಿನೋದ ಚಿತ್ರಗಳು | — | | ವಿವಿಧ ಲೇಖಕರಿಂದ |
| ೨೮ | ವಿಮರ್ಶೆ | — | ,, | ಶ್ರೀನಿವಾಸರು |
| ೨೯ | ಸಾಹಿತ್ಯ | — | ,, | ,, |
| ೩೦ | ಸಾಹಿತ್ಯ–ವಿಮರ್ಶೆ | — | ,, | ಬೇಂದ್ರೆ |
| ೩೧ | ಸುಳುವು ಹೊಳವು | — | | ವಿವಿಧ ಲೇಖಕರಿಂದ |
| ೩೨ | ಸ್ವಲ್ಪದರಲ್ಲಿ ಸ್ವಾರಸ್ಯ | — | ,, | ಶ್ರೀರಂಗ |
| ೩೩ | ಹಗಲುಗನಸುಗಳು | — | ,, | ಮೂರ್ತಿರಾವ |
| ೩೪ | ಹರಟೆಗಳು | — | | ವಿವಿಧ ಲೇಖಕರಿಂದ |
| ೩೫ | ಹಳ್ಳಿಯ ಚಿತ್ರಗಳು | — | ,, | ಗೊರೂರ ರಾಮಸ್ವಾಮಿ ಅಯಂಗಾರ |
| ೩೬ | ಹುಚ್ಚು ಬೆಳದಿಂಗಳ ಹೂಬಾಣಗಳು | — | ,, | ಪ. ರಮಾನಂದರು |
| ೩೭ | ಹೊಸಹುಟ್ಟು | — | ,, | ಅ. ನ. ಕೃಷ್ಣರಾಯರು |

## ಮಾಸಪತ್ರಿಕೆಗಳು.

೧ ಜಯಕರ್ನಾಟಕ
೨ ಜಯಂತಿ
೩ ಜೀವನ
೪ ಪ್ರಬುದ್ಧ ಕರ್ನಾಟಕ
೫ ಪ್ರೇಮ—
೬ ಮಹಾವೀರ
೭ ಶಿವಾನುಭವ
೮ ಸಾಹಿತ್ಯ ಪರಿಷತ್ಪತ್ರಿಕೆ
೯ ಸ್ವಧರ್ಮ

ಇವುಗಳ ಹಿಂದಿನ ಹಾಗೂ ಇಂದಿನ ಸಂಚಿಕೆಗಳಲ್ಲಿಯ ನಿಬಂಧಗಳು

# ಅನುಬಂಧ ೯.

## ಪರಿಭಾಷೆ

೧. ಪ್ರಬಂಧ (Composition)

- ೧. ನಿಬಂಧ — Essay
- ೨. ವಾಕ್ಯವೃಂದ — Paragraph
- ೩. ಅಂಶ — Point
- ೪. ಸಾರಸಂಗ್ರಹ — Precis
- ೫. ಸೂಕ್ತಿವಿಸ್ತಾರ — Expansion
- ೬. ಸಂವಾದ — Dialogue
- ೭. ಗುಣಗ್ರಹಣ — Appreciation
- ೮. ರಹಸ್ಯಗ್ರಹಣ — Comprehension

೨. ವಾಕ್ಯಗಳು (Sentences)

- ೧. ಸಾಮಾನ್ಯ — Simple
- ೨. ಮಿಶ್ರ — Complex
- ೩. ಸಂಯುಕ್ತ — Compound
- ೪. ಅಂಗೀಕಾರಾರ್ಥಕ — Affirmative
- ೫. ನಿಷೇಧಾರ್ಥಕ — Negative
- ೬. ಪ್ರಶ್ನಾರ್ಥಕ - Interrogative
- ೭. ವಿಧ್ಯರ್ಥಕ — Imperative
- ೮. ಭಾವಬೋಧಕ — Exclamatory
- ೯. ನಿಶ್ಚಯಾರ್ಥಕ — Assertive
- ೧೦. ಪ್ರಧಾನವಾಕ್ಯ — Principal Sentence
- ೧೧. ಅಧೀನವಾಕ್ಯ — Subordinate Sentence
- ೧೨. ಉಪವಾಕ್ಯ — Clause
- ೧೩. ವಾಕ್ಯವಿಭಜನೆ — Analysis
- ೧೪. ವಾಕ್ಯಸಂಯೋಗ — Synthesis
- ೧೫. ವಾಕ್ಯಪಲ್ಲಟ — Transformation
- ೧೬. ಪ್ರತ್ಯಕ್ಷ ಕಥನ — Direct Report
- ೧೭. ಪರೋಕ್ಷ ಕಥನ - Indirect Report
- ೧೮. ಕೀಲವಾಕ್ಯ — Key Sentence
- ೧೯. ಸಮತೋಲ ವಾಕ್ಯ — Balanced Sentence

## ೩. ಶಬ್ದಗಳು (Words)

೧. ಶಬ್ದಸಮುಚ್ಚಯ — Phrase
೨. ಪೋಳಿಸನುಡಿ — Synonym
೩. ದೇಸಿನುಡಿ — Racy words
೪. ಪಡೆನುಡಿ — Idiom
೫. ನಾಣ್ಣುಡಿ — Proverb
೬. ಜಾಣ್ಣುಡಿ — Gems-words of wisdom

## ೪. ಗುಣಗಳು (Quality)

೧. ಶುದ್ಧತೆ — Correctness
೨. ಸುಲಭತೆ — Simplicity
೩. ಸೌಂದರ್ಯ — Beauty-Charm
೪. ಸಾಮರ್ಥ್ಯ — Force-Vigour
೫. ಕಿರಿಮೆ — Brevity
೬. ಐಕ್ಯ — Unity
೭. ಕ್ರಮ — Order
೮. ಕ್ರಮೋನ್ನತಿ — Climax

---

ಮುಗಿದುದು

# ಅಭಿಪ್ರಾಯಗಳು

---

## ೧ ಮಹನೀಯರೇನೆನ್ನುವರು ?

ಪ್ರಬಂಧ-ಪ್ರಕಾಶದಲ್ಲಿ ಒಂದು ಮೇಲ್ತರದ ಕ್ರಮವೂ, ವಿತರಣೆಯೂ, ಕಾಣುವವು. ನಿಮ್ಮಂತಹ ನುರಿತ ಉಪಾಧ್ಯಾಯರಿಂದಲ್ಲದೆ, ಇಂಥ ಕೆಲಸ ಆಗದು. ನಿಮ್ಮ ಪ್ರಯತ್ನದಿಂದ ವಿದ್ಯಾರ್ಥಿಗಳ ಬರವಣಿಗೆ ಖಂಡಿತವಾಗಿ ಕುದುರುವುದು, ನಯವಾಗುವುದು, ಗುಣ ಸಾಧಿಸುವುದು ಎಂದು ನಂಬಿದ್ದೇನೆ. ಎಲ್ಲ ವಿದ್ಯಾಶಾಲೆಗಳಲ್ಲಿಯೂ, ಪುಸ್ತಕ ಬಳಕೆಗೆ ಬಂದರೆ, ಹೊಸ ಕನ್ನಡ ಗದ್ಯಸ್ವರೂಪ ಕೂಡ ಜನಕ್ಕೆ ತಿಳಿದುಬಂದೀತೆಂದು ಹೇಳಬಲ್ಲೆ. ಏಕೆಂದರೆ ಲಕ್ಷ್ಯವಾಗಿ ತಾವು ಕೊಡುವ ಗದ್ಯ ಖಂಡಗಳು ನಿಜವಾದ ಮೇಲ್ತರದ ಗದ್ಯ ಸಂಚಯವೊಂದನ್ನು ವಿದ್ಯಾರ್ಥಿವರ್ಗಕ್ಕೆ ದೊರಕಿಸಿಕೊಟ್ಟಂತಾಗಿದೆ.

ಪ್ರೊ. ವಿ. ಸೀತಾರಾಮಯ್ಯ, ಎಂ.ಎ.,
Intermediate College, Bangalore.

---

ನಿರೂಪಣೆಯ ಕ್ರಮವು ಶಾಸ್ತ್ರೀಯವೂ ಪ್ರೌಢವೂ ಆಗಿದ್ದರೂ ವಿದ್ಯಾರ್ಥಿಗಳಿಗೆ ಬೇಕಾಗುವ ಸುರಸ ರೀತಿಯು ಇಲ್ಲಿದೆಯೆಂದು ನನಗೆ ಅನಿಸುತ್ತದೆ. ಪರಿಪೂರ್ಣವೂ ಶಾಸ್ತ್ರೀಯವೂ ಆದ ಆಂಗ್ಲ ಭಾಷೆಯ ಪ್ರಬಂಧ ಗ್ರಂಥಗಳ ರೀತಿಯನ್ನು ಅನುಸರಿಸಿ ಗುಣಗ್ರಹಣ, ಸಾರವಿಸ್ತಾರ, ಸಾರಸಂಗ್ರಹ ಮುಂತಾದ ಅನೇಕ ವಿಷಯಗಳನ್ನು ಇಲ್ಲಿ ಅಳವಡಿಸಲಾಗಿದೆ....

ಪ್ರೊ. ಎಸ್. ಎಸ್. ಮಾಳವಾಡ, ಎಂ.ಎ.,
Professor of Kannada,
Karnatak College, Dharwar,

---

ಬರಹದ ರೀತಿ ಸರಳವಾಗಿದೆ; ವಿಷಯ ವಿವೇಚನೆ ಸುಗಮವಾಗಿದೆ; ಉದಾಹರಣೆಗಳು ಉಚಿತವಾಗಿವೆ; ಅಭ್ಯಾಸ ಪಾಠಗಳು ಸಾಕಷ್ಟಿವೆ. ಹೊಸ ಮಾದರಿಯ ಪ್ರಬಂಧ-ಗ್ರಂಥವು ವಿದ್ಯಾರ್ಥಿಗಳಿಗೂ, ಇತರ ಲೇಖಕರಿಗೂ ಅನೇಕ ಬಗೆಯಾಗಿ ಉಪಯೋಗವಾಗುವದೆಂದು ನನ್ನ ಭರವಸೆ.

ಪ್ರೊ. ರಾಮರಾವ ಕುಲಕರ್ಣಿ,
M.A. (Bom), M.Ed. (Leeds)
S. T. College, Belgaum.

---

ಕ್ರಮವಾದ ವಿಷಯ ವಿಭಾಗ, ಸ್ಪಷ್ಟವಾದ ವಸ್ತು ನಿರೂಪಣೆ, ಸುಲಭ ಗ್ರಾಹ್ಯತೆ, ಉದಾಹರಣೆಗಳ ವಿಪುಲತೆ, ವ್ಯಾಕರಣ ಮತ್ತು ಪ್ರಬಂಧ ರಚನೆಯ ಪಾಠಗಳಲ್ಲಿ ಕೂಡ ಒಳ್ಳೆಯ ಸಾಹಿತ್ಯ ಪರಿಚಯವೂ ವ್ಯವಹಾರ ಜ್ಞಾನವೂ ಉಂಟಾಗುವಂತೆ ಯೋಜಿಸಿರುವ ರೀತಿ ಇವು ನಿಮ್ಮ ಪುಸ್ತಕಗಳ ವಿಶಿಷ್ಟ ಗುಣಗಳು. ನಾನು ನೋಡಿರುವ ಪ್ರಬಂಧರಚನೆಯ ಪುಸ್ತಕಗಳಲ್ಲಿ ನಿಮ್ಮ ಪುಸ್ತಕಗಳು ಅತ್ಯುತ್ತಮವೆಂದು ಧಾರಾಳವಾಗಿ ಹೇಳಬಹುದು. ನಿಮ್ಮಂಥ ನುರಿತ ಶಿಕ್ಷಕರು ಸ್ವಾನುಭವದ ಆಧಾರದಿಂದ ರಚಿಸಿರುವ ಈ ಪುಸ್ತಕಗಳನ್ನು ಕನ್ನಡ ನಾಡಿನ ಎಲ್ಲ ಕಡೆಯಲ್ಲೂ ಪಠ್ಯಪುಸ್ತಕವಾಗಿ ನಿಯಮಿಸಿದರೆ ಕನ್ನಡ ಭಾಷೆಯ ಏಕೀಕರಣಕ್ಕೂ ಕನ್ನಡ ನಾಡಿನ ಒಕ್ಕೂಟಕ್ಕೂ ತುಂಬಾ ಸಹಾಯವಾಗುವದೆಂದು ನಿರೀಕ್ಷಿಸಬಹುದು.

ಪ್ರೊ. ಎಲ್. ಗುಂಡಪ್ಪ,
Intermediate College, Bangalore.

ಈ ಗ್ರಂಥವು ಹೈಸ್ಕೂಲಿನ ಎಲ್ಲ ತರಗತಿಗಳಿಗೂ ಪಠ್ಯಪುಸ್ತಕವಾಗಲು **ಅರ್ಹವಾಗಿದೆ.** ಇದು ಬರಿಯ ಅಭಿಪ್ರಾಯವಲ್ಲ. **ಅನುಭವದ ಮಾತು.** ವಿದ್ಯಾರ್ಥಿಗಳು ಇದರಿಂದ ವಿಶೇಷವಾಗಿ ಉಪಯೋಗ ಹೊಂದಿರುವರೆಂದು ಧೈರ್ಯ ಮಾಡಿ ಹೇಳಬಲ್ಲೆ. **ವಿಷಯವಿಭಜನೆ, ವಿಷಯನಿರೂಪಣ ಕ್ರಮ, ಉದಾಹರಣೆಗಳ ಆಯ್ಕೆ ಇವು ಸರ್ವಸಮರ್ಪಕವಾಗಿವೆ.** ವಾಕ್ಯಗಳನ್ನು ಕಟ್ಟುವ ರೀತಿ, ಕ್ರಮ, ಭೇದಗಳು, ಅಲಂಕಾರಗಳು, ಪ್ರಬಂಧದ ಭೇದಗಳು, ಓಲೆಗಳ ವಿವೇಚನೆ ಇವೇ ಮೊದಲಾದ ವಿಷಯಗಳು ಹೈಸ್ಕೂಲ ತರಗತಿಗಳಿಗೆ ಸಾಕಾಗಿವೆ. ಪ್ರತಿಯೊಂದು ವಿಷಯವನ್ನೂ ವಿವರವಾಗಿ ಬಿಡಿಸಿದೆ. ಪ್ರತಿಯೊಂದು ಅಂಶವನ್ನೂ ಹೆಜ್ಜೆ ಹೆಜ್ಜೆಗೂ, ಮೆಟ್ಟಿಲು ಮೆಟ್ಟಿಲಾಗಿ ವಿವರಿಸಿದೆ. ಇಂಗ್ಲೀಷ್ ಪ್ರಬಂಧಗಳ ಗ್ರಂಥಗಳನ್ನು ನೋಡಿದವರು, ಈ ಪುಸ್ತಕವನ್ನು ನೋಡಿ ಸಂತೋಷಿಸುವರು. ಇಂಗ್ಲೀಷ್ ತಿಳಿಯದವರಿಗೆ ಇಲ್ಲಿಯ ವಿಷಯ ನೋಟ ತೀರ ಹೊಸದಾಗಿ ತೋರಿದರೂ ಅಸಮಾಧಾನಕ್ಕೆ ಎಡೆಯಿರುವದಿಲ್ಲ. ನನ್ನ ಅನುಭವದಲ್ಲಿ ಹೈಸ್ಕೂಲು ವಿದ್ಯಾರ್ಥಿಗಳಿಗೆ ಈ ಗ್ರಂಥ ಸಾಕೆನಿಸುತ್ತದೆ. ಮೇಲಾಗಿ ಅನುಬಂಧ ಈ ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸಿದೆ. ಗ್ರಂಥದ ಭಾಷೆಯ ವಿಚಾರ : ಅದು ಅಷ್ಟು ಕ್ಲಿಷ್ಟವಾಗಿಲ್ಲ.

**H. M. Shankarnarayan Rao, M.A.,**
Kannada Assistant,
**D. Banumaiah's High School, Mysore.**

ಆಧುನಿಕ ಶಿಕ್ಷಣ ಪದ್ಧತಿಗಳ ಅಧ್ಯಯನ ಮತ್ತು ಎಷ್ಟೋ ವರ್ಷಗಳ ವರೆಗೆ ಕಲಿಸಿ ದೊರೆತ ಅನುಭವದ ಆಧಾರದ ಮೇಲೆಯೇ ಈ ಪುಸ್ತಕವು ನಿರ್ಮಿತವಾಗಿದೆಂಬುದು ಓದುಗರಿಗೆ ಒಡೆದು ಕಾಣುತ್ತದೆ. ಅಲ್ಲದೆ ಇದರಲ್ಲಿ ಪ್ರಬಂಧದ ತಿರುಳನ್ನು **ತಿಳಿಗನ್ನಡದಲ್ಲಿ ಮನೋಹರವಾಗಿ ಲಲಿತ ಶೈಲಿಯಲ್ಲಿ ಅರುಹಲಾಗಿದೆ.**

ಪ್ರೊ. ಬಿ. ಎಮ್. ಮೀಮಾಂಸಿ, ಬಿ.ಎ., ಬಿ.ಟಿ.
Officiating Lecturer in Education,
S. T. College, Belgaum.

ಸರಸವಾದ ಭಾಷೆಯ, ಬಗೆದೋರಿ, ಸೊಗದೋರಿ ಬರೆಯಲು ಅನುಕೂಲ ಮಾಡಿ ಕೊಡುವ ಈ ಪುಸ್ತಕವು ಪ್ರತಿಯೊಬ್ಬ ವಿದ್ಯಾರ್ಥಿಯ ಕೈಯಲ್ಲಿ ಇರುವುದು ಅತ್ಯವಶ್ಯ.

ಶ್ರೀ. ಹಾರನಹಳ್ಳಿ ಅನಂತರಾಯರು, ಎಂ.ಎ.,
Training School for men, Dharwar.

---

## ೨ ಪತ್ರಿಕೆಗಳೇನನ್ನುವವು ?

**೧. ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ :—**

ಶ್ರೀ. ಮನೋಹರರಾವ ದೇಶಪಾಂಡೆಯವರು ಬರೆದ ಸಾಕಷ್ಟು ವಿಸ್ತಾರವಾದ ಈ ಹೊತ್ತಿಗೆಯು ವಿದ್ಯಾರ್ಥಿಗಳ ಉಪಯೋಗಕ್ಕೆ ಚೆನ್ನಾಗಿದೆ.

**೨. ಜಯಂತಿ, ಧಾರವಾಡ :—**

—(ನಮ್ಮ) ತರುಣ ವಿದ್ಯಾರ್ಥಿಗಳ ಬರೆಯಬೇಕೆನ್ನುವ ಉತ್ಸಾಹದ ದುಬ್ಬು-ಹೊಳೆಯು ಯಾವ ಬಗೆಯ ಸಂಯಮ-ನಿಯಮನಗಳಿಲ್ಲದ ಮೂಲಕ ವ್ಯರ್ಥ ಶಕ್ತಿಪಾತವಾಗಿ ಪರಿಣಮಿಸುತ್ತಲಿದೆ. ಅವರ ಉತ್ಸಾಹವನ್ನು ತಿದ್ದಿ, ದಾರಿ ತೋರಿಸುತ್ತ ಪ್ರಗತಿಪಥದಲ್ಲಿ ಕರೆದೊಯ್ಯಲಿಕ್ಕೆ ಈ ಗ್ರಂಥವು ಖಂಡಿತ ಸಹಕಾರವನ್ನು ನೀಡಬಹುದು........

---

**೩. The Karnatak Journal of Education, Dharwar.**

This is **the first book of its type & ably fulfills the long standing need of Kannada pupils & teachers.** Strenuous efforts have been made by the writer to make the book **interesting, instructive & useful......**

---

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೩ | ೧೮ | ವಿಭಕ್ತಿಯನ್ನು | ವಿಭಕ್ತಿಗಳನ್ನು |
| ೪೮ | ೧೫ | ರಬರುಬತ್ತ | ಬರಬರುತ್ತ |
| ೯೫ | ೯ | ಕೆವಿನ | ಕೆಬಿನ |
| ೧೪೭ | ೩ | ಬೇಡವ | ಬೇಡುವ |
| ೧೪೯ | ೧ | ಜೀನದಲ್ಲಿ | ಜೀವನದಲ್ಲಿ |
| ೧೫೫ | ೧೦ | ಕತಘ್ನರಿಂದ | ಕೃತಘ್ನರಿಂದ |
| ೧೬೫ | ೧೬ | ದೊಂದು | ಇದೊಂದು |
| ೨೧೪ | ೫ | ಜೀವಗಳಂತೆ | ಜೀವಿಗಳಂತೆ |
| ೨೧೪ | ೧೯ | ಭೈರಾಗಿಯು | ಬೈರಾಗಿಯು |
| ೨೧೪ | ೨೦ | ಅಭಿವನದಲ್ಲಿಯೆ | ಅಭಿಮಾನದಲ್ಲಿಯೆ. |
| ೨೧೪ | ೨೩ | ಪ್ರಶ್ನಗಳ | ಪ್ರಶ್ನಗಳು |
| ೨೧೪ | ೨೭ | ತರವದೆಂತು | ತರುವದೆಂತು. |
| ೨೧೫ | ೧೭ | ಸಖಶಾಂತಿಗಳನ್ನು | ಸುಖಶಾಂತಿಗಳನ್ನು |
| ೨೪೫ | ೨೦ | ಇದೀಗ | ಇದಾಗ |
| ೨೫೭ | ೨೦ | ಹಾಲಿಂದ | ಹಾಲಿಗಿಂತ |
| ೨೮೧ | ೧೬ | ಇರುದು | ಇರುವದು |